ಜನವರಿ 2000 ರೂ. 10

ಬಿಸಿಲ

# ಬಿಸಿಲ ಹನಿ ಹನಿ



'ವಿಶ್ವ ಸುಂದರಿ' ಸುತ್ತ ಮುತ್ತ



ಸೋತುಗೆದ್ದ ವಾಜಪೇಯಿ



ಹೊಸ ಪಾತ್ರದಲ್ಲಿ ಕಪಿಲ್



ನಾರಾಯಣ ಮೂರ್ತಿ
ವರ್ಷದ ವ್ಯಕ್ತಿ

## ದಕ್ಷಿಣ ಕನ್ನಡ ಜನ

ಏಕೆ ಹೀಗೆ ? ಏಕೆ ಹೀಗೆ ?

ಕೃಷ್ಣಾ : ರೈತರನ್ನು ವಂಚಿಸಿದ ರಾಜಕಾರಣಿಗಳು

# ಬಿಸಿಲು

ಜನೆವರಿ 2000 ಸಂಪುಟ 3 ಸಂಚಿಕೆ 7

■ ನಮ್ಮೆದುರಿನ ಅಡ್ಡಿ, ಆತಂಕಗಳು ತಮ್ಮಿಂದ ತಾವೇ ಮಾಯವಾಗಿಬಿಡುವುದಿಲ್ಲ ಎಂಬ ಅರಿವಿಂದಲೇ ಮನುಷ್ಯನಲ್ಲಿ ವಿನಯ ಮೂಡುತ್ತದೆ.

*ಸಾರಾ ಫರ್ಗ್ಯೂಸನ್*

■ ಪ್ರತಿಯೊಬ್ಬ ಗೆಳೆಯನೂ ಒಂದು ಪ್ರತ್ಯೇಕ ಜಗತ್ತು. ಆತ ಬರುವವರೆಗೂ ಅಂಥದೊಂದು ಜಗತ್ತು ಇರಬಹುದೆಂಬ ಕಲ್ಪನೆಯೂ ಇರದು.

*ಅನಾಯ್ಸ್ ನಿನ್*

■ ಮಕ್ಕಳು ಮಾತು ಕೇಳುತ್ತಿಲ್ಲ ಎಂಬ ಆತಂಕ ಬೇಡ. ಸದಾ ಅವರು ನಮ್ಮನ್ನು ಕಣ್ಣಿಟ್ಟು ಗಮನಿಸುತ್ತಾರೆ ಎಂಬ ಅರಿವು ಇದ್ದರೆ ಸಾಕು.

*ರಾಬರ್ಟ್ ಫುಲ್‌ಗಮ್*

■ ತನ್ನ ಮೇಲೇ ಗೆಲುವು ಸಾಧಿಸುವುದು ಎಲ್ಲಕ್ಕಿಂತ ದೊಡ್ಡ ಸಾಧನೆ. ಇದು ಗೊತ್ತಿದ್ದವರಿಗೆ ಸೋಲೆಂಬುದೇ ಇರದು.

*ಎ. ಜೆ. ಕ್ರಾನಿನ್*

■ ಮದುವೆಗೆ ಮೊದಲು ಮಕ್ಕಳನ್ನು ಹೇಗೆ ಸಾಕಬೇಕೆಂಬ ಬಗ್ಗೆ ನನ್ನ ಹತ್ತಿರ ಆರು ಸಿದ್ಧಾಂತಗಳಿದ್ದವು. ಈಗ ಆರು ಮಕ್ಕಳಿವೆ, ಒಂದೂ ಸಿದ್ಧಾಂತವಿಲ್ಲ.

*ಲಾರ್ಡ್ ರೊಚೆಸ್ಟರ್*

■ ದಡ್ಡ ಮಕ್ಕಳು ಮನೆ ಮುರಿಯುವುದಿಲ್ಲ; ಬುದ್ಧಿವಂತರೇ ಹಾಗೆ ಮಾಡುವುದು.

*ಜೇನಿ ಗಾದೆ*


ಸಂಪಾದಕ
**ಚಂದ್ರಕಾಂತ ವಡ್ಡು**

ಕಾರ್ಯನಿರ್ವಾಹಕ ಸಂಪಾದಕ
**ಎಂ.ಎಲ್. ದೇಶಿಕರ್**

ಸಹಕಾರ
**ಲಿಂಗರಾಜು**

ಕಲೆ
**ಚಂದ್ರಶೇಖರ ಗುಬ್ಬಿ**
**ವಸಂತ ಹೊಸಬೆಟ್ಟು**

ವಿಳಾಸ
**ಬಿಸಿಲ ಬದುಕು ಮಾಸ ಪತ್ರಿಕೆ**
ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ: 7951
ಬಸವೇಶ್ವರ ನಗರ, ಬೆಂಗಳೂರು - 560 079
ದೂರವಾಣಿ: 3227810

Printed, Published and Owned by Chandrakanta Vaddu, 473, I Cross, I Block, III Stage, Near Water Tank Bus Stop, Basaveshwaranagar, Bangalore - 560 079. Tel : 080 3227810 Pager:9622 738638 Mobile:98440 87433 Editor : Chandrakanta Vaddu


## ಸ್ನೇಹ

ಮನುಷ್ಯ ಸಂಬಂಧಗಳಲ್ಲೆಲ್ಲಾ ಸ್ನೇಹ ವಿಶಿಷ್ಟವಾದದ್ದು. ಪರಿಚಿತರು ನಿತ್ಯ ಸಿಗುವಾಗ ಮುಗುಳ್ನಕ್ಕು ಮರೆಯಾಗುವವರು ಒಂದು ಬಗೆ. ಅಲ್ಲಿ ಆತ್ಮೀಯತೆಯ, ಹೃದಯ ತೇವಗೊಳಿಸುವ ಭಾವವಿಲ್ಲ. ಸ್ನೇಹದಲ್ಲಿ ಪ್ರೀತಿಯೊಂದೇ ಪ್ರೇರಕ ಶಕ್ತಿ.

ಮದುವೆಯ ಬೆಸುಗೆಯ ಕ್ಷಣದಿಂದಲೇ ಹುಟ್ಟುವ ಮತ್ಸರ, ಇದು ನನ್ನದೇ ವಸ್ತು ಎಂಬಂಥ ವಿಕೃತ ಅಧಿಕಾರಗಳಿಗೆ ಸ್ನೇಹದಲ್ಲಿ ನೆಲೆಯೇ ಇಲ್ಲ.

ತಂದೆ ಮಕ್ಕಳ ಸಂಬಂಧದಲ್ಲಿ ಟೀಕೆ ಇರಬಹುದು. ಮನಸು ಕುಕ್ಕುವ ತಿರಸ್ಕಾರವೂ ಇರಬಹುದು. ಹಾಗೆಂದು ಕೊಡವಿಬಿಡಲು ಸಾಧ್ಯವಿಲ್ಲ. ಸಮಾಜ ಎಂಬುದೊಂದಿದೆ. ಅದಕ್ಕೆ ಉತ್ತರ ಹೇಳಬೇಕಾಗುತ್ತದೆ. ನ್ಯಾಯಾಲಯ ಕರೆದು ಬುದ್ಧಿ ಹೇಳುತ್ತದೆ.

ಸ್ನೇಹಕ್ಕೆ ಕಾನೂನು ಬಂಧನವಿಲ್ಲ. ವ್ಯವಹಾರದ ಕರಾರುಗಳ ಕಟ್ಟಿಲ್ಲ. ಮದುವೆ ಆಗಲೂ ಕಾನೂನು ಒಪ್ಪಬೇಕು. ಅದರಿಂದ ಬಿಡಿಸಿಕೊಳ್ಳಲೂ ಕಾನೂನು ಇದೆ. ಸ್ನೇಹ ಬೆಸೆಯಲು ಕಾನೂನಿನ ಕಟ್ಟುಗಳಿಲ್ಲ. ಕಳಚಿಕೊಳ್ಳಬೇಕಾದರೆ ಕರಾರಿನ ತೊಡಕುಗಳೂ ಇಲ್ಲ. ಅದು ಮುಕ್ತವಾಗಿ ಕೊಡಬಹುದಾದದ್ದು. ಹಾಗೇ ಪಡೆಯುವಂಥದೂ ಕೂಡ.

■ ಸ್ಟೀಫನ್ ಆಂಬ್ರೋಸ್

## ಸರಿ ಪ್ರೇರಣೆ

ನಾನಾಗ ಪದವಿ ಮುಗಿಸಿದ್ದೆ. ಹೇಗಾದರೂ ಒಂದು ಕೆಲಸ ಸಂಪಾದಿಸಬೇಕಿತ್ತು. ಅಂಥ ಸ್ಥಿತಿಯಲ್ಲಿ ಇದ್ದೆ. ಕಂಡ ಕೆಲಸಗಳಿಗೆಲ್ಲ ಅರ್ಜಿ ಹಾಕುತ್ತಿದ್ದೆ. ಫಿಸಿಕ್ಸ್ ಓದಿದ್ದ ನಾನು ಕ್ಯಾಡ್ (ಕಂಪ್ಯೂಟರ್ ಎಡೆಡ್ ಡಿಸೈನಿಂಗ್) ಇನ್‌ಸ್ಟ್ರಕ್ಟರ್ ಹುದ್ದೆಗೂ ಅದೇ ಕೆಟ್ಟ ಧೈರ್ಯದಿಂದ ಅರ್ಜಿ ಹಾಕಿದ್ದೆ.

ಅದಕ್ಕೆ ಬೇಕಾದ ಅರ್ಹತೆ ಇಲ್ಲದೆ, ಅದರ ಅಆಇಈ ಕೂಡ ತಿಳಿಯದೇ ಇಂಥದೊಂದು ದುಸ್ಸಾಹಸ ಮಾಡಿದ್ದೆ. ಸಾಲದೆಂಬಂತೆ ಕಂಪೆನಿಯವರನ್ನು ಕಂಡು, ಕೆಲಸ ಕೊಟ್ಟರೆ ಒಂದೇ ವಾರದಲ್ಲಿ CAD ಕಲಿಯುತ್ತೇನೆಂದೂ, ತಿಂಗಳೊಳಗೆ ಅದರಲ್ಲಿ ಪಾಠ ಹೇಳುವ ಸಾಮರ್ಥ್ಯ ಖಂಡಿತ ಪಡೆಯುತ್ತೇನೆಂದೂ ನಂಬಿಕೆಯಾಗುವಂತೆ ವಿವರಿಸಿದೆ.

ಕಂಪೆನಿಯವರು ನನ್ನನ್ನು ಆರಿಸಿದರು. ಆ ಹುದ್ದೆಗಲ್ಲ. ಅವರಿಗೆ ಮಾರ್ಕೆಟಿಂಗ್ ನೋಡಿಕೊಳ್ಳುವ ಮನುಷ್ಯನೊಬ್ಬ ಬೇಕಿತ್ತು. ಅದಕ್ಕಾಗಿ ನನ್ನ ಆರಿಸಿಕೊಂಡರು. ನನಗೇ ಆಶ್ಚರ್ಯವೆನ್ನಿಸಿ, ಕಂಪೆನಿಯ ಹಿರಿಯರನ್ನು ಕೇಳಿದೆ :

''ನನ್ನಾಕೆ ಆರಿಸಿದಿರಿ?''

''ನಿನ್ನ ಹೃದಯದಲ್ಲೊಂದು ತುಡಿತವಿತ್ತು''

ನಕ್ಕು ಹೇಳಿದ್ದರು.

ಯಾವುದೇ ಕೆಲಸಕ್ಕೆ ಆಗಲಿ ಎದೆಯೊಳಗೊಂದು ತುಡಿತ ಇದ್ದ ಹಾಗೆ ಕನಸು, ನಿರ್ಧಾರ, ಮಾಡಿಯೇ ತೀರುವೆ ಎಂಬ ಛಲ, ಶಿಸ್ತು ಇರಬೇಕು.

ನಾವು ಯಾವಾಗಲೂ ತೊಂದರೆಗಳು ಹೊರಗಿನಿಂದ ಎದುರಾಗುತ್ತವೆ ಅಂದುಕೊಳ್ಳುತ್ತೇವೆ. ಬಹಳಷ್ಟು ಸಲ ನಮ್ಮೊಳಗಿನ ಎಷ್ಟೋ ಸಂಗತಿಗಳೇ ನಮಗೆ ಅಡ್ಡಿ ಆಗಿರುತ್ತವೆ.

ಬದುಕಿನ ಯಾವುದೋ ಕಹಿ ಘಟನೆ ನೆನಪಿಸಿಕೊಳ್ಳಿ, ನಾನು ಖಂಡಿತ ಇದನ್ನು ಸರಿಯಾಗಿ ನಿರ್ವಹಿಸುವುದು ಸಾಧ್ಯ ಇತ್ತಲ್ಲವೇ? ಎಂದು ಗಂಭೀರವಾಗಿ ಚಿಂತಿಸಿ ನೋಡಿ. ನಿಮ್ಮ ಉತ್ತರ ಖಂಡಿತವಾಗಿಯೂ 'ಹೌದು' ಎಂದಾಗಿರುತ್ತದೆ.

■ ಎವಿಎಸ್, ಚೆನ್ನೈ




# ಟಪಾಲು

**ಸಮಯೋಚಿತ**

ಡಿಸೆಂಬರ್ ತಿಂಗಳ 'ಬಿಸಿಲ ಬದುಕು' ಸಂಚಿಕೆಯಲ್ಲಿ ಸಾಯಿ ಬಾಬಾನ ಕುರಿತಾದ ಕೆ. ರಾಮದಾಸ್‌ರ ಲೇಖನ ಸಮಯೋಚಿತವಾಗಿತ್ತು. ಹಾಗೆಯೇ ಆತನ ತಂತ್ರಗಳನ್ನು ಪ್ರಶ್ನಿಸಿ ನರೇಂದ್ರ ನಾಯಕ್‌ರವರು ನೀಡಿರುವ ಬಹಿರಂಗ ಸವಾಲು ಬಾಬಾ ಮುಟ್ಟಿ ನೋಡಿಕೊಳ್ಳುವಂತೆ ಇತ್ತು. ನಮ್ಮ ಸಮಾಜವಾದಿ ಹಿನ್ನೆಲೆಯ ಕಂಪ್ಯೂಟರ್ ಕೃಷ್ಣ ನಾಯಕ್‌ರವರ ಬಹಿರಂಗ ಪತ್ರವನ್ನು ಒಮ್ಮೆಯಾದರೂ ಓದಲಿ. ಕಂಪ್ಯೂಟರ್ ಹೊತ್ತು ಕುಣಿಯುವ ಕೃಷ್ಣ ಢೋಂಗಿ ಬಾಬಾನ ಕಾಲಿಗೆರಗುವುದು ಸಾಮಾಜಿಕ, ವೈಜ್ಞಾನಿಕ ವಿಪರ್ಯಾಸವಲ್ಲವೇ?

ಈರಪ್ಪ ಎಂ. ಕಂಬಳಿ ಅವರ ಪ್ರಬಂಧ 'ಶಬರಿಮಲೈ ರಿಮೋಟು' ಇನ್ನೊಂದು ಚಾಟಿ ಏಟಿನಂತಿತ್ತು. ಇವರೆಲ್ಲ ಇಪ್ಪತ್ತೊಂದನೆ ಶತಮಾನಕ್ಕೆ ಕಾಲು ಇಡುತ್ತಿರುವ ಶ್ರೇಷ್ಠ ಮಾನವರು! ಕೇವಲ ಮನರಂಜನೆಯನ್ನೇ ಮುಖ್ಯವಾಗಿರಿಸಿಕೊಂಡು ಹೊರಡುತ್ತಿರುವ ಇತರೆ ಮಾಸಪತ್ರಿಕೆಗಳಿಗಿಂತ ನಿಮ್ಮ ಬದುಕು ಅರ್ಥಪೂರ್ಣ. ನಮ್ಮ ಬದುಕಿನ ಎಲ್ಲಾ ಮಗ್ಗಲುಗಳನ್ನು ಆರೋಗ್ಯವಾಗಿಡುವ ವೈಚಾರಿಕ ನಿಲುವುಗಳಿಂದ ಕೂಡಿರುವುದು ನಿಮ್ಮ ವೈಚಾರಿಕ ಪ್ರಜ್ಞೆಗೆ ಸಾಕ್ಷಿ.

*-ಮಂಜುನಾಥ್ ಗೀತಾ, ತಗಡೂರು.*

**ಚಂದಾ ಸ್ವೀಕರಿಸಿ**

ಈ ತಿಂಗಳ 'ಬಿಸಿಲ ಬದುಕು' ಮಾಸ ಪತ್ರಿಕೆ ಓದಿದೆ. ಸಾಯಿಬಾಬಾನ ಅವೈಜ್ಞಾನಿಕ ಮಂತ್ರಕ್ಕೆ ಬಲಿಯಾದ ಮುಖ್ಯಮಂತ್ರಿ ಶ್ರೀ ಎಸ್.ಎಂ.ಕೃಷ್ಣರವರ ಬಗ್ಗೆ ಬರೆದದ್ದು ಪ್ರಭಾವಯುತವಾಗಿದೆ. ಧನ್ಯವಾದಗಳು. ಪತ್ರಿಕೆಯ ಚಂದಾ ಕಳಿಸಿದ್ದೇನೆ.

*- ಬಿ.ಎಂ. ಮೆಣಸಿನಕಾಯಿ*
ಮಾಜಿ ಸಂಸದರು, ಧಾರವಾಡ ದಕ್ಷಿಣ.

**ಬಾಬಾಗೆ ಸವಾಲು**

ಡಿಸೆಂಬರ್ ತಿಂಗಳ 'ಬಿಸಿಲ ಬದುಕು' ಓದಿ ತಲೆ ಬಿಸಿ ಏರಿಯೆ ಈ ಕಾಗದ ಗೀಚಿದ್ದೇನೆ. ಬೂದಿ ಬಾಬಾ ಶೂನ್ಯದಿಂದ ಉಂಗುರ ಸೃಷ್ಟಿ ಮಾಡಿ ಉನ್ನತ ಹುದ್ದೆಯಲ್ಲಿರುವ ಮು.ಮಂ.ಕೃಷ್ಣರವರಿಗೆ ನೀಡಿದ್ದು; ಅವರು ಸಾರ್ವಜನಿಕವಾಗಿ ಅವರ ಕಾಲಿಗೆರಗಿದ್ದು ಎಲ್ಲವೂ ಸೋಜಿಗ ಹಾಗೂ ಆಶ್ಚರ್ಯ ಎನಿಸುತ್ತದೆ. ನರೇಂದ್ರ ನಾಯಕರ ಲೇಖನ ಹಾಗೂ ಎಚ್. ನರಸಿಂಹಯ್ಯ ಅವರ ಪತ್ರಗಳು ಜನರು ಹಾಗೂ ಇಂತಹ ಬೂದಿ ಬಾಬಾರವರು ಎಚ್ಚರಾಗಲು ಮಾರ್ಗದರ್ಶಿಯಾಗಿವೆ. ಬರೀ ಮಂತ್ರದಿಂದ, ಶೂನ್ಯದಿಂದ ಬಂಗಾರ ಸೃಷ್ಟಿಸುವ ಇಂತಹ ಸ್ವಾಮಿಗಳನ್ನಿಟ್ಟುಕೊಂಡು ಭಾರತ ಅದೇಕೇ ಬಡತನ ರಾಷ್ಟ್ರ ಪಟ್ಟಿಯಲ್ಲಿದೆಯೋ? ಬರೀ ಶೂನ್ಯದಿಂದ ಬಂಗಾರ ಲಭಿಸುತ್ತಿದ್ದರೆ ಬಂಗಾರ ಗಣಿಗಳ ಅವಶ್ಯಕತೆ ಯಾದರೂ ಯಾಕೆ ಬೇಕು? ಅಂತಹ ಶಕ್ತಿ ಅವರಲ್ಲಿದ್ದರೆ ರಾತ್ರಿ ಕತ್ತಲಲ್ಲಿ ತಲೆಯಲ್ಲಿರುವ ಬಿಳಿ ಕೂದಲು ಕೀಳಬೇಕು. ನೀರಿನ ಮೇಲೆ ನಡೆದು ತೋರಿಸಬೇಕು. ಇವೆರಡು ಮಾಡಿ ತೋರಿಸಿದರೆ ನನ್ನ ಜೀವವೇ ಅವರಿಗೆ ನೀಡುತ್ತೇನೆ.

*- ಕುಪೇಂದ್ರ ಎಸ್. ವಠಾರ್, ಯಾದಗಿರಿ.*

**ಭಕ್ತರಿಗೆ ನೋವಾಗಿದೆ**

ನಿಮ್ಮ 'ಬಿಸಿಲ ಬದುಕು' ಮಾಸಪತ್ರಿಕೆ ತುಂಬಾ ಚೆನ್ನಾಗಿ ಮೂಡಿ ಬರುತ್ತಿದೆ. ನಾವು ನಿಮ್ಮ ಪತ್ರಿಕೆಯ ಅಭಿಮಾನಿಗಳು. ಈ ತಿಂಗಳಿನ ಪತ್ರಿಕೆಯಲ್ಲಿ, ಈರಪ್ಪ ಎಂ.ಕಂಬಳಿ ಅವರು ಬರೆದ ಲೇಖನ ಕುರಿತು ನಾವು ಪತ್ರ ಬರೆಯುತ್ತಿರುವುದು. ಅವರು ಶಬರಿಮಲೈ ಸ್ವಾಮಿ ಅಯ್ಯಪ್ಪನ ಭಕ್ತರ ಬಗ್ಗೆ ಲೇಖನ ಬರೆದಿದ್ದಾರೆ. ಈ ಲೇಖನವು ನಮಗೆ ತುಂಬಾ ನೋವನ್ನು ಉಂಟು ಮಾಡಿದೆ. ಏಕೆಂದರೆ ಅಯ್ಯಪ್ಪನ ಭಕ್ತರಿಗೆ ಅಪಹಾಸ್ಯ ಮಾಡಲಾಗಿದೆ. ಈ ಅಯ್ಯಪ್ಪ ಸ್ವಾಮಿಯ ಮಹಿಮೆ, ಮಾಲೆ ಧರಿಸಿದ ಭಕ್ತನಿಗೆ ಮಾತ್ರ ಗೊತ್ತು. ಆದ್ದರಿಂದ ಮಾನ್ಯ ಸಂಪಾದಕರು ಇಂಥ ಲೇಖನಗಳನ್ನು ಮುಂದೆ ಪತ್ರಿಕೆಯಲ್ಲಿ ಪ್ರಕಟಿಸಬಾರದು. ಈ ಅಯ್ಯಪ್ಪನ ವ್ರತದಲ್ಲಿ ತುಂಬಾ ಶಕ್ತಿ ಇದೆ. ನಾವು ಈ ಮಾಲೆಯನ್ನು ಧರಿಸಿದ್ದೇವೆ. ಈ ವ್ರತವನ್ನು ಜಾತಿ ಭೇದವಿಲ್ಲದೆ ಎಲ್ಲರೂ ಒಂದಾಗಿ ಮಾಡುತ್ತೇವೆ.

ಈ ಮಾಲೆಯನ್ನು ಧರಿಸಿದ ನಮ್ಮ ಗ್ರಾಮದಲ್ಲಿ ಅನೇಕರು ಸುಧಾರಿಸಿದ್ದಾರೆ. ಎಲ್ಲ ಚಟವನ್ನು ಬಿಟ್ಟು ಸುಖ ಶಾಂತಿಯಿಂದ ಇದ್ದಾರೆ.

*-ಚಿದಾನಂದ ಎಚ್., ಗಲಗಲಿ.*

**ವಿಷಾದ**

ಡಿಸೆಂಬರ್ 1999ರ 'ಬದುಕು' ಸಂಚಿಕೆಯಲ್ಲಿ ಪ್ರಕಟವಾದ ಗಾಯಕ ಅರ್ಚನಾ ಉಡುಪ ಅವರನ್ನು ಕುರಿತ ಸಂದರ್ಶನ-ಲೇಖನ ಬರೆದವರು ಚಿತ್ರಶೇಖರ ಕಂಠಿ. ಪ್ರಮಾದ ವಶಾತ್ ಲೇಖನದೊಂದಿಗೆ ಮಹಿಪಾಲ ರೆಡ್ಡಿ ಅವರ ಹೆಸರು ಪ್ರಕಟವಾಗಿದ್ದಕ್ಕೆ ವಿಷಾದಿಸುತ್ತೇವೆ.

*-ಸಂ.*

**ಮಾದರಿ ಪತ್ರಿಕೆ**

ಡಿಸೆಂಬರ್ ತಿಂಗಳ 'ಬಿಸಿಲ ಬದುಕು' ನೋಡಿದೆ. ನಿಜವಾದ ಅರ್ಥದಲ್ಲಿ ಇಪ್ಪತ್ತೊಂದನೆಯ ಶತಮಾನಕ್ಕೆ ಕಾಲಿಡುತ್ತಿರುವ ಪತ್ರಿಕೆ ಎನಿಸಿತು. ಮುಖ್ಯವಾಗಿ ವೈಜ್ಞಾನಿಕ ಮನೋವೃತ್ತಿ, ಪ್ರಗತಿಪರ ಚಿಂತನೆ ಜೊತೆಗೆ ನಿರ್ಭಿಡೆಯಿಂದ ಕೂಡಿದ ಲೇಖನಗಳು ನನ್ನನ್ನು ಪ್ರಭಾವಿತನನ್ನಾಗಿಸಿದವು.

ಬೇರೆ ಪತ್ರಿಕೆಗಳಿಗೂ 'ಬಿಸಿಲ ಬದುಕು' ಪತ್ರಿಕೆಗೂ ಎದ್ದು ಕಾಣುವ ಮುಖ್ಯ ವ್ಯತ್ಯಾಸವೆಂದರೆ ಬದುಕು - ಬರಹ ಒಂದೇ ದಿಕ್ಕಿನಲ್ಲಿ ಸಾಗಿರುತ್ತದೆ. ಮಾಸ ಭವಿಷ್ಯ ಕಾಲಂ ಇಲ್ಲದ ಪತ್ರಿಕೆ ನೋಡಿ ಸಂತಸವಾಯಿತು. ಪತ್ರಿಕಾ ರಂಗದಲ್ಲಿ ಹೊಸ ಹೆಜ್ಜೆ ಇಡುತ್ತಿರುವ ನಿಮಗೆ ನನ್ನ ಹೊಸ ವರುಷದ ಹಾರ್ದಿಕ ಶುಭಾಶಯಗಳು.

*-ಕ.ಬ. ವೀರಣ್ಣ ಕಣ್ಣಾಗಲ,*
*ಹೊನ್ನಾವರ.*

ಡಿಸೆಂಬರ್ 99ರ 'ಬಿಸಿಲ ಬದುಕು' ಸಂಚಿಕೆಯಲ್ಲಿ ಹಲವಾರು ಲೇಖನಗಳು ನನಗೆ ಹಿಡಿಸಿವೆ. ಅದರಲ್ಲೂ ವಿಶೇಷವಾಗಿ ಬೂದಿ, ಬಂಗಾರ ಮತ್ತು ಬಾಬಾ ಲೇಖನ ತುಂಬಾ ಮಾರ್ಮಿಕವಾಗಿದೆ. ಇಂಥ ಬಂಡಲ್ ಅಪಖ್ಯಾತಿ ಬಾಬಾಗಳ ಹಿಂದೆ ಹೊಗಳು ಭಟ್ಟರು ಕಾಲಿಗೆ ಬಿದ್ದು ಡೊಗ್ಗಿ ಸಲಾಮು ಹೊಡೆಯುವುದು ಶೋಚನೀಯ ಸಂಗತಿ. 'ಬದುಕು' ಇಂಥ ದಿಟ್ಟ ಲೇಖನಗಳನ್ನು ಪ್ರಕಟಿಸಿ ತನ್ನ ಘನತೆಯನ್ನು ಇನ್ನಷ್ಟು ಹೆಚ್ಚಿಸಿಕೊಂಡಿದೆ.

*-ಬಸವರಾಜ ಚ. ಕರಕರಡ್ಡಿ, ಧಾರವಾಡ.*

# ಸಾಯಿಬಾಬಾ ಭಕ್ತರ ಎರಡು ಪತ್ರಗಳು

ಪ್ರಿಯ ಸಂಪಾದಕರಿಗೆ ವಂದನೆಗಳು,

ಡಿಸೆಂಬರ್ 99ರ 'ಬದುಕು' ಪತ್ರಿಕೆಯಲ್ಲಿ ಬಂದ ಕೋವೂರರ ಹೇಳಿಕೆ ಹಾಗೂ ನಾಯಕರ ಲೇಖನಗಳನ್ನು ನೋಡಿದೆ. ಅದರಲ್ಲಿ ಪವಾಡಗಳ ಬಗ್ಗೆ ಯಾವುದೇ ಸಂಶೋಧನಾ ಕ್ರಿಯೆ ಕಾಣುವುದಿಲ್ಲ. ಬದಲಾಗಿ ಒಬ್ಬನ ಹತಾಶ, ಉದ್ರೇಕದ, ಆಕ್ರೋಶದ ಭಾಷೆ ಕ್ರಿಯೆ ಕಾಣುವುದು. ಶ್ರೀ ಸತ್ಯಸಾಯಿ ಬಾಬಾರವರು ಇವರಿಗೆ ಶೋಧನೆಗೆ ಅವಕಾಶ ಕೊಡಲಿಲ್ಲ ಎಂಬ ಕಾರಣಕ್ಕೆ ಕ್ರೋಧೋನ್ಮಾದದಲ್ಲಿ ಅವರನ್ನು ಕೊಲೆ ಮಾಡುವ ಮಟ್ಟಕ್ಕೆ ನಾಯಕರ ಭಾಷೆ ಹೋಗಿದೆ. ಅದು ಒಬ್ಬ ಸಂಶೋಧಕನ ಅಥವಾ ಸತ್ಯಾನ್ವೇಷಕನ ಭಾಷೆಯಲ್ಲ. ಒಬ್ಬ ಪೆನ್ಯಾಟಿಕ್ ಅಥವಾ ಬ್ಲ್ಯಾಕ್ ಮೇಲ್ ಮಾಡುವವರು ಉಪಯೋಗಿಸುವ ಭಾಷೆ. ಅದರಲ್ಲಿ ಸಂಪಾದಕರಾದ ನೀವೂ ಭಾಗಿಯಾಗಿದ್ದು ವಿಷಾದ.

ಸತ್ಯಾಸತ್ಯತೆಯನ್ನು ಕಂಡುಹಿಡಿಯುವ ಮೊದಲೇ ಇವರು ತೀರ್ಮಾನ ತೆಗೆದುಕೊಂಡಿದ್ದಾರೆ. ತೀರ್ಮಾನ ತೆಗೆದುಕೊಂಡವರು ನಿಂದೆ, ಹತ್ಯೆಯ (ತೇಜೋವಧೆ) ಭಾಷೆ ಉಪಯೋಗಿಸಿದ್ದಾರೆ.

ಸತ್ಯಾಸತ್ಯತೆಯ ಪರೀಕ್ಷೆಗೆ ಸತ್ಯ ಸಾಯಿಬಾಬಾ ಒಳಪಡಲು ಒಪ್ಪಲಿಲ್ಲ ವೆಂಬ ಕ್ರೋಧ ಇವರನ್ನು ಹತಾಶರನ್ನಾಗಿ ಮಾಡಿ ನಾಯಕರು ಸಂಯಮ ಕಳೆದುಕೊಳ್ಳುವಂತೆ ಆದದ್ದು ಇವರ ದೌರ್ಬಲ್ಯ. ಇವರು ಭಾವೋದ್ವೇಗಕ್ಕೆ ಒಳಗಾಗಿ ಪೂರ್ವಾಗ್ರಹ (dogma) ದಿಂದ ಸತ್ಯವನ್ನು ಹುಡುಕುವುದು ಅಸಾಧ್ಯ ಮತ್ತು ಆ ಕೆಲಸಕ್ಕೆ ಯೋಗ್ಯತೆ ಇಲ್ಲದವರೂ ಆಗುತ್ತಾರೆ. ಬಾಬಾ ಅವರು ಈ ಬುದ್ಧಿವಂತ ದೊಡ್ಡ ಮನುಷ್ಯರ ಎದುರು ಪರೀಕ್ಷೆಗೆ ಒಳಪಡದಿದ್ದಲ್ಲಿ, ಅದಕ್ಕೆ ಬೇರೆ ಮಾರ್ಗಗಳನ್ನು ಹುಡುಕಬೇಕು. ತಲೆ ಒಡೆಯುವ ಕೆಲಸ ಸಲ್ಲದು.

ನನಗೆ ತಿಳಿದಂತೆ ಈ ವಿವಾದಕ್ಕೆ ಎರಡು ಮುಖಗಳಿವೆ. ಒಂದು ಬಾಬಾರು ಚಮತ್ಕಾರ ಮಾಡುತ್ತಾರೆಂದು ಭಾವಿಸಿದರೆ, ಅವರು ಇವರ ಪರೀಕ್ಷೆಗೆ ಒಪ್ಪಲಾರರು. ಆದರೆ ಸತ್ಯ ತಾನಾಗಿ ಒಂದು ದಿನ ಹೊರ ಬೀಳುತ್ತದೆ. ಇನ್ನೊಂದು ಮುಖ, ಅವರು ಸಂಕಲ್ಪ ಶಕ್ತಿಯಿಂದ ವಸ್ತುವನ್ನು ಸೃಷ್ಟಿಸಬಲ್ಲ ಸಿದ್ಧಪುರುಷರು ಎಂದು ಭಾವಿಸಿದರೆ; ನಾಯಕರು ಅಥವಾ ಎಚ್.ಎನ್.ರಂಥ ವೈಚಾರಿಕರ ಮುಂದೆ ತಮ್ಮ ಸಿದ್ಧಿಯನ್ನು ಪ್ರದರ್ಶಿಸಿ ಸರ್ಟಿಫಿಕೇಟು ಪಡೆದುಕೊಳ್ಳಬೇಕಾದ ಅಗತ್ಯ ಅವರಿಗೆ ಇರುವುದಿಲ್ಲ.

ಪುರಾತನ ಕಾಲದಿಂದಲೂ ಸಮಾಜ, ಸಾಧುಸಂತರ ಸಿದ್ಧಿ ಪುರುಷರ ಪವಾಡಗಳನ್ನು ಒಪ್ಪಿಕೊಂಡು ಬಂದಿದೆ. ಆದರೆ ಆ ಕಾರಣದಿಂದಲೇ ಯಾರಿಗೂ ಮರುಳಾಗುವುದಿಲ್ಲ. ಆದರೂ ಅದು ಅಲ್ಪಕಾಲದ್ದು, ಈ ನಂಬುಗೆಯನ್ನು ನಾಯಕರು ಕೆಟ್ಟದಾಗಿ ಬೈಗುಳಮಳೆ ಸುರಿಸಿ ಬದಲಾಯಿಸಲು ಸಾಧ್ಯವಿಲ್ಲ.

ಸಂಕಲ್ಪದಿಂದ ಸೃಷ್ಟಿ ಮಾಡುವ ಕ್ರಿಯೆಗಿಂತಲೂ ವಿಚಿತ್ರ ಘಟನೆಗಳು ನಡೆದಿವೆ. ಅವನ್ನು ಅರಿಯಲು ಪೂರ್ವಾಗ್ರಹವಿಲ್ಲದ ಮನೋಭಾವ ಬೇಕು.

ನರೇಂದ್ರ ನಾಯಕರು ತಮ್ಮ ವಿನಾ ಉಳಿದವರೆಲ್ಲರೂ ದಡ್ಡರೆಂಬ ಪೂರ್ವಾಗ್ರಹ ಮತ್ತು ಅಹಂಕಾರ ಹೊಂದಿದಂತೆ ಕಾಣುತ್ತೆ. ಎರಡನೇ ಪಕ್ಷದಂತೆ ಒಬ್ಬ ವ್ಯಕ್ತಿ ದೈವಿಕ ಶಕ್ತಿ ಹೊಂದಿದ್ದರೆ, ಅವರಿಗೆ ಇವರ ಹಣ, ಗುಲಾಮ ಸೇವೆ, ಸರ್ಟಿಫಿಕೇಟುಗಳ ಅಗತ್ಯವೇ ಇರುವುದಿಲ್ಲ ಎಂಬುದನ್ನು ನಾಯಕರು ಅರಿತುಕೊಳ್ಳಬೇಕು. ಅಂತಹ ಸಿದ್ಧಪುರುಷರು ತಮ್ಮ ಮುಂದೆ ಶಕ್ತಿಯನ್ನು ಪ್ರದರ್ಶಿಸಬೇಕು ಎಂಬ ನಿಲುವು ಮೂರ್ಖತನದ್ದಲ್ಲವೇ? ಇನ್ನು ನಾಯಕರು ದೈವೀಶಕ್ತಿ, ಸಂಕಲ್ಪಶಕ್ತಿಯಿಂದ ವಸ್ತುವನ್ನು ಸೃಷ್ಟಿಸುವ ವಿಚಾರವೇ ಸುಳ್ಳು ಎಂಬ ಭಾವನೆಯನ್ನು ದೃಢವಾಗಿ ಹೊಂದಿದ್ದರೆ ಅದು ಕೇವಲ ಪೂರ್ವಾಗ್ರಹವಾಗುವುದು. ಶೋಧನೆಗೆ ಅವಕಾಶವಿಲ್ಲ.

ಪವಾಡಗಳ ಬಗ್ಗೆ ಶ್ರೀ ಪರಮಹಂಸ ಯೋಗಾನಂದರ ಮತ್ತು ಸ್ವಾಮಿ ರಾಮದಾಸರ ಅನುಭವದ ಪುಸ್ತಕಗಳನ್ನು ನೀವು ಮುಕ್ತ ಮನಸ್ಸಿನಿಂದ ಓದಬೇಕೆಂಬುದು ನನ್ನ ಸಲಹೆ. ಅವರು ಸುಳ್ಳು ಹೇಳಿ ಜನರನ್ನು ವಂಚಿಸಲು ಆ ಪುಸ್ತಕಗಳನ್ನು ಬರೆದಿದ್ದಾರೆಂದು ನನಗೆ ಅನಿಸುವುದಿಲ್ಲ. ನಾಯಕರು ಅವರೆಲ್ಲಾ ಸುಳ್ಳುಗಾರರೆಂಬ ಭಾವನೆ ಹೊಂದಿರಬಹುದು. ಅದಕ್ಕೆ ನಿಮ್ಮ ಇದೇ ಡಿಸೆಂಬರ 99ರ ಪತ್ರಿಕೆಯ ಮೂರನೇ ಪುಟದಲ್ಲಿ ನೀವೇ ಉದಾಹರಿಸಿದ ''ಹಾರ್ಪರ್‌ಲೀ'' ಅವರ ವಚನವನ್ನು ಮತ್ತೊಮ್ಮೆ ಓದಲು ವಿನಂತಿಸಿಕೊಳ್ಳುತ್ತೇನೆ.

ನಾನು ಶ್ರೀ ಸಾಯಿಬಾಬಾರನ್ನು ದೂರದಿಂದ ಎರಡು ಬಾರಿ ನೋಡಿದ್ದೇನೆ. ಅವರ ಪವಾಡಗಳು ನನ್ನನ್ನು ಆಕರ್ಷಿಸಲಿಲ್ಲ. ಆದರೆ ಅವರು ಜನರ ಭಾವೈಕ್ಯಕ್ಕಾಗಿ ಸಮಾಜದ ಒಳಿತಿಗಾಗಿ, ಎಲ್ಲಾ ಭಾಷೆ, ಜನಾಂಗ ಮತಗಳಲ್ಲಿ ಪರಸ್ಪರ ಪ್ರೀತಿ, ಸೌಹಾರ್ದಗಳನ್ನು ಬೆಳೆಸಲು, ಕಷ್ಟದಲ್ಲಿರುವ ಜನರ ಬಗ್ಗೆ ಅವರ ಅನುಕಂಪ, ಮತ್ತು ಸಹಾಯ ಮಾಡಲು ನಡೆಸುತ್ತಿರುವ ಅಸಾಧಾರಣ ಕಾರ್ಯಗಳನ್ನು ಪವಾಡವೆಂದೇ ಭಾವಿಸುತ್ತೇನೆ ಮತ್ತು ಮೆಚ್ಚುತ್ತೇನೆ. ಅವರಾಗಿ ಯಾರಿಂದಲೂ ಕಾಣಿಕೆ, ಹಣ ಮೊದಲಾದ್ದನ್ನು ಬೇಡಿದುದನ್ನು ನಾನು ಕಂಡಿಲ್ಲ-ಕೇಳಿಲ್ಲ. ಅವರಿಂದ ಶೋಷಣೆ ಹೇಗೆ ಆಗುತ್ತದೆ. ನಾಯಕರ ಸಿಟ್ಟು ಅರ್ಥವಾಗುವುದಿಲ್ಲ. ನಾಯಕರು ಅವರೆದುರು ಅಲ್ಪರಾಗುತ್ತಾರೆ. ನಾಯಕರೂ ಈ ಬಗೆಯ ಸಮಾಜಸೇವೆಯ ಕಾರ್ಯವನ್ನು ಕೈಗೆತ್ತಿಕೊಳ್ಳಲಿ ಅಸೂಯೆ, ಅಹಂಕಾರಗಳನ್ನು ಬಿಡಲಿ ಎಂದು ಹಾರೈಸುತ್ತೇನೆ.

- ಬಿ.ಎಸ್. ಚಂದ್ರಶೇಖರ, ಸಾಗರ



## ಲುಚ್ಚ ನನಮಗನಿಗೆ ಸ್ವಚ್ಛ ಪತ್ರ

ಲೇ ಬೊಳಿ ಕಂತ್ರಿ ಸೂಳೆ ಅಲ್ಕ ಮಿಂಡ್ರಿ ಲೂಚ್ಚ ನನ ಮಗನೆ ನರೇಂದ್ರ ನಾಯಕ್‌ನೇ, ನಿನಗೆ ನನ್ನ ಸ್ವಚ್ಛ ಮಾತುಗಳು.

ಮುಖ್ಯ ವಿಷಯ. ನೀನು ''ಬದುಕು'' ಮಾಸ ಪತ್ರಿಕೆಯಲ್ಲಿ ಬರೆದ ಸುಳ್ಳು ವರದಿಯನ್ನು ನೋಡಿ ನಾನು ಜೀವನದಲ್ಲಿ ಈ ತಿಂಗಳು 10 ರೂ. ಮೋಸ ಹೋಗಿದ್ದೇನೆ. ಲೇ ಮಗನೆ ಎಷ್ಟು ಮಂದಿಗೆ ಹುಟ್ಟಿದ್ದಕ್ಕೆ ನಿನಗೆ ಇಷ್ಟು ಧೈರ್ಯ. ಮಗನೇ ಸಾಯಿಬಾಬಾ ಸಮಾಜ ಸೇವೆ ಮಾಡುತ್ತಿದ್ದರೆ, ಮಗನೆ, ಬೂದಿ ಬಂಗಾರ ಉಂಗುರ ನಾನು ಕೊಡಬಲ್ಲೆ ಅಂತ ನೀನು ಬೊಗಳುತ್ತಿದ್ದಿ. ಸೂಳೆಮಗನೆ, ಆತನನ್ನು ನಂಬಿದ ಭಕ್ತರು ಸಾಯಿಬಾಬಾ ಅವರನ್ನು ನಂಬಿ ಸಮಾಜಸೇವೆ ಮಾಡುತ್ತಿದ್ದಾರೆ. ಹಾಗೆ ಅಯ್ಯಪ್ಪ ಎಂದು ಮಾಲೆ ಧರಿಸಿದ ನಂತರ 41 ದಿನವು ಸ್ವಾಮಿ ಎಂದು ಅಯ್ಯಪ್ಪನ ನಿಷ್ಠೆಯಲ್ಲಿ ಇರುತ್ತಾರೆ. ಅಂತಹವರನ್ನು ನೋಡಿ ದೇವರಿದ್ದಾನೆ ಎಂದು ಜನರು ನಂಬಿ ಒಳ್ಳೆಯ ಹಾದಿ ಹಿಡಿದರೆ ಮಗ ನೀನು ಸಮಾಜನಾಶಕ್ಕೆ ಕಾರಣವಾಗುತ್ತಿದ್ದಿ. ಯಾವುದಾದರು ಹಗ್ಗ ತೆಗೆದುಕೊಂಡು ನೇಣು ಹಾಕಿಕೊಂಡು ಸಾಯು ಹೋಗಲೇ.

ಬೊಗಳುವ ನಾಯಿಯಂಥ ಮಗನೇ ನರೇಂದ್ರ ನಾಯಕನೆ.

ಜಿ.ಪಿ.ಕುಮಾರ.

# 'ಹೌದು, ಆತ ಮೋಸಗಾರ ! ಸುಳ್ಳು ಸೃಷ್ಟಿಸುವಾತ !' – ನರೇಂದ್ರ ನಾಯಕ್

ಪುಟ್ಟಪರ್ತಿ ನಿವಾಸಿ ಸತ್ಯನಾರಾಯಣ ರಾಜು ಮತ್ತು ಆತನ ಸುತ್ತಲಿರುವ ಹೊಗಳು ಭಟ್ಟರು, ಆತನ ಆತ್ಮಚರಿತ್ರೆಯನ್ನು ಬರೆದಿರುವ ವಂದಿಮಾಗಧರು ಮತ್ತಾತನ ಭಕ್ತರೆಂದು ಕರೆಸಿಕೊಳ್ಳುವವರಿಂದ ಹಲವಾರು ರೀತಿಯ ಪ್ರತಿಕ್ರಿಯೆಗಳನ್ನು ಗಮನಿಸಿದ್ದೇನೆ.

ಮೊದಲನೆಯದಾಗಿ, ಸತ್ಯನಾರಾಯಣ ರಾಜುವಿನ ಬಗ್ಗೆ ಸತ್ಯ ಬರೆದಾಗ ಆತನ ತಥಾಕಥಿತ ಭಕ್ತರಿಗೆ ಕೆಂಡಾಮಂಡಲ ಕೋಪಬರುವುದು ಅರ್ಥವಾಗುತ್ತದೆ. ಏಕೆಂದರೆ, ಈ ಭಕ್ತರು ಪವಾಡಗಳೆಂಬ ಸುಳ್ಳುಗಳ ಕಂತೆಯನ್ನು ನಂಬಿ, ತಮ್ಮ ಸ್ವಂತ ಬುದ್ಧಿಯನ್ನು ಕಳಕೊಳ್ಳುವ ಮಟ್ಟಕ್ಕೆ ಹೋಗಿದ್ದಾರೆ. ನನ್ನ ಲೇಖನದಲ್ಲಿ ನಾನೇನೂ ತಪ್ಪು ಭಾಷೆಯನ್ನಾಗಲಿ ಬೈಗಳನ್ನಾಗಲಿ ಉಪಯೋಗಿಸಲಿಲ್ಲ.ಮಾತ್ರವಲ್ಲದೆ, ಸತ್ಯಶೋಧನೆಗೆ ಅವಕಾಶವನ್ನು ಕೇಳಿದ್ದೇನೆ. ಸತ್ಯನಾರಾಯಣ ರಾಜು ಒಬ್ಬ ಸಾಮಾನ್ಯ ಮನುಷ್ಯ, ದೇಶದ ಎಲ್ಲಾ ಪ್ರಜೆಗಳಂತೆ. ಆತನೇನೂ ಕೈಕಾಲು ಅಲ್ಲಾಡಿಸಿ ''ಶೂನ್ಯ''ದಿಂದ ಏನೇನನ್ನೋ ಸೃಷ್ಟಿಸಿದ್ದೇನೆಂದು ಕೊಳ್ಳಬಹುದು. ಆದರೆ, ರಾಜ್ಯದ ಮುಖ್ಯಮಂತ್ರಿ ತನ್ನ ಬುದ್ಧಿಮಾಂದ್ಯವನ್ನು ಪ್ರಮಾಣೀಕರಿಸುವಂತೆ ಆತನ ಕಾಲಿಗೆರಗಿ, ಕರ್ನಾಟಕ ರಾಜ್ಯದ ಜನತೆಯ ಪರವಾಗಿ ಆಶೀರ್ವಾದ ಬೇಡಿದ್ದು ಖಂಡಿತವಾಗಿಯೂ ತಪ್ಪು. ಗಾಳಿಯಲ್ಲಿ ಕೈ ಅಲ್ಲಾಡಿಸಿ ವಸ್ತುಗಳನ್ನು ಸೃಷ್ಟಿಸುವ ಶಕ್ತಿ ಇದ್ದ ವ್ಯಕ್ತಿ ಬರೀ ವಾಚು, ಚೈನು, ಉಂಗುರ, ಬೂದಿಗಳನ್ನೇಕೆ ಸೃಷ್ಟಿಸುವುದು ? ಬೇರೇನೂ ಸಿಗಲಿಲ್ಲವೇ? ಇದರ ಉತ್ತರವಿಷ್ಟೆ. ಈ ವಸ್ತುಗಳನ್ನು ಕೈ ಮುಷ್ಟಿಯೊಳಗೆ ಬಚ್ಚಿಟ್ಟುಕೊಳ್ಳಲು ಸಾಧ್ಯ!

ನಾನು ಸಂಯಮ ಕಳೆದುಕೊಂಡಿದ್ದೇನೆಂಬ ಅಪವಾದವು ಹಾಸ್ಯಾಸ್ಪದ. ಓರ್ವ ವಿಜ್ಞಾನಿಯಾಗಿ, ಜೀವರಸಾಯನ ಶಾಸ್ತ್ರಜ್ಞನಾಗಿ ಈ ವಿಷಯಗಳ ಕುರಿತು ಹೆಚ್ಚಿನ ಸಂಗತಿಗಳನ್ನು ತಿಳಿದುಕೊಳ್ಳುವ ಉದ್ದೇಶದಿಂದಾಗಿ ಮುಂದುವರಿದ ನನಗೆ ಈ ಬಗ್ಗೆ ಸರಿಯಾಗಿ ಸಂಶೋಧಿಸುವ ಅವಕಾಶ ಸಿಗಲಿಲ್ಲವೆಂಬ ಹತಾಶೆ ನನ್ನಲ್ಲಿರಬಹುದು. ಆದರೆ, ಯಾರನ್ನೂ ಕೊಲೆ ಮಾಡಲು ಹೋಗಿಲ್ಲ! ಇದನ್ನು ಮಾಡಲು ಹೋದವರು ಆತನ ಪುಟ್ಟಪರ್ತಿಯ ನಿವಾಸಿಗಳೇ! ಕೆಲವು ವರ್ಷಗಳ ಹಿಂದೆ, ಪುಟ್ಟಪರ್ತಿಯಲ್ಲಿ ಸತ್ಯನಾರಾಯಣ ರಾಜುವಿನ ಶಯ್ಯಾಗೃಹದಲ್ಲಿ ಹಲವಾರು ಹೆಣಗಳು ಉರುಳಿದ್ದುವು! ಅಹಿಂಸೆ, ಕರುಣೆಯೇ ಮೂರ್ತಿವೇತ್ತಂತಹ ಪವಿತ್ರ ವ್ಯಕ್ತಿಯ ಕೊಠಡಿಯಲ್ಲಿ ಈ ಹೆಣಗಳು ಹೇಗೆ ಉರುಳಿದುವು? ಅಲ್ಲಿ ಕೊಲೆಯತ್ನ ನಡೆದಿತ್ತು. ಕೊಲೆಗಾರರನ್ನು ಪೋಲಿಸರು ಸಮೀಪದಿಂದ ಗುಂಡಿಕ್ಕಿ ಕೊಂದಿದ್ದರು ಏಕೆ? ಇದರ ಬಗ್ಗೆ ಆತನ ಭಕ್ತರು ಉತ್ತರಿಸಲಿ.

ಪುಟ್ಟಪರ್ತಿಯ ಬೂದಿಬಾಬಾ ಮಾಡಿದ ಮೂರು ಮುಖ್ಯವಾದ ''ಪವಾಡ''ಗಳ ಬಗ್ಗೆ ಸಾಕಷ್ಟು ಪ್ರಚಾರವಿದೆ. ಇವುಗಳನ್ನು ವೈಜ್ಞಾನಿಕವಾಗಿ ಶೋಧಿಸಲೂ ಆಗಿದೆ. ಮೊದಲನೆಯದ್ದು ಟೊಂ ಕೋವಾನ್‌ನ ಪುನರುತ್ಥಾನ: ಈತ ಪರದೇಶದವ. ಭಾರತಕ್ಕೆ ಬಂದು, ಮದ್ರಾಸಿನ ಕೊನೆರಾ ಹೊಟೇಲಿನಲ್ಲಿದ್ದನಂತೆ. ಒಮ್ಮಿಂದೊಮ್ಮೆಲೆ ಆತನಿಗೆ ಹೃದಯಾಘಾತವಾಗಿ ತೀರಿಕೊಂಡನಂತೆ. ಆತನ ಹೆಣವನ್ನು ಶೀತಾಗಾರಕ್ಕೆ ಸಾಗಿಸಲಾಯಿತಂತೆ. ಕೆಲವು ಗಂಟೆಗಳ ನಂತರ ಅಲ್ಲಿಗೆ ಬಂದ ಸತ್ಯನಾರಾಯಣ ರಾಜು, ಶೋಕತಪ್ತರಾಗಿದ್ದ ಶ್ರೀಮತಿ ಕೋವಾನ್‌ಳನ್ನು ಸಂತೈಸಿ, ಶವಾಗಾರದೊಳಗೆ ಪ್ರವೇಶಿಸಿ, ಸ್ವಲ್ಪ ಸಮಯದಲ್ಲೇ ಮುಗುಳ್ನಗುತ್ತಾ ಹೊರ ಬಂದರಂತೆ, ಆತನ ಹಿಂದೆಯೇ ಟೊಂ ಕೋವಾನ್ ನಡೆದುಕೊಂಡು ಬಂದನಂತೆ! ಈ ಚಮತ್ಕಾರವನ್ನು ನೋಡಿದವರಿಗೆಲ್ಲಾ ಆಶ್ಚರ್ಯ!

ಈ ಬಗ್ಗೆ ಸಂಶೋಧನೆ ನಡೆಸಿದ ಬಿ. ಪ್ರೇಮಾನಂದರವರು ಹೊಟೇಲಿಗೆ, ಆತನನ್ನು ಪರೀಕ್ಷಿಸಿದ ವೈದ್ಯರಿಗೆ, ಆತ ಇದ್ದ ಆಸ್ಪತ್ರೆಯವರಿಗೆ ಪತ್ರ ಬರೆದರು. ಉತ್ತರಗಳನ್ನು ಗಮನಿಸಿದಾಗ ಈ ಪವಾಡವೇ ನಡೆದಿಲ್ಲವೆಂದಾಯಿತು! ಯಾಕೆಂದರೆ, ಟೊಂ ಕೋವಾನ್‌ಗೆ ಹೃದಯಾಘಾತವಾದದ್ದು ನಿಜವಾಗಿದ್ದರೂ, ಅದು ತೀರಾ ಅಲ್ಪಪ್ರಮಾಣದ್ದಾಗಿತ್ತು. ಆತ ಕೆಲವು ದಿನ ಆಸ್ಪತ್ರೆಯಲ್ಲಿ ದಾಖಲಾಗಿದ್ದು, ಯಾವುದೇ ತೊಂದರೆಯಿಲ್ಲದೆ ಬಿಡುಗಡೆಯಾಗಿದ್ದ.

ಇದೇ ರೀತಿಯಲ್ಲಿ ನೀರನ್ನು ಪೆಟ್ರೋಲ್ ಮಾಡಿದ, ಶೂನ್ಯದಿಂದ ಸಿಕೋ ವಾಚ್ ಸೃಷ್ಟಿಸಿದ ಪವಾಡಗಳೂ ಸುಳ್ಳುಗಳ ಕಂತೆಗಳೇ ಆಗಿದ್ದುವು. ಒಟ್ಟಿನಲ್ಲಿ ಇಂತಹ ಕಥೆಗಳನ್ನು ಭಕ್ತರು ಸೃಷ್ಟಿಸಿ ತಮ್ಮ ಸ್ವಾಮಿಯ ಕೀರ್ತಿ ಹೆಚ್ಚಿಸುವ ಪ್ರಯತ್ನ ಮಾಡಿದ್ದರು. ನಮ್ಮ ಸಮಾಜದಲ್ಲಿ ಹಿಂದಿನಿಂದಲೇ ಪವಾಡಗಳನ್ನು ನಂಬಿಕೊಂಡು ಬಂದದ್ದು ನಿಜ. ಆದರೆ, ಈ ನಂಬಿಕೆಗಳನ್ನು ಪ್ರಶ್ನಿಸಿದಾಗ ಅವು ಸತ್ಯವಲ್ಲವೆಂಬುದು ಸ್ಪಷ್ಟವಾಗುತ್ತದೆ. ಶಿಕ್ಷಣದ, ವೈಜ್ಞಾನಿಕ ಮನೋಭಾವದ ಕೊರತೆ ಇದ್ದ ಕಾರಣ ಇವುಗಳನ್ನು ನಂಬಿದ್ದಾರೆ! ಇವೇ ನಂಬಿಕೆಗಳಿಂದಲೇ ಕರ್ನಾಟಕಕ್ಕಿಂತ ಸ್ವಲ್ಪ ದೊಡ್ಡದಾದ ಇಂಗ್ಲೆಂಡ್‌ನ ಕೆಲವೇ ಸಾವಿರ ಮಂದಿ ಬಿಳಿ ಚರ್ಮದವರು ನಮ್ಮನ್ನಾಳಲು, ಶೋಷಿಸಲು ಕಾರಣ! ಈ ಶೋಷಣೆಯು ನಡೆಯುತ್ತಿದ್ದಾಗ ದೇಶದಲ್ಲಿದ್ದ ಸಾವಿರಾರು ಬಾಬಾ-ಸನ್ಯಾಸಿ-ಪವಾಡ ಪುರುಷರು ನಮ್ಮನ್ನು ರಕ್ಷಿಸಲು ಸಾಧ್ಯವಾಗಲಿಲ್ಲ!

ನನ್ನನ್ನು ಅಹಂಕಾರ, ಪೂರ್ವಾಗ್ರಹ ಪೀಡಿತ ವ್ಯಕ್ತಿಯೆಂದು ಕರೆದಿರುವುದು ದುರದೃಷ್ಟಕರ. ಯಾಕೆಂದರೆ, ಓರ್ವ ಮತ್ತೆ-ಮತ್ತೆ ಕೇಳಿದಾಗಲೂ ಆತನನ್ನು ಕರೆಯದೆ, ಶಿಷ್ಯರ ಮೂಲಕ ಉತ್ತರ ಕೊಡುವ ವ್ಯಕ್ತಿಯು ಪೂರ್ವಾಗ್ರಹ ಪೀಡಿತನೋ, ನಾನೋ ಎಂಬುದನ್ನು ಓದುಗರೇ ನಿರ್ಧರಿಸಬೇಕು! ತಾನು ಮಾಡುವುದು ಪವಾಡ, ಅದನ್ನೇ ಇತರರು ಮಾಡಿ ತೋರಿಸಿದರೆ ಅದು ಇಂದ್ರಜಾಲ, ತನ್ನಲ್ಲಿರುವುದು ಅಪೂರ್ವ ದೈವಿಕ ಶಕ್ತಿ ಎಂದು ಹೇಳುತ್ತಿರುವ ವ್ಯಕ್ತಿ ಅಹಂಕಾರಿಯೋ, ಇದನ್ನು ಪರೀಕ್ಷಿಸಲು ಪ್ರಯತ್ನಿಸುವಾತ ಪೂರ್ವಾಗ್ರಹ ಪೀಡಿತನೋ ಎಂಬುದನ್ನು ಜನರೇ ನಿರ್ಧರಿಸಲಿ.

ಪತ್ರ ಬರೆದ ವ್ಯಕ್ತಿಗಳಲ್ಲೊಬ್ಬ ನಿವೃತ್ತ ಪ್ರೌಢಶಾಲಾ ಮುಖ್ಯೋಪಾಧ್ಯಾಯರೆಂಬುದನ್ನು ತಮ್ಮ ಹೆಸರಿನ ಕೆಳಗೆ ಅಚ್ಚು ಹಾಕಿದ್ದಾರೆ, ಮತ್ತೆ ನನಗೆ ಕೆಲವು ಪುಸ್ತಕಗಳನ್ನು ಓದುವ ಅಮೂಲ್ಯ ಸಲಹೆ ಕೊಟ್ಟಿದ್ದಾರೆ. ಈ ಸಲಹೆಗೆ ನಾನು ಚಿರಋಣಿ. ಆದರೆ, ಇವರು ಶಾಲೆಯ ಮುಖ್ಯೋಪಾಧ್ಯಾಯರಾಗಿದ್ದರೂ, ಅಲ್ಲಿಯ ವಿದ್ಯಾರ್ಥಿಗಳ ಪಠ್ಯಪುಸ್ತಕಗಳನ್ನು ಓದಿಲ್ಲವೆಂದು ಕಾಣುವುದು. ಯಾಕೆಂದರೆ, ಎಂಟನೆ ತರಗತಿಯ ವಿಜ್ಞಾನ ಪಠ್ಯದಲ್ಲೂ ಘನ ವಸ್ತುವನ್ನು ತಯಾರಿಸಲು ಯಾ ನಾಶಪಡಿಸಲು ಸಾಧ್ಯವಿಲ್ಲ, ಒಂದು ರೂಪದಿಂದ ಮತ್ತೊಂದು ರೂಪಕ್ಕೆ ಪರಿವರ್ತನೆಯಾಗಲು ಮಾತ್ರ ಸಾಧ್ಯವೆಂದು ಹೇಳಲಾಗಿದೆ. ಸಂಕಲ್ಪ ಶಕ್ತಿಯಿಂದ ವಸ್ತುವನ್ನು ''ಸೃಷ್ಟಿ''ಸುವುದು ಇದಕ್ಕೆ ವ್ಯತಿರಿಕ್ತವಾಗಿದೆಯೆಂದು ತಿಳಿದುಕೊಳ್ಳಲಿ!

ಪುಟ್ಟಪರ್ತಿಯಲ್ಲಿ ನಡೆಯುವ ಸಮಾಜಸೇವೆ ಇತ್ಯಾದಿಗಳ ಬಗ್ಗೆ ಕೇಳಿ-ಕೇಳಿ ಸಾಕಾಗಿದೆ. ಈ ಸೇವೆಯು ಅಲ್ಲಿ ನಡೆಯುವ ಶೋಷಣೆ ವಂಚನೆ ಅಕ್ರಮಗಳಿಗೆ ಹಿಡಿದ ಪರದೆ. ಚಂದ್ರಶೇಖರ್‌ರ ಪ್ರಕಾರ ಯಾರೂ ಹಣ ಕೊಡದಿದ್ದರೆ, ಕೇಳದಿದ್ದರೆ ಅಲ್ಲಿ ನಡೆಯುವ ಕೆಲಸಗಳಿಗೆ ಹಣ ಎಲ್ಲಿಂದ ಬರುವುದು. ಪುಟ್ಟಪರ್ತಿಯಲ್ಲಿ ನೋಟುಗಳ ಛಾಪಖಾನೆಯಿದೆಯೇ? ಈ ಸಮಾಜಸೇವೆಗಳ ಬಗ್ಗೆ ಮತ್ತೆ ಮತ್ತೆ ಕೊಚ್ಚಿಕೊಳ್ಳುವ ಅಗತ್ಯವಿಲ್ಲ. ದಾವೂದ್ ಇಬ್ರಾಹಿಂ ಕೂಡಾ ಆತನ ಅನುಯಾಯಿಗಳನ್ನು ಉತ್ತಮವಾಗಿ ನೋಡಿಕೊಳ್ಳುತ್ತಾನೆ! ವೀರಪ್ಪನ್ ಕೂಡಾ! ಮಧ್ಯಪ್ರದೇಶದ ಚಂಬಲ್‌ನ ಹಲವಾರು ಢಕಾಯಿತರುಗಳನ್ನು ಅವರ ಊರುಗಳ ಜನರು ದೇವರಂತೆ ಪೂಜಿಸುತ್ತಾರೆ!

ಕೊನೆಯದಾಗಿ, ವಾದಗಳ ಮೂಲಕ ಯಾಕೆ ನನ್ನನ್ನು ಸೋಲಿಸಲು ಪ್ರಯತ್ನಿಸುವುದು? ಮನೆ ಮಾಲಿಕನನ್ನು ಪ್ರಶ್ನಿಸಿದರೆ ಆತನ ನಾಯಿ ಬೊಗಳುವಂತೆ ಏಕೆ ಮತ್ತೆ-ಮತ್ತೆ ಪ್ರತಿಕ್ರಿಯಿಸುವುದು? ಮನೆ ಮಾಲಿಕ ಅರ್ಥಾತ್ ಪುಟ್ಟಪರ್ತಿ ಪ್ರಶಾಂತಿ ನಿಲಯದ ಸತ್ಯನಾರಾಯಣ ರಾಜು ಖುದ್ದಾಗಿ ನನ್ನನ್ನು ಆಮಂತ್ರಿಸಿ, ಪವಾಡ ಮಾಡಿ ತೋರಿಸಲಿ. ಅಲ್ಲಿಗೆ ನಾನು ಪತ್ರಕರ್ತರು, ಛಾಯಾಗ್ರಾಹಕರು ಇತ್ಯಾದಿಯವರೊಂದಿಗೆ ಹೋಗುತ್ತೇನೆ. ಎಲ್ಲರ ಮುಂದೆ ಈ ಪವಾಡ ನಡೆಯಲಿ. ಆಗ ನಾನು ಆತನ ನಿಜವಾದ ಭಕ್ತನಾಗಿ ಸಾಯುವವರೆಗೆ ಆತ ಹೇಳಿದ ಕೆಲಸ ಮಾಡಿಕೊಂಡು ಬಿದ್ದುಕೊಂಡಿರುತ್ತೇನೆ.

ಅಲ್ಲಿಯವರೆಗೆ ಆತ ಮೋಸಗಾರ, ಸುಳ್ಳು ಸೃಷ್ಟಿಸುವಾತ ಮತ್ತು ಮುಖಾಮುಖಿ ಭೇಟಿಗೆ ಬೆದರುವ ಹೇಡಿಯೆಂದು ತಿಳಿದುಕೊಂಡಿರುತ್ತೇನೆ. ನಾನು ಬರೆದ ಮಾತುಗಳಲ್ಲಿ ಯಾವುದಾದರೂ ಮಾನನಷ್ಟಕರವೆಂದಾಗುವುದಾರೆ ಈ ಬಗ್ಗೆ ಸೂಕ್ತಕ್ರಮ ಕೈಗೊಳ್ಳಲು ಸತ್ಯನಾರಾಯ ರಾಜುವಿಗೂ ಆತನ ಭಕ್ತರಿಗೂ ಸ್ವಾತಂತ್ರ್ಯವಿದೆ.

■ ನರೇಂದ್ರ ನಾಯಕ್

# ಹೊಸ ವರ್ಷದ ಶುಭಾಶಯ ಹೇಳುವುದು ಹೇಗೆ ?

ಈಗ ಬರುತ್ತಿರುವುದು ಪ್ರತಿ ವರ್ಷ ಬರುವ ಸಾಮಾನ್ಯ ಹೊಸ ವರ್ಷವಲ್ಲ. ಇದು ಸಾವಿರ ವರ್ಷಕ್ಕೊಮ್ಮೆ ಬರುವ ಅಪರೂಪದ ಅವಕಾಶ. ಸಹಸ್ರಮಾನ ಆರಂಭಗೊಳ್ಳುವ ಇಂಥ ಕಾಲಘಟ್ಟದಲ್ಲಿ ಜೀವಿಸುತ್ತಿರುವ ನಾವುನೀವೆಲ್ಲ ಅದೃಷ್ಟವಂತರೇ ಸರಿ. 2000ನೇ ಇಸವಿಯನ್ನು ಸ್ವಾಗತಿಸುವ ಈ ಸಂದರ್ಭದಲ್ಲಿ ನಿಮ್ಮ ಆತ್ಮೀಯರಿಗೆ ಶುಭಕೋರಲು ಹಲವಾರು ವಿಧಾನಗಳಿವೆ. ನಿಮಗೆ ಸರಿಕಂಡಿದ್ದನ್ನು ಆಯ್ಕೆ ಮಾಡಿಕೊಳ್ಳಿರಿ.

### ಹಳೆಯ ಆಯ್ಕೆಗಳು

1. ಪ್ರತಿ ವರ್ಷದಂತೆ ಈ ವರ್ಷವೂ ದುಬಾರಿ ಬೆಲೆಯ ಗ್ರೀಟಿಂಗ್ ಕಾರ್ಡನ್ನು ಕೊಂಡು ನಿಮ್ಮ ಆಪ್ತರಿಗೆ ಕಳಿಸಿಕೊಡಿ.
   **[ನೀವು ಕಳಿಸಿದ ಗ್ರೀಟಿಂಗ್ ಕಾರ್ಡು ಅಂಚೆಯಲ್ಲಿ 'ಮಿಸ್' ಆಗದೆ ವಿಳಾಸದಾರರಿಗೆ ತಲುಪಿದರೆ ಅದು ನಿಮ್ಮ ಪುಣ್ಯ. ಅವರಿಗೆ ತಲುಪುವ ನೂರಾರು ಶುಭಾಶಯ ಪತ್ರಗಳಲ್ಲಿ ನಿಮ್ಮದೂ ಒಂದಾಗಿರುತ್ತದೆ. ಅವರು ಒಮ್ಮೆ ಕಾರ್ಡ್ ಮೇಲೆ ಕಣ್ಣಾಡಿಸಿ ಕಸದ ಬುಟ್ಟಿಗೆ ಕಳಿಸುತ್ತಾರೆ.]**
2. ನಿಮ್ಮ ಆಪ್ತರು ನಿಮ್ಮ ಊರಿನಲ್ಲೇ ಇದ್ದರೆ ಅವರಿಗೆ ಬಗೆಬಗೆಯ ಸಿಹಿ ತಿಂಡಿಯನ್ನು ಸ್ವತಃ ತಲುಪಿಸಿ. ಬೇರೆ ಊರಿನವರಾದರೆ ಅಂಚೆ ಅಥವಾ ಕೊರಿಯರ್ ಮೂಲಕ ಸಿಹಿ ಪೊಟ್ಟಣ ರವಾನಿಸಿ.
   **[ನೀವು ಕಳಿಸಿದ ಸಿಹಿಯ ತುಂಡನ್ನು ಬಾಯಿಗಿರಿಸಿಕೊಂಡ ನಿಮ್ಮ ಆಪ್ತರು ಹತ್ತು ನಿಮಿಷ ಕಾಲ ಸಿಹಿ ಸವಿದು ತಮ್ಮ ದೈನಂದಿನ ಕಾರ್ಯಗಳಲ್ಲಿ ಮಗ್ನರಾಗುತ್ತಾರೆ. ಆಕಸ್ಮಾತ್ ಅವರಿಗೆ ಸಿಹಿ ಇಷ್ಟವಿಲ್ಲದಿದ್ದರೆ ಅಥವಾ ಅವರಿಗೆ ಡೈಯಾಬಿಟಿಸ್ ಇದ್ದರೆ ಆಗುವ ಫಜೀತಿಯನ್ನು ಊಹಿಸಿ]**
3. ಹೊಸ ವರ್ಷದ ಅತ್ಯಾಕರ್ಷಕ ಡೈರಿಯನ್ನು ನಿಮ್ಮವರಿಗೆ ಉಡುಗೊರೆ ನೀಡಿ.
   **[ಡೈರಿಯನ್ನು ಜೋಪಾನವಾಗಿರಿಸಿಕೊಂಡು ದಿನಚರಿ ಬರೆಯುವವರು ಎಷ್ಟು ಜನ ಎಂಬುದನ್ನು ಕೊಂಚ ಯೋಚಿಸಿ. ಒಂದು ಸಮೀಕ್ಷೆ ಪ್ರಕಾರ ಡೈರಿ ಹೊಂದಿದವರಲ್ಲಿ ಶೇ. 90 ರಷ್ಟು ಜನ ಅದನ್ನು ಬಳಸುವುದಿಲ್ಲ!]**
4. ಟಿ.ವಿ., ಫ್ರಿಜ್, ವಾಷಿಂಗ್ ಮೆಷಿನ್, ಸ್ಕೂಟರ್ ಮೊದಲಾದವನ್ನು ಪ್ರೆಸೆಂಟ್ ಮಾಡಿ ನಿಮಗೆ ಬೇಕಾದವರನ್ನು ಸಂತೃಪ್ತಗೊಳಿಸಿರಿ.
   **[ಇದಕ್ಕಾಗಿ ನೀವು ಸಾವಿರಾರು ರೂಪಾಯಿ ಖರ್ಚು ಮಾಡಬೇಕಷ್ಟೇ!]**

### ಹೊಸ ಅವಕಾಶ

5. ಸಹಸ್ರಮಾನದ ಆರಂಭ ವರ್ಷ ಅರ್ಥಪೂರ್ಣವಾಗುವಂತೆ ನೀವು ನಿಮ್ಮ ಆಪ್ತರಿಗೆ 'ಬದುಕು' ಅಥವಾ 'ದಾರಿ' ಪತ್ರಿಕೆಯನ್ನು ಉಡುಗೊರೆಯಾಗಿ ನೀಡಿ. **[ಇದಕ್ಕಾಗಿ ನೀವು ಖರ್ಚು ಮಾಡಬೇಕಾದುದು ಕೇವಲ ರೂ. 120. ಈ ಪತ್ರಿಕೆಗಳು ನಿಮ್ಮ ಆಪ್ತರಿಗೆ ಜೀವನಪೂರ್ತಿ ಉಪಯೋಗವಾಗುತ್ತವೆ. ಅವರ ಬದುಕಿನಲ್ಲಿ ನಿಮ್ಮ ನೆನಪೂ ಚಿರಸ್ಥಾಯಿಯಾಗಿ ಉಳಿಯುತ್ತದೆ]**

---

**ಉಡುಗೊರೆ ಕೂಪನ್**

ನನ್ನ ಹೆಸರು : ..................................................

ವಿಳಾಸ : ..................................................

..................................................

ಈ ಕೆಳಗಿನ ನನ್ನ ಆತ್ಮೀಯರ ವಿಳಾಸಕ್ಕೆ ನನ್ನ ಹೊಸ ವರ್ಷದ ಉಡುಗೊರೆಯಾಗಿ

☐ 'ದಾರಿ' ವಾರ ಪತ್ರಿಕೆಯ 52 ಸಂಚಿಕೆಗಳನ್ನು ಒಂದು ವರ್ಷಕಾಲ ಕಳಿಸಿ.

☐ 'ಬದುಕು' ಮಾಸಪತ್ರಿಕೆಯ 12 ಸಂಚಿಕೆಗಳನ್ನು ಒಂದು ವರ್ಷಕಾಲ ಕಳಿಸಿ.

**[ನೀವು ಆಯ್ಕೆ ಮಾಡಿದ ಪತ್ರಿಕೆ ಹಿಂದೆ ✓ ಹೀಗೆ ಟಿಕ್ ಮಾಡಿ ]**

ಪತ್ರಿಕೆ ಕಳಿಸಬೇಕಾದವರ ಹೆಸರು ..................................................

ವಿಳಾಸ..................................................

..................................................

ವಾರ್ಷಿಕ ಚಂದಾ ಹಣ ರೂ. 120ನ್ನು ಎಂ.ಓ/ ಚೆಕ್/ ಡಿಡಿ ನಂ...................... ದಿನಾಂಕ.................. ಮೂಲಕ ಕಳಿಸಿದ್ದೇನೆ.

[ಹೊರ ಊರಿನ ಚೆಕ್ ಆದರೆ ರೂ. 20 ಹೆಚ್ಚು ಕಳಿಸಿ. ಡಿ.ಡಿ. ಅಥವಾ ಚೆಕ್ 'ಅಂಕುರ ಪ್ರಕಾಶನ'ದ ಹೆಸರಿನಲ್ಲಿ ಇರಲಿ ]

## ಮುಖಪುಟ ಲೇಖನ





## ಪ್ರಚಲಿತ





## ವರ್ಷದ ವ್ಯಕ್ತಿ





## ಲೇಖನಗಳು





## ಕತೆ / ಕವನ / ಪ್ರಬಂಧ





## ವಿಜ್ಞಾನ-ಆರೋಗ್ಯ



## ಸ್ಥಿರ ಶೀರ್ಷಿಕೆಗಳು



## ಕ್ರೀಡೆ





**ಮುಂದಿನ ಸಂಚಿಕೆಯಲ್ಲಿ**

**ಯುವಕರನ್ನು ಸಾವಿಗೆ ಸೆಳೆವ ಗುಟ್ಕಾ**

# ವಾಜಪೇಯಿ ಬ್ರಹ್ಮಚಾರಿಯಲ್ಲ !

ಐದು ದಶಕಗಳಿಗೂ ಹೆಚ್ಚಿನ ರಾಜಕೀಯದ ನಡುವೆಯೂ ಒಳ್ಳೆಯ ಅಡುಗೆ ಮಾಡುತ್ತಾ, ಸ್ಕಾಚ್ ವಿಸ್ಕಿ ಸವಿಯುತ್ತಾ, ರಸಿಕತೆಯನ್ನು ಸಾಧಿಸುತ್ತಾ, ಅದರ ಬಗ್ಗೆ ಸಂಕೋಚವಿಲ್ಲದೇ ಮಾತಾಡಿದವರು ವಾಜಪೇಯಿ.

**ಈ**ತ ಕವಿ. ಕವಿ ಹೃದಯ ಇದೆಯೇ? ತಿಳಿಯದು. ರಸಿಕತೆಯಂತೂ ಸಾಕಷ್ಟಿದೆ. ಇಲ್ಲದಿದ್ದರೆ "ನಾನು ಬ್ರಹ್ಮಚಾರಿಯಲ್ಲ ಮದುವೆ ಆಗದವನು" ಎಂದು ಹೇಳುತ್ತಿದ್ದರೆ!

ನಿಮಗೂ ಗೊತ್ತಾಗಿರಬೇಕು. ಈತ ವಾಜಪೇಯಿ. ಈ ದೇಶದ ಹಾಲಿ ಪ್ರಧಾನಿ. ಇವರನ್ನು ದುಷ್ಟರ ನಡುವೆ ನಿಂತ ಸಜ್ಜನ ಎಂದು ವಿರೋಧಿಗಳೂ ಬಣ್ಣಿಸುವುದುಂಟು.

1948ರ ಸಮಯ. ದೆಹಲಿ ತುಂಬ ಪಾಕಿಸ್ತಾನದಿಂದ ಬಂದ ನಿರಾಶ್ರಿತರ ಹಿಂಡು. ಇದ್ದ ಬದುಕು ಕೊಡವಿಕೊಂಡು ಜೀವ ಉಳಿದರೆ ಸಾಕು ಬೇಡಿಯಾದರೂ ಬದುಕಬಹುದು ಎಂದು ಬಂದ ಜನ. ಇಂಥವರ ನೆರವಿಗೆ ಆರೆಸ್ಸೆಸ್ ವಿದ್ಯಾರ್ಥಿಗಳ ಕೋಳಿಯನ್ನು ರೂಪಿಸಿತು. ಅದರ ಹೆಸರು ಅಖಿಲ ಭಾರತೀಯ ವಿದ್ಯಾರ್ಥಿ ಪರಿಷತ್. ಅದರ ಮುಂಚೂಣಿಯಲ್ಲಿ ಇದ್ದವರು ವಾಜಪೇಯಿ.

ಆಗಿಂದ ಸಾರ್ವಜನಿಕ ಬದುಕಿನೊಂದಿಗೆ ಬೆಸೆದ ನಂಟು. ಒಳ್ಳೇ ಮಾತುಗಾರ. ಆಮೇಲೆ ರೂಪುಗೊಳ್ಳತೊಡಗಿದ ಜನಸಂಘದ ಯಾವುದೇ ಮಹತ್ವದ ಸಾರ್ವಜನಿಕ ಸಭೆಯಲ್ಲೂ ಇವರೇ ಸ್ಟಾರ್ ಅಟ್ರ್ಯಾಕ್ಷನ್. ಜೊತೆಗಿದ್ದ ಬಲರಾಜ್ ಮುಧೋಕ್ ಸಿಡಿ ಗುಂಡಿನ ಹಾಗೆ. ಎದೆಗೊದೆಯುವಂಥ ಮಾತು. ಇದಕ್ಕೆ ತದ್ವಿರುದ್ಧ ವಾಜಪೇಯಿ. ಮೆಲು ಮಾತು. ಸಣ್ಣದೊಂದು ತಮಾಷೆ. ಒಂದು ಶಾಯರಿಯ ಸಾಲು. ಕನಸು ಬಿಚ್ಚಿಡುವ ಹಾಗೆ ಮೂಡುವ ಮಾತು. ಅದಕ್ಕೆ ತಕ್ಕ ಹಾವ, ಭಾವ.

ಜನಸಂಘದ ಉಳಿದ ಯಾವ ನಾಯಕರೂ ಹೀಗಿರಲಿಲ್ಲ. ಪಕ್ಷ ಹುಟ್ಟು ಹಾಕಿದ ಶ್ಯಾಮಪ್ರಸಾದ ಮುಖರ್ಜಿ ಅವರೇ ಪಾರ್ಲಿಮೆಂಟಲ್ಲಿ ನಿಂತು, ಅಂದಿನ ಪ್ರಶ್ನಾತೀತ ನಾಯಕ, ಪ್ರಧಾನಿ ನೆಹರೂಗೆ "ನಿಮ್ಮ ತಲೇ ಮೇಲೂ ಏನೂ ಬೆಳೆಯೋದಿಲ್ಲ. ಹಾಗಾದರೆ ಯಾರಾದರೂ ಕೇಳಿದರೆ ಕೊಟ್ಟುಬಿಡೋದೇ?" ಎಂದು



ಗದರಿದ್ದರು. ಆನಂತರ ಬಂದ ದೀನದಯಾಳ ಉಪಾಧ್ಯಾಯ ತೀರಾ ಖಡಕ್ಕು ವಿಚಾರದ, ಸಾಮಾನ್ಯ ಜನಕ್ಕೆ ಅರ್ಥವೇ ಆಗದಂಥ ಸಿದ್ಧಾಂತಗಳನ್ನು ಮಂಡಿಸುತ್ತಾ ಇದ್ದರು. ಇದ್ದುದರಲ್ಲಿ, ಆಗ ರಾಜಕೀಯವಾಗಿ ಪ್ರಬಲರಾಗಿದ್ದು, ಕೊಂಚ ಜನಪ್ರಿಯತೆಯನ್ನೂ ಗಿಟ್ಟಿಸಿದ್ದ ಕನ್ನಡಿಗ ಜಗನ್ನಾಥರಾವ್ ಜೋಷಿ ನಗೆ ಮಾತಲ್ಲಿಯೇ ಆಡಳಿತ ಪಕ್ಷವನ್ನು, ಅದರ ನಾಯಕರನ್ನೂ ಕೆತ್ತಿ ಕೆತ್ತಿ ಕೆಡವುತ್ತಿದ್ದರು.

ಕೊನೆಗೆ ಉಳಿದವರು ಲಾಲ್‌ಕೃಷ್ಣ ಅಡ್ವಾಣಿ ಮತ್ತು ವಾಜಪೇಯಿ. ಆರೆಸ್ಸೆಸ್‌ಗೆ ಮಾತ್ರ ಇವತ್ತಿಗೂ ಅಡ್ವಾಣಿಯೇ ಇಷ್ಟ. ಅವರು ಮತ್ತು ಮುರುಳಿಮನೋಹರ ಜೋಷಿ ಆರೆಸ್ಸೆಸ್ ಎರಕದಲ್ಲಿ ಹಾಕಿ ತೆಗೆದವರಂತೆ. ಆದರೆ ಇವರ್‍ಯಾರನ್ನೂ ಇಡೀ ದೇಶದ ಜನ ನಾಯಕರೆಂದು ಒಪ್ಪುವುದಿಲ್ಲ ಎಂದು ಮನವರಿಕೆ ಆದದ್ದೇ ವಾಜಪೇಯಿ ಅನಿವಾರ್ಯವಾದರು.

ಬಾಬರಿ ಮಸೀದಿ ಕೆಡವಿದ್ದಕ್ಕೆ ಕೊಂಚವಾದರೂ ನೊಂದುಕೊಂಡ ಬಲಪಂಥೀಯ ನಾಯಕ ಎಂದರೆ ವಾಜಪೇಯಿ ಮಾತ್ರ. ಆರೆಸ್ಸೆಸ್‌ಗೆ ಈಗ ಅವರು ಅನಿವಾರ್ಯ. ಗ್ವಾಲಿಯರ್‌ನ ರಾಜಮಾತೆಯ ಕೃಪಾಶೀರ್ವಾದದಿಂದಲೇ ರಾಜಕೀಯದಲ್ಲಿ ಮುನ್ನಡೆ ಸಾಧಿಸುತ್ತಾ ಬಂದ ಅವರಿಗೆ, ಸೋಲಿನ ರುಚಿ ಕರುಣಿಸಿದ್ದು ರಾಜಮಾತೆಯ ಪುತ್ರ ಮಾಧವರಾವ್ ಸಿಂಧಿಯಾ ಒಬ್ಬರೇ.

ಐದು ದಶಕಗಳಿಗೂ ಹೆಚ್ಚಿನ ರಾಜಕೀಯದ ನಡುವೆಯೂ ಒಳ್ಳೆಯ ಅಡುಗೆ ಮಾಡುತ್ತಾ, ಸ್ಕಾಚ್ ವಿಸ್ಕಿ ಸವಿಯುತ್ತಾ, ರಸಿಕತೆಯನ್ನು ಸಾಧಿಸುತ್ತಾ, ಅದರ ಬಗ್ಗೆ ಸಂಕೋಚವಿಲ್ಲದೇ ಮಾತಾಡಿದವರು ವಾಜಪೇಯಿ.

ರಾಜಕೀಯದ ವಿಚಿತ್ರ ತಾಕಲಾಟ ಏನೆಲ್ಲ ಮಾಡಿಸುತ್ತದೆ. ಇಂದಿರಾ ವಿರುದ್ಧ ಎಪ್ಪತ್ತರ ದಶಕದಲ್ಲಿ ರಾಜಕೀಯ ಹೊಂದಾಣಿಕೆಗೆ ಮುಂದಾದ ಮೇಲೆಯೇ ಜನಸಂಘಿಗಳು ಅಧಿಕಾರದ ರುಚಿ ನೋಡಿದ್ದು. ಕಳೆದ ಎರಡು ವರ್ಷಗಳಲ್ಲಿ ಅಧಿಕಾರಕ್ಕೆ ಅಂಟಿ ಉಳಿಯಲು ಹಲವು ಪ್ರಯೋಗ ನಡೆದಿವೆ.

ವಾಜಪೇಯಿ ಬೇರೊಂದು ರೂಪದಲ್ಲಿ ಕಾಣಿಸತೊಡಗಿದ್ದಾರೆ. ಇದು ಬದಲಾವಣೆಯೋ, ನಿಜಕ್ಕೂ ಅವರಿದ್ದುದೇ ಹಾಗೆಯೋ!

ಉತ್ತರ ಅವರು ಮಾತ್ರ ಹೇಳಲು ಸಾಧ್ಯ.

**ಕೊನೆ ಗುಟುಕು:** ಸೋಲು ಗೆಲುವಿನ ಮೆಟ್ಟಿಲು ಎನ್ನುತ್ತಾರೆ. ವಾಜಪೇಯಿ ಮಟ್ಟಿಗೆ ಇದು ತೀರಾ ನಿಜ. 1996ರಲ್ಲಿ ಹದಿಮೂರು ದಿನ ಪ್ರಧಾನಿ. ವಿಶ್ವಾಸ ಮತ ಎದುರಿಸದೇ, ಕೊನೆಗಳಿಗೆಯಲ್ಲಿ ಲೋಕಸಭೆಯಿಂದ ನೇರ ರಾಷ್ಟ್ರಪತಿ ಭವನಕ್ಕೆ ಹೋದರು. ಕೈಯಲ್ಲಿ ರಾಜೀನಾಮೆ ಪತ್ರವಿತ್ತು.

ಆಮೇಲೆ 1998ರಲ್ಲಿ ಮತ್ತೆ ಅಧಿಕಾರಕ್ಕೆ ಬಂದರು. ಅನುತಾಪದ ಮತಗಳು ಅವರನ್ನು ಗದ್ದುಗೆಗೆ ತಂದವು. 13 ತಿಂಗಳ ಅಧಿಕಾರ. ವಿಶ್ವಾಸ ಮತ ಸೋತಿದ್ದು ಒಂದು ಮತದಿಂದ. ನಂತರದ ಚುನಾವಣೆಯಲ್ಲಿ 'ಒಂದು ಮತ, ಒಂದೇ ಒಂದು ಮತ ಕೊಡಿ' ಎಂದು ಜನರಿಗೆ ಕರೆ ನೀಡಿದ ವಾಜಪೇಯಿ ಮತ್ತೆ ಗೆದ್ದು ಅಧಿಕಾರ ಹಿಡಿದಿದ್ದಾರೆ. ಸಂಗಾತಿಗಳು ಮಾತ್ರ ಬದಲಾಗಿದ್ದಾರೆ. ರಾಜಕೀಯದಲ್ಲಿ ಎಲ್ಲವೂ ಸರಿ ಎಂಬುದೇ ಈಗ ಅವರ ನಿಲುವು.

■ ಸುಹಾಸ.

# ವಿಶ್ವೇಶ್ವರಯ್ಯನವರ ಖಾಜಿನ್ಯಾಯ

**ಈಗಲೂ ಹಳೇ ಮೈಸೂರಿನ ಭಾಗಗಳಲ್ಲಿ ದೇವರ ಫೋಟೋಗಳ ಜೊತೆಗೇ ಸರ್ ಎಂ.ವಿ. ಅವರ ಫೋಟೋ ಕಾಣುತ್ತಿದೆ. ಅದಕ್ಕೆ ಉಳಿದೆಲ್ಲಾ ದೇವರುಗಳ ಹಾಗೆ ನಿತ್ಯ ಪೂಜೆಯೂ ಸಲ್ಲುತ್ತದೆ. ಅದಕ್ಕೆ ಅರ್ಹರಾದ ವ್ಯಕ್ತಿ ಅವತ್ತು ಕನ್ನಂಬಾಡಿ ಎಂಬಲ್ಲಿ ಕೃಷ್ಣರಾಜ ಜಲಾಶಯಕಟ್ಟಿ ಮಾಡಿದ ಉಪಕಾರ ದೊಡ್ಡದು - ಅದರ ಸ್ಮರಣೆ ಇಲ್ಲಿದೆ.**



ನೀವು ಹೈದರಾಬಾದಿಗೆ ಹೋಗಿ, ದೆಹಲಿಗೆ ಹೋಗಿ ಅಲ್ಲೊಂದು ಸರ್.ಎಂ. ವಿಶ್ವೇಶ್ವರಯ್ಯನವರ ಪ್ರತಿಮೆ ನೋಡಿ, ಈ ಶತಮಾನದ ದೊಡ್ಡ ವ್ಯಕ್ತಿಗಳಲ್ಲಿ ನಿಸ್ಸಂದೇಹವಾಗಿ ಒಬ್ಬರಾದ ಸರ್.ಎಂ.ವಿ. ಇಲ್ಲೆಲ್ಲ ಏನು ಮಾಡಿದರು, ಪ್ರತಿಮೆ ಕಟ್ಟಿಸಿಕೊಳ್ಳಲು ಎಂದು ಆಶ್ಚರ್ಯ ಪಡಬಹುದು. ಇವರೆಡು ಪ್ರದೇಶಗಳನ್ನು ಸೇರಿ ಹಲವಾರು ಕಡೆ ನೀರು ಮತ್ತು ಒಳಚರಂಡಿ ವ್ಯವಸ್ಥೆ ಮಾಡಿದವರು ಸರ್.ಎಂ.ವಿ.

ಬೆಂಗಳೂರಿನಲ್ಲಂತೂ ನೀವು ಯಾವ ಒಳ್ಳೆಯ ಕಾರ್ಯಗಳ ಬಗ್ಗೆ ನಿಂತು ಯೋಚಿಸಿದರೂ ಅದರ ಮೂಲ ಎಂ.ವಿ.ಕಡೆ ಕೈ ತೋರಿಸುತ್ತೆ. ಜೋಗ ಮತ್ತು ಅದರಿಂದ ಉತ್ಪತ್ತಿಯಾಗುವ ವಿದ್ಯುಚ್ಛಕ್ತಿ, ರಾಜ್ಯದ ಪ್ರಥಮ ರೈಲ್ವೆ ತಾವಿದ್ದತನಕ ಮತ್ತು ಸ್ವಲ್ಪ ವರ್ಷಗಳ ನಂತರ ಲಾಭ ಮಾಡುತ್ತಿದ್ದ ಭದ್ರಾವತಿ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆ, ಚೇಂಬರ್ ಆಫ್ ಕಾಮರ್ಸ್‌ನ ಮೂಲ ಸ್ವರೂಪ, ರಾಜ್ಯದ ಪ್ರಪ್ರಥಮ ಬ್ಯಾಂಕ್ ಎಸ್.ಬಿ.ಎಂ., ಬರೇ ದುಡಿದರೆ ಸಾಲದು, ಸೂಕ್ತ ರೀತಿಯ ವಿಶ್ರಾಂತಿಯೂ ಮುಖ್ಯ ಎಂದು ತೋರಿಸಿಕೊಡಲು 'ಸೆಂಚುರಿ ಕ್ಲಬ್' ಈವತ್ತಿಗೂ ಬೇರೆಯವರಿಗೆ ಮಾದರಿ. ಕಟ್ಟಿದಾಗ ರಾಷ್ಟ್ರದ ಅತಿ ದೊಡ್ಡ ಜಲಾಶಯ ಕೆ.ಆರ್.ಎಸ್. ಹೀಗೆ ಪಟ್ಟಿ ಬೆಳೆಯುತ್ತ ಹೋಗಿ, ಬೇರೇನು ತೋಚದೆ ಅವರನ್ನು ಪ್ರತಿಮೆ ಆಗಿ ಮಾಡಿ, ಅದರ ಮೂಲಕ ನಮಗೆ ಅವರ ನೆನಪನ್ನು ತರುತ್ತ ಇದ್ದಾರೆ. ಜತೆಗೆ ಒಬ್ಬ ಮನುಷ್ಯ ಇಷ್ಟೆಲ್ಲಾ ಮಾಡಲು ಸಾಧ್ಯವಾಯಿತೆ ಎಂಬ ವಿಸ್ಮಯ ಕೂಡ ಹುಟ್ಟಿಸುತ್ತಾರೆ.

ಆದರೆ ಇವೆಲ್ಲಾ ಯಾವ ರೀತಿಯ ಅಡೆ ತಡೆಗಳಿಲ್ಲದೆ, ವಿರೋಧವಿಲ್ಲದೆ ತನ್ನಷ್ಟಕ್ಕೆ ತಾನೆ ನಡೆಯುತ್ತ ಹೋದವು ಎಂದು ತಿಳಿಯಬೇಡಿ. ಎಲ್ಲ ರೀತಿಯ ವಿರೋಧಗಳು, ಈ ಕಾಲದ ಇಂಜಿನಿಯರ್, ರಾಜಕಾರಣಿಗಳಂತೆ ಬಂದು ಹೋದವು. ಎಂ.ವಿ. ಅವರು ಅದನ್ನು ತಮ್ಮದೇ ಆದ ರೀತಿಯಲ್ಲಿ ಪರಿಹರಿಸಿಕೊಂಡರು. ಅದರ ಮೂಲಕ ತಾವು ಕೇವಲ ಮುದುಡಿದ ಮನಸ್ಸಿನ ಚಿಪ್ಪಿನಿಂದ ಹೊರಬರಲು ತವಕ ಪಡದ ಪ್ರತಿಭಾವಂತ ಮಾತ್ರ ಅಲ್ಲ ಎಂಬುದನ್ನು ತೋರಿಸಿಕೊಟ್ಟರು. ಅವಕ್ಕೆ ಸಂಬಂಧಿಸಿದ ಒಂದು ಘಟನೆ.

## ಆರು ದಶಕಗಳ ಹಿಂದಿನ ಒರಿಸ್ಸಾ ನಂಟು

ಒರಿಸ್ಸಾ ಈಗ ಸುದ್ದಿಯ ಕೇಂದ್ರ. ಬೀಸಿ ಹೋದ ಚಂಡಮಾರುತ ಕಡಿದುರುಳಿಸಿದ ಮರ, ಮನೆ, ಕುಟುಂಬಗಳಿಗಾಗಿ ಜಗತ್ತಿನಾದ್ಯಂತ ಅನುತಾಪ.

ಇವತ್ತಿನ ಈ ಚಂಡಮಾರುತ ಮಾಡಬಹುದಾಗಿದ್ದ ಇನ್ನೂ ಹೆಚ್ಚಿನ ಹಾನಿಯನ್ನು ತಪ್ಪಿಸಿದವರು ರಾಜ್ಯದವರಾದ ಸರ್.ಎಂ.ವಿಶ್ವೇಶ್ವರಯ್ಯ. 1930ರಲ್ಲಿ ಒರಿಸ್ಸಾ ಸದಾ ಪ್ರವಾಹದ ಗೂಡು. ಇದನ್ನು ಕಂಡ ಗಾಂಧೀಜಿ, ಏನಾದರೂ ಪರಿಹಾರ ಹುಡುಕಲೇಬೇಕು ಎಂದು ನಿರ್ಧರಿಸಿದರು. ಆಗ ಅವರಿಗೆ ನೆನಪಾದದ್ದು ಸರ್ ಎಂ.ವಿ. 'ಪ್ರವಾಹದ ಹಾನಿ ತಪ್ಪಿಸಲು ಏನಾದರೂ ಮಾಡಲು ಸಾಧ್ಯವೇ?' ಎಂದು ಖುದ್ದು ಕೋರಿದ್ದರು.

. ಒರಿಸ್ಸಾಗೆ ಭೇಟಿ ನೀಡಿ ಅಲ್ಲಿನ ಸ್ಥಿತಿ ಕಂಡ ವಿಶ್ವೇಶ್ವರಯ್ಯ ಪ್ರವಾಹ ನಿಯಂತ್ರಣಕ್ಕೆ ಮೂರು ಚೆಕ್‌ಡ್ಯಾಂ ನಿರ್ಮಿಸಲು ಸಲಹೆ ಮಾಡಿದರು. ಅದು ಆಗಿ ಪ್ರವಾಹದ ಹಾವಳಿ ತಪ್ಪಿತು.

ಅವತ್ತು ವಿಶ್ವೇಶ್ವರಯ್ಯ ಆ ಕೆಲಸ ಮಾಡದೇ ಇದ್ದಿದ್ದರೆ ಇವತ್ತಿನ ಚಂಡಮಾರುತದ ಹಾನಿ ಇನ್ನೂ ಭೀಕರವಾಗಿ ಇರುತ್ತಿತ್ತು.

ಕೃಷ್ಣರಾಜಸಾಗರ ಜಲಾಶಯದ ಬಗ್ಗೆ, ತಾವೊಬ್ಬರು ಮಾತ್ರ ಕೊಡಲು ಸಾಧ್ಯವಾಗುವಂತಹ ರೀತಿಯಲ್ಲಿ ಎಂ.ವಿ. ವರದಿಯೊಂದನ್ನು ಮಹಾರಾಜರಿಗೆ ಕೊಟ್ಟಿದ್ದರು. ಆದರೆ ಬೆಳವಣಿಗೆ ಮಾತ್ರ ಸೊನ್ನೆ, ಮೂರು ವರ್ಷಗಳ ಕಾಲ. ಸರಕಾರಕ್ಕೆ ಇಷ್ಟವಾಗದ ಪ್ರಾಜೆಕ್ಟನ್ನು ಬಲವಂತವಾಗಿ ಹೇರಬಾರದು ಎಂಬುದು ಎಂ.ವಿ. ಅವರ ನಿರ್ಗುಣ ಧೋರಣೆಗಳಲ್ಲೊಂದು.

ಒಮ್ಮೆ ಮಹಾರಾಜರು, ಕುದುರೆಯ ಮೇಲೆ ವಾಕಿಂಗ್ ಹೋಗುತ್ತಿದ್ದಾಗ, ಕೆ.ಆರ್.ಎಸ್. ಬಳಿ, ಅರೆ ಇಲ್ಲಿ ಏನೋ ಆಗಬೇಕು ಎಂದು ಎಂ.ವಿ. ತಿಳಿಸಿದ್ದರಲ್ಲ ಎಂದು ಆಲೋಚನೆ ಬಂದು, ಅರಮನೆಗೆ ಹಿಂದಿರುಗಿ ಎಂ.ವಿ. ಅವರನ್ನು ಕರೆಸಿಕೊಂಡರು. ಎಂ.ವಿ. ಜಲಾಶಯದ ವರದಿ ಸಲ್ಲಿಸಿದ್ದನ್ನು ನೆನಪಿಸಿದರು. ಈಗದು ಏನಾಯಿತೆಂದಾಗ ಆ ಕಾಲದ ಚೀಫ್ ಅಕೌಂಟೆಂಟ್ ನರಸಿಂಗರಾವ್ ಅವರ ಬಳಿ ವಿಚಾರಿಸಿದರೆ ತಿಳಿಯುವುದೆಂದು ಗೊತ್ತಾಯ್ತು.

> ವಿಶ್ವೇಶ್ವರಯ್ಯ ಅವರನ್ನು ಶತಮಾನದ ವ್ಯಕ್ತಿ ಎಂದು 'ಟೈಮ್ಸ್ ಆಫ್ ಇಂಡಿಯಾ' ದಿನಪತ್ರಿಕೆ ಆರಿಸಿದೆ. ಇಂಥ ಒಂದು ಆಯ್ಕೆಗೆ ಅವರು ಅರ್ಹರು. ಜನರ ಅಭಿಪ್ರಾಯ ಆಧರಿಸಿ ಈ ಆಯ್ಕೆ ನಡೆಸಲಾಯಿತು. ಇಡೀ ಶತಮಾನದ ಉದ್ದಕ್ಕೂ ತಮ್ಮ ಪ್ರಭಾವ ಉಳಿಸಿಕೊಂಡ ಚೇತನ ಸರ್ ಎಂ.ವಿ. ಅವರದು.

ಎಂ.ವಿ. ಅವರಂತೆ ಈ ಅಕೌಂಟೆಂಟೂ ಬ್ರಾಹ್ಮಣರೇ. ಆದರೆ ಇಂಜಿನಿಯರ್ ಬಗ್ಗೆ ಅಸೂಯೆಯೂ ಇತ್ತು. ಹಾಗಾಗಿ ಹಲವಾರು ಮಂದಿಗೆ ಈ ಮುಲುಕುನಾಡು ಇಂಜಿನಿಯರ್‌ಗೆ ಇನ್ನಷ್ಟು ಖ್ಯಾತಿ ಬರುವುದು ಇಷ್ಟವಿರಲಿಲ್ಲ.

ರಾಜರು ನರಸಿಂಗರಾಯರನ್ನು ಕರೆಸಿದಾಗ, ಅವರು ವರದಿ ತಮ್ಮ ಬಳಿ ಇದೆಯೆಂದೂ, ಒಂದು ವರ್ಷದ ಬಜೆಟ್ಟಿಗಿಂತ, ಈ ಕಾರ್ಯಕ್ಕೆ ಮೂರರಷ್ಟು ಆಗುವುದೆಂದೂ, ಇದಕ್ಕಿಂತ ಮುಖ್ಯವಾಗಿ ಹಾಕಿದ ಹಣವನ್ನು ವಾಪಸ್ಸು ಪಡೆಯುವ ರೀತಿಯೇ ಸೂಚಿಸಿಲ್ಲ ಎಂದರು.

ಮಹಾರಾಜರು ಎಂ.ವಿ. ಯವರನ್ನು ವಿಚಾರಿಸಿದರು. ಅವರು ವರದಿಯಲ್ಲೇ ಈ ಕಾರ್ಯವನ್ನು ಹಂತ ಹಂತವಾಗಿ ಮುಗಿಸುವುದರಿಂದ ಪ್ರಾಜೆಕ್ಟ್‌ಗೆ ಅವಶ್ಯಕವಾದ ಹಣವನ್ನು ಒಂದೇ ವರ್ಷಕ್ಕೆ ಬಿಡುಗಡೆ ಮಾಡಬೇಕಿಲ್ಲ ಎಂದು ಸೂಚಿಸಿರುವುದನ್ನು ನೆನಪಿಸಿದರು. ಅಕೌಂಟೆಂಟ್ ಹೇಳುವಂತೆ ಇಂತಹ ಪ್ರಾಜೆಕ್ಟಿನಿಂದ ಸರ್ಕಾರ ಹಾಕಿದ ಬಂಡವಾಳವನ್ನು ವಾಪಸ್ಸು ನೇರವಾಗಿ ಪಡೆಯಲು ಸಾಧ್ಯವೇ ಇಲ್ಲ. ಕೆಲವು ಪ್ರಾಜೆಕ್ಟುಗಳ ಉದ್ದೇಶ ಕೂಡ ಅದಲ್ಲ. ರಾಜರು ಇನ್ನು ಹೇಗೆ ಎಂದು ವಿವರ ಬಯಸಿದಾಗ, ಎಂ.ವಿ. ಅವರು, ಮುಂದೆ ಜನ ಆ ನೀರನ್ನು ಬಳಸಿ, ವ್ಯವಸಾಯಕ್ಕೆ ಸಂಬಂಧಪಟ್ಟ ವ್ಯಾಪಾರವೂ ತಲೆ ಎತ್ತಿ, ವ್ಯವಸಾಯಕ್ಕೆ ಸಂಬಂಧಪಟ್ಟ ಸಲಕರಣೆಗಳು, ಗೊಬ್ಬರ, ಔಷಧಿ, ಇವುಗಳ ವ್ಯಾಪಾರವೂ ಆರಂಭವಾಗಿ, ಏನೂ ಇರದ ರೈತರು ಒಂದು ಮಟ್ಟದ ಶ್ರೀಮಂತಿಕೆ ಗಳಿಸಿದಾಗ, ತಾವಾಗಿಯೇ ಕರ ರೂಪದಲ್ಲಿ ಸರ್ಕಾರಕ್ಕೆ ಪೀಕುತ್ತಾರೆ. ಹೀಗೆ ಅಪರೋಕ್ಷ ರೀತಿಯಲ್ಲಿ ಸರ್ಕಾರಕ್ಕೆ ಬಂದ ಅಧಿಕ ಹಣ ಬಂಡವಾಳದ ಲೆಕ್ಕದಲ್ಲಿ ಜಮ ಆಗುತ್ತೆ ಎಂದರು. ಅಭಿವೃದ್ಧಿ ಕಾಮಗಾರಿಗೆ ಸಂಬಂಧಪಟ್ಟ ಎಲ್ಲ ಕಾರ್ಯಗಳಲ್ಲೂ ಇದು ಹೀಗೆಯೆ ಎಂದು ತಿಳಿಸಿದರು. ಮಹಾರಾಜರು ಕೆಲಸ ಆರಂಭಿಸಲು ಪರವಾನಿಗೆ ಕೊಟ್ಟರು.

ಬೆಳವಣಿಗೆ ಪ್ರಗತಿ ಕಾಣುತ್ತಿದ್ದಂತೆ ಸಮಸ್ಯೆಗಳೂ ಆರಂಭವಾದವು. ಮದರಾಸಿನ ಕಡೆಯವರು ಜಲಾಶಯದಿಂದ ತಮಗೆ ಬರುವ ಕಾವೇರಿ ನೀರು ಕಡಿಮೆಯಾಗಬಹುದು ಎಂಬ ತಕರಾರು ಎತ್ತಿದರು. ಎಂ.ವಿ. ಅವರು ಮೊದಲು ಹಾಗೆ ಕಂಡರೂ ಮದರಾಸಿನವರಿಗೆ ತಮಗೆ ಬರಬೇಕಾದ ವರ್ಷದ ಒಟ್ಟು ನೀರಿಗೆ ಯಾವ ರೀತಿಯೂ ಮೋಸವಾಗುವುದಿಲ್ಲ, ನೀರಿಲ್ಲದಾಗ ಜಲಾಶಯದ ಸುತ್ತ ಮುತ್ತಿನ ಜನರಿಗೆ ಸಹಾಯವಾಗುತ್ತೆ, ಅತಿವೃಷ್ಟಿ ಆದಾಗ ಜಲಾಶಯದ ಬಾಗಿಲುಗಳು ತಾವಾಗಿಯೇ ತೆರೆದುಕೊಂಡು ನಂಜನಗೂಡಿನ ಮೂಲಕ ಮೆಟ್ಟೂರಿಗೆ ಬರುವುದನ್ನು ತಪ್ಪಿಸಲು ಆ ಭಗವಂತನ ಕೈಯಲ್ಲೂ ಸಾಧ್ಯವಿಲ್ಲ ಎಂದು ವಾರ್ಷಿಕ ವರದಿಗಳೊಡನೆ ವಿವರಿಸಿದಾಗ ಮದರಾಸಿನವರು ಸುಮ್ಮನಾದಂತೆ ತೋರಿದರೂ ಜಲಾಶಯದ ಕಾರ್ಯದ ಪ್ರಗತಿ ನಿಧಾನವಾಗಲು ತರಲೆ ಕೆಲಸಗಳನ್ನು ಆರಂಭಿಸಿದರು.

ಇದರ ಮೊದಲ ಸೂಚನೆ ಕೂಲಿ ಕೆಲಸಕಾರರ ಸ್ಟ್ರೈಕ್; ಹಲವಾರು ಬೇಡಿಕೆಗಳಿದ್ದರೂ ಮುಖ್ಯ ಬೇಡಿಕೆ, ತಮ್ಮ ದಿನಭತ್ಯೆ ಎಪ್ಪತ್ತೈದು ಪೈಸೆಯಿಂದ ಒಂದೂವರೆ ರೂಪಾಯಿ ಆಗಬೇಕೆಂಬುದು. ಮುಷ್ಕರ ಆರಂಭವಾಗಿ ಕೆಲಸ ಪೂರ್ತಿ ನಿಂತು ಹೋಯಿತು. ಮಹಾರಾಜರು ಎಂ.ವಿ. ಅವರನ್ನು ಕರೆಸಿದರು. ಎಂ.ವಿ. ಅವರು ಬೇಡಿಕೆಗಳ ವಿವರ, ಕೆಲಸ ನಿಂತರೆ ಆಗುವ ಖರ್ಚು ಇವೆಲ್ಲವನ್ನು ಎರಡು ದಿನ ಅಧ್ಯಯನ ಮಾಡಿ ಪರಿಹಾರ ಸೂಚಿಸುತ್ತೇನೆಂದರು.

ಮತ್ತೆ ಮಹಾರಾಜರನ್ನು ಭೇಟಿಯಾದಾಗ ವಿಶ್ವೇಶ್ವರಯ್ಯನವರು ಕೂಲಿಗಳ ದಿನಭತ್ಯ ಒಂದೂವರೆ ರೂಪಾಯಿ ಯಾಕೆ ಎರಡು ರೂಪಾಯಿಗೆ ಏರಿಸಬಹುದೆಂದರು. ಹಾಗೆಯೇ ಕಡ್ಡಾಯವಾಗಿ ಜಲಾಶಯ ಸುತ್ತ ಮುತ್ತ ಪ್ರದೇಶವನ್ನು ರಾಷ್ಟ್ರೀಕರಿಸಬೇಕೆಂದರು. ಈ ಪ್ರದೇಶದಲ್ಲೇ ಎರಡು ಸಾರಾಯಿ ಅಂಗಡಿಗಳನ್ನು ಸರ್ಕಾರವೇ ಸ್ಥಾಪಿಸಬೇಕೆಂದರು. ಇನ್ನು ಕೆಲವು ಸೂಚನೆಗಳಿದ್ದವು, ಆದರೆ ಇವೆರಡೂ ಪ್ರಧಾನವಾದವು.

ಕೂಲಿಗಳೆಲ್ಲರೂ ಸಂತೋಷವಾಗಿ ಕೆಲಸ ಪ್ರಾರಂಭಿಸಿದರು. ಸಂಜೆ ಗಡಂಗಿಗೆ ದೂರ ಹೋಗಬೇಕಿರಲಿಲ್ಲ. ಜಲಾಶಯದ ಪ್ರದೇಶದಲ್ಲೇ ಎರಡಿದ್ದವು ಸಾರಾಯಿ ಅಂಗಡಿ. ಅಲ್ಲಿ ಸ್ವಲ್ಪ ದರ ಹೆಚ್ಚು, ಆದರೆ ಕೈಯಲ್ಲೇ ಹೆಚ್ಚಿನ ಸಂಬಳವಿದ್ದರಿಂದ ಅದು ದುಬಾರಿ ಸಾರಾಯಿ ಎನ್ನಿಸಲಿಲ್ಲ. ಅವರು ಅಲ್ಲೇ ಕುಡಿಯುವ ತನಕ ಸರ್ಕಾರಕ್ಕೆ ಬೇರೆಲ್ಲ ಕಡೆಗಿಂತ ಹೆಚ್ಚಿದ ದರಲ್ಲಿ ನಡೆದು ಈ ಜಲಾಶಯ ಪ್ರದೇಶದ ಸಾರಾಯಿ ಅಂಗಡಿಯಿಂದ ಹೆಚ್ಚು ಲಾಭ ಬಂದು ಕೂಲಿಗಳಿಗೆ ಅಧಿಕ ಭತ್ಯೆ ನೀಡಿದ್ದರಿಂದ ಆದ ಖರ್ಚನ್ನು ಜಮ ಆಗುವಂತೆ ನೋಡಿಕೊಂಡಿತು. ಹಾಗೆಯೇ ಜಲಾಶಯ ಕಾರ್ಯವೂ ವೇಗವಾಗಿ ನಡೆಯಲಾರಂಭಿಸಿತು.

■ ರಾಜು

---

ಅವನ ಹೆಸರು ಟೆಡ್ ಹಾಫ್. ಸ್ಟ್ಯಾನ್‌ಫರ್ಡ್ ಯೂನಿವರ್ಸಿಟಿಯಲ್ಲಿ ಡಿಗ್ರಿ ಮುಗಿಸಿದ್ದ. ಒಂದು ಸಂಶೋಧನಾ ಪ್ರಾಜೆಕ್ಟ್ ವಹಿಸಿಕೊಂಡ. ಅಂಗೈಯಲ್ಲಿ ಹಿಡಿಯಬಹುದಾದ ಕ್ಯಾಲ್ಕುಲೇಟರ್‌ಗೆ ಚಿಪ್ ಒಂದನ್ನು ರೂಪಿಸಬೇಕಿತ್ತು.

ಸಿಲಿಕಾನ್‌ನಿಂದ ವಿವಿಧ ಚಿಪ್ ರೂಪಿಸಿದ ಹಾಫ್. ಅದರಲ್ಲಿ ಹೆಬ್ಬೆರಳ ಗಾತ್ರದ ಒಂದು ಚಿಪ್ ಇತ್ತು. ಅದನ್ನು ಅಳವಡಿಸಿದರೆ ಕ್ಯಾಲ್ಕುಲೇಟರ್‌ನಲ್ಲಿ ಲೆಕ್ಕ ಹಾಕುವುದು ಒಂದೇ ಅಲ್ಲ. ಇವತ್ತಿನ ಕಂಪ್ಯೂಟರ್ ಏನೆಲ್ಲ ಕೆಲಸ ಮಾಡುತ್ತದೋ ಅದೆಲ್ಲ ಮಾಡಬಹುದಿತ್ತು. ಆಗಿನ ಕಾಲಕ್ಕೇ ಐಬಿಎಮ್ ಕಂಪೆನಿ ರೂಪಿಸಿದ್ದ ಟೇಬಲ್ ಗಾತ್ರದ ಮೂರು ಲಕ್ಷ ಡಾಲರ್ ಬೆಲೆಯ ಕಂಪ್ಯೂಟರ್‌ಗೆ ಅದು ಸಮನಾಗಿತ್ತು.

ಆದರೆ ಪ್ರಾಜೆಕ್ಟ್ ವಹಿಸಿದ್ದ ಇಂಟೆಲ್ ಕಂಪೆನಿಗೆ ಈ ಬೆರಳ ಗಾತ್ರದ ಚಿಪ್‌ನಿಂದ ಏನು ಮಾಡಬೇಕು ಎಂಬುದೇ ತಿಳಿಯದಾಯಿತು. ಕೊನೆಗೆ ದಿಕ್ಕು ತೋಚದೇ 1971ರ ನವೆಂಬರ್ ತಿಂಗಳಲ್ಲಿ 'ಎಲೆಕ್ಟ್ರಾನಿಕ್ ನ್ಯೂಸ್' ಪತ್ರಿಕೆಯಲ್ಲಿ ಒಂದು ಜಾಹೀರಾತನ್ನೇ ನೀಡಿತು. ಹೀಗೊಂದು ಉಪಕರಣ ಕಂಡು ಹಿಡಿಯಲಾಗಿದೆ. ಇದರಿಂದ ಏನು ಉಪಯೋಗ ಎಂಬುದು ಯಾರಿಗಾದರೂ ತಿಳಿದಿದ್ದರೆ ವಿವರಿಸಬೇಕು ಎಂದೂ ಸೂಚಿಸಲಾಗಿತ್ತು.

ಅದನ್ನೇ ಈಗ ಮೈಕ್ರೋ ಪ್ರೋಸೆಸರ್ ಎಂದು ಕರೆಯಲಾಗುತ್ತದೆ. ನಮ್ಮ ವಾಷಿಂಗ್ ಮಷೀನು, ಕಾರ್ ಎಂಜಿನುಗಳಲ್ಲಿ ಪೆಟ್ರೋಲ್ ಮತ್ತು ಲ್ಯೂಬ್ರಿಕೆಂಟ್ ಪ್ರಮಾಣ ನಿರ್ಧರಿಸಲು - ಹೀಗೆ ನಾನಾ ರೀತಿಯ ಯಂತ್ರಗಳಲ್ಲಿ ಇವತ್ತು ಮೈಕ್ರೋಪ್ರೋಸೆಸರ್ ಬಳಕೆ ಆಗುತ್ತಿದೆ. ಇಡೀ ಜಗತ್ತಿನ ಕಂಪ್ಯೂಟರ್ ತಂತ್ರಜ್ಞಾನದ ಕ್ರಾಂತಿಕಾರಿ ಬದಲಾವಣೆಗೆ ಕಾರಣವಾದ 'ಚಿಪ್' ಕಂಡುಹಿಡಿದ ಟೆಡ್ ಹಾಫ್ ಅದರ ಪೇಟೆಂಟ್ ಪಡೆಯಲೂ ಇಲ್ಲ. ಪ್ರಾಜೆಕ್ಟ್ ವಹಿಸಿಕೊಟ್ಟಿದ್ದ ಇಂಟೆಲ್ ಸಂಸ್ಥೆ ಕೂಡ ಆ ಬಗ್ಗೆ ತಲೆ ಕೆಡಿಸಿಕೊಳ್ಳಲಿಲ್ಲ.

'ಯಾಕೆ ಹಾಗೆ ಮಾಡಿದೆ?' ಅಂದರೆ 'ನಾನಲ್ಲದೇ ಇದ್ದಿದ್ದರೆ ಇನ್ಯಾರೋ ಅಂತೂ ಕಂಡು ಹಿಡಿಯುತ್ತಾ ಇದ್ದರು. ಅದಕ್ಯಾಕೆ ತಲೆ ಕೆಡಿಸಿಕೊಳ್ಳಬೇಕು' ಎಂದು ನಿರಾಳವಾಗಿ ಹೇಳುತ್ತಾನೆ ಹಾಫ್. ■

# ದಕ್ಷಿಣ ಕನ್ನಡ ಜನ

## ಏಕೆ ಹೀಗೆ? ಏಕೆ ಹೀಗೆ?



ದಕ್ಷಿಣ ಕನ್ನಡದ ಜನರ ವಿಶಿಷ್ಟತೆ ಕುರಿತಂತೆ ಲೇಖನ ಸಿದ್ಧ ಪಡಿಸುವುದು ಸುಲಭದ ಕೆಲಸವಲ್ಲ. ಒಂದೆಡೆ ಈ ಕರಾವಳಿ ಜಿಲ್ಲೆಯ ಜನರ ಗುಣಗಳನ್ನು ಮೆಚ್ಚಿ ಮಾತಾಡುವ ಜನ. ಇನ್ನೊಂದೆಡೆ ಅವರ ಬಗ್ಗೆ ಖಾರವಾಗಿ ಪ್ರತಿಕ್ರಿಯಿಸುವ ಮತ್ತೊಂದು ಗುಂಪು. ಮೊದಲಿನವರು ಹೆಚ್ಚಾಗಿ .ಕರಾವಳಿ ಜಿಲ್ಲೆಯವರು. ಎರಡನೆಯ ಗುಂಪಿನವರು ಬೇರೆ ಜಿಲ್ಲೆಗಳ ಜನ. ಹೇಗಾದರೂ ಆಗಲಿ ಅದೆಲ್ಲ ಬರಹಕ್ಕೆ ತಂದು ನಮಗೆ ಕೊಡಿ ಎಂದಾಗ ಹಿಂಜರಿದವರು ಬಹಳ. ಮಾತುಕತೆಗಳಲ್ಲಿ ಪಾಲ್ಗೊಂಡು ನಾನಾ ರೀತಿಯ ಅಭಿಪ್ರಾಯ ವ್ಯಕ್ತಪಡಿಸಿದವರು ಇದ್ದಾರೆ.

ದಕ್ಷಿಣ ಕನ್ನಡದ ಜನ ಎಲ್ಲಿಯೇ ಇರಲಿ ದ್ವೀಪವಾಗುತ್ತಾರೆ. ಮುಖ್ಯವಾಹಿನಿಯ ಜೊತೆ ಬೆರೆಯುವುದಿಲ್ಲ. ಅಲ್ಪಸಂಖ್ಯಾತರೆಂಬ ಹೆಸರಿನಲ್ಲಿ ತುಳು, ಕೊಂಕಣಿ ಭಾಷಿಗರೆಂದೇ ಗುರುತಿಸಿಕೊಳ್ಳುತ್ತ ಅದರಿಂದ ಪ್ರಯೋಜನ ಪಡೆಯುವುದರಲ್ಲಿಯೇ ಅವರು ಹೆಚ್ಚು ಆಸಕ್ತರು. ಹೀಗಾಗಿ ಬಹುಮುಖ್ಯವೆನಿಸಿದ ಕನ್ನಡ ಪರ ಚಳವಳಿಗಳಲ್ಲಿ ಆ ಜನ ಪಾಲ್ಗೊಳ್ಳಲೇ ಇಲ್ಲ. ನದಿ ವಿವಾದವಾಗಲಿ, ರಾಜ್ಯಕ್ಕೆ ಸಂಬಂಧಿಸಿದ ಬೇರೆ ವಿವಾದವಾಗಲಿ ಅವರ ಪ್ರತಿಕ್ರಿಯೆ ದೊಡ್ಡದೊಂದು ನಿರ್ಲಕ್ಷ್ಯ ಮಾತ್ರ ಎಂದು ಹಿರಿಯರೊಬ್ಬರು ಹೇಳಿದರೆ, ಉಳಿದವರ ಇನ್ನು ಕೆಲವು ಖಾಸಗಿ ಅಭಿಪ್ರಾಯಗಳು ಗಂಭೀರವಾಗಿ ತೆಗೆದುಕೊಳ್ಳುವಂತಹವಲ್ಲ.

ನಮ್ಮ ಮಿತಿಯಲ್ಲಿಯೇ ಸಾಕಷ್ಟು ವೈವಿಧ್ಯಮಯವಾದ, ದಕ್ಷಿಣ ಕನ್ನಡದ ಜನರ ವಿಶಿಷ್ಟತೆಗಳನ್ನು ಬಿಂಬಿಸುವ ಲೇಖನಗಳನ್ನು ಸಂಗ್ರಹಿಸಿ ನಮ್ಮ ಓದುಗರಿಗೆ ಕೊಡಲು ಯತ್ನಿಸಿದ್ದೇವೆ. ಇದೊಂದು ಸಮಗ್ರವಾದ ಮಾಹಿತಿ ಅಲ್ಲ ಎಂಬ ಅರಿವು ನಮಗಿದೆ.

## ದ.ಕ.ಜಿಲ್ಲೆಯ ಜನರಲ್ಲಿ ವಲಸೆಯ ಪ್ರವೃತ್ತಿ

**ಕೇ**ರಳ ಮತ್ತು ತಮಿಳುನಾಡಿನ ಜನರನ್ನು ಹೊರತುಪಡಿಸಿದರೆ ದ.ಕ.ಜಿಲ್ಲೆಯ ಬಹಳಷ್ಟು ಜನ ವಲಸೆ ಹೋಗುವುದರಲ್ಲಿ ಮತ್ತು ಬೇರೊಂದು ಊರಿನಲ್ಲಿ ನೆಲೆಯೂರುವುದರಲ್ಲಿ ನಿಸ್ಸೀಮರು ಅಂತ ಹೇಳಿಕೆಯಿದೆ. ಈ ಮಾತು ಪೂರ್ಣ ಸತ್ಯವಾಗಿಲ್ಲದೇ ಹೋಗಿರಬಹುದು. ಆದರೆ ಒಂದಲ್ಲ ಒಂದು ಕಾರಣಕ್ಕೆ ದಕ್ಷಿಣ ಕನ್ನಡ ಜಿಲ್ಲೆಯಿಂದ ಬೇರೊಂದು ಪ್ರದೇಶಕ್ಕೆ ಹೋಗಿ ಅಲ್ಲಿ ನೆಲೆಯೂರುವ ಮಂದಿ ಇದ್ದಾರೆ. ಮತ್ತು ಅನೇಕ ಊರುಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಜನರನ್ನು ನಾವು ಕಾಣುತ್ತೇವೆ. ನಾನು ಉದ್ಯೋಗ ನಿಮಿತ್ತವಾಗಿ ಈಗ ಶಿವಮೊಗ್ಗ ಜಿಲ್ಲೆಯಲ್ಲಿ ನೆಲೆಯೂರಿದ್ದೇನೆ. ಮೊದಲು ಬಂದಾಗ ನನ್ನನ್ನು ಎಲ್ಲರೂ ಉಡುಪಿ ಕಡೆಯವರು ಅಂತ ಗುರುತಿಸುತ್ತಿದ್ದರು. ಕೆಲವರಂತೂ ತಮಾಷೆಗಾಗಿ 'ಉಡುಪಿ ಹೊಟೇಲ್' ಕಂಪೆನಿಯವರು ಅಂತಲೂ ಹೇಳುತ್ತಿದ್ದರು. ಅದು ನಿಜವಲ್ಲವಾದರೂ ದಕ್ಷಿಣ ಕನ್ನಡ ಜಿಲ್ಲೆಯ ಮಂದಿ ಎಲ್ಲಿ ಹೋದರೂ ಒಂದೊಂದು ಹೊಟೇಲ್ ಇಟ್ಟುಬಿಡುತ್ತಾರೆ ಎಂಬುದನ್ನೇ ಬಹುತೇಕ ಜನರು ಗುರುತಿಸಿದಂತಿದೆ. ಹಾಗೆಯೇ ಘಟ್ಟದ ಕೆಳಗಿನ ಜನ ಇಡ್ಲಿ ವಡೆ ಮಾರಿಯಾದರೂ ಬದುಕಿಯಾರು ಎಂಬ ಮಾತು ಇದೆ. ಈ ರೀತಿಯ ಮಾತುಗಳು ದಕ್ಷಿಣ ಕನ್ನಡ ಜಿಲ್ಲೆಯ ಜನರ ಮನೋವೃತ್ತಿಯನ್ನು ಸೂಚಿಸುತ್ತದೆ.

ದ.ಕ. ಜಿಲ್ಲೆಯ ಜನ ಬೇರೆ ಬೇರೆ ಜಿಲ್ಲೆಗಳಲ್ಲಿ ನೆಲೆಯೂರುವುದಕ್ಕೆ ಕಾರಣವೇನು? ಮತ್ತು ಬೇರೆ ಜಿಲ್ಲೆಗಳಲ್ಲಿ ದ.ಕ.ಜಿಲ್ಲೆಯ ಜನರು ನೆಲೆಯೂರುವುದರಿಂದ ಆದ ಪರಿಣಾಮಗಳೇನು? ದ.ಕ.ಜಿಲ್ಲೆಯ ಜನರು ಬೇರೆ ಬೇರೆ ಜಿಲ್ಲೆಗೆ ವಲಸೆ ಹೋದಾಗ ಸಾಮೂಹಿಕವಾಗಿ ವಲಸೆ ಹೋಗಿದ್ದಾರೆಯೆ? ಈ ರೀತಿಯ ಪ್ರಶ್ನೆಗಳು ಸಹಜವಾಗಿಯೇ ನಮ್ಮೆದುರು ಕಾಣಿಸಿಕೊಳ್ಳುತ್ತವೆ. ಒಂದು ರೀತಿಯಿಂದ ಬೇರೆ ಬೇರೆ ಜಿಲ್ಲೆಯ ಜನರು ಮತ್ತೊಂದು ಜಿಲ್ಲೆಗೆ ಹೋಗುವುದೂ ಇದೆ. ಬಿಜಾಪುರ ಜಿಲ್ಲೆಯ ಅನೇಕರು ದಕ್ಷಿಣ ಕರ್ನಾಟಕದ ಕಡೆಗೆ ಬರುವುದನ್ನು ನಾವು ನಿತ್ಯ ನೋಡುತ್ತೇವೆ. ಹಾಗೆಯೇ ಅಲೆಮಾರಿ ಜನಾಂಗಕ್ಕೆ ಸಂಬಂಧಿಸಿದಂತೆಯೂ ಕೆಲವು ರೀತಿಯ ವಲಸೆ ಪ್ರವೃತ್ತಿಗಳನ್ನು ನಾವು ಕಾಣುತ್ತೇವೆ. ಅಲೆಮಾರಿ ಜನಾಂಗವು ವಲಸೆ ಹೋಗುವುದಕ್ಕೆ ಪ್ರಮುಖ ಕಾರಣ ಆರ್ಥಿಕವಾದುದು ಮತ್ತು ಧಾರ್ಮಿಕವಾದುದು. ಅಂದರೆ ಅಲೆಮಾರಿ ಜನಾಂಗಕ್ಕೆ ನಿರ್ದಿಷ್ಟವಾದ ಆಸ್ತಿಯ ಸಂಪತ್ತಾಗಲೀ; ಅದಕ್ಕೆ ಸಂಬಂಧಿಸಿದಂತೆ ಉದ್ಯೋಗವಾಗಲೀ ಇಲ್ಲ. ಇದರ ಜೊತೆಗೆ ಕೆಲವು ಅಲೆಮಾರಿ ಜನಾಂಗದ ಕಸುಬೇ ಅಲೆಮಾರಿತನವನ್ನು ಬಯಸುತ್ತದೆ. ಉದಾಹರಣೆಗೆ - ಹಕ್ಕಿಯ ಬೇಟೆ ಮಾಡುವವರು ಒಂದೆಡೆ ನಿಲ್ಲಲಾರರು. ಅದೇ ರೀತಿ ಕೆಲವು ಜನಾಂಗಗಳಲ್ಲಿ ಅಲೆಮಾರಿತನವು ಜನಾಂಗದ ನಂಬಿಕೆಗೂ ಸಂಬಂಧಿಸಿದೆ. ಒಂದೇ ಸ್ಥಳದಲ್ಲಿ ನೆಲೆಯೂರಿ ನಿಂತರೆ ಜನಾಂಗದ ಅಭಿವೃದ್ಧಿಯು ಸಾಧ್ಯವಿಲ್ಲವೆಂಬುದಕ್ಕೆ ಧಾರ್ಮಿಕವಾದ ನಂಬಿಕೆಗಳೂ ಕೆಲಸ ಮಾಡುತ್ತವೆ. ಜನಾಂಗವೊಂದು ಸಾಮೂಹಿಕವಾಗಿ ವಲಸೆ ಹೋಗುವ ಪ್ರವೃತ್ತಿಯು ಕಾಣಿಸಿಕೊಂಡರೆ ಅದಕ್ಕೆ ಕಾರಣ ಮಾತ್ರ ಸಾಂಸ್ಕೃತಿಕ

ಮತ್ತು ಆರ್ಥಿಕವಾದುದು ಮಾತ್ರವೇ ಆಗಿರುತ್ತದೆ. ನೀರಾವರಿಯಿಲ್ಲದ ಪ್ರದೇಶಗಳಲ್ಲಿ ವಾಸಿಸುವ ಜನರೂ ಬೇರೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾರೆ. ವಲಸೆಯು ಈ ರೀತಿಯ ಸಂದರ್ಭಗಳಲ್ಲಿ ಶುದ್ಧ ಆರ್ಥಿಕವಾದ ಕಾರಣವನ್ನು ಮಾತ್ರ ಒಳಗೊಂಡಿರುತ್ತದೆ. ಮಳೆ ಮತ್ತು ಬೆಳೆಯು ಇಲ್ಲದಾಗ ಜನರಿಗೆ ವಲಸೆ ಹೋಗದೆ ಬೇರೆ ದಾರಿಯಿಲ್ಲ. ಹೊಟ್ಟೆ-ಬಟ್ಟೆಯ ಕಾರಣಗಳು ಮಾತ್ರವೇ ಈ ರೀತಿಯ ವಲಸೆಗೆ ಕಾರಣವೇ ಹೊರತು ಮತ್ತೆ ಯಾವುದೇ ಕಾರಣಗಳು ಈ ರೀತಿಯ ವಲಸೆಯಲ್ಲಿಲ್ಲ. ಆದರೆ, ದಕ್ಷಿಣ ಕನ್ನಡದಲ್ಲಿ ವಲಸೆಯ ಪ್ರವೃತ್ತಿಯು ಕಾಣಿಸಿಕೊಳ್ಳುವುದಕ್ಕೆ ಪ್ರಾಯಶಃ ಅನೇಕ ಕಾರಣಗಳಿವೆ. ಹಾಗೆ ನೋಡುವುದಿದ್ದರೆ ಕಳೆದ ಅರ್ಧ ಶತಮಾನದ ಚರಿತ್ರೆಯನ್ನು ಅವಲೋಕಿಸಿದಾಗ ದಕ್ಷಿಣ ಕನ್ನಡದ ಜನರು ಬೇರೆ ಬೇರೆ ಜಿಲ್ಲೆಗಳಲ್ಲಿ ನೆಲೆಯೂರುವುದಕ್ಕೆ ಅನೇಕಾನೇಕ ಕಾರಣಗಳಿವೆಯಾದರೂ ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸದಲ್ಲಿ ಅಲೆಮಾರಿ ಜನಾಂಗವೊಂದು ಇಲ್ಲವೇ ಇಲ್ಲವೆಂಬುದು ಸ್ಪಷ್ಟವಾಗುತ್ತದೆ. ದ.ಕ.ಜಿಲ್ಲೆಯ ಪ್ರಮುಖ ಜನಾಂಗಗಳು ಒಂದಲ್ಲ ಒಂದು ರೀತಿಯಿಂದ ವಲಸೆ ಬಂದಿರುವುದರಿಂದ ಮತ್ತು ನೆಲೆಯೂರಿರುವುದರಿಂದ ಜನಾಂಗೀಯ ಕಾರಣಕ್ಕೆ ವಲಸೆಯಾಯಿತು ಎಂದು ಹೇಳುವುದು ಕಷ್ಟ. ಈ ಜಿಲ್ಲೆಯ ಜನರು ಬೇರೆ ಬೇರೆ ಊರಿನಲ್ಲಿ ನೆಲೆಯೂರಿದರೂ ಸಾಮೂಹಿಕವಾಗಿ ನೆಲೆಯೂರಿಲ್ಲ ಎಂಬುದು ಗಮನಿಸಬೇಕಾದ ಪ್ರಮುಖ ಅಂಶವಾಗಿದೆ. ಬೇರೆ ಬೇರೆ ಊರಿನಲ್ಲಿ ಈ ಜಿಲ್ಲೆಯ ಜನರು ನೆಲೆಯೂರಲು ಪ್ರಾಯಶಃ ಮೊದಲ ಕಾರಣ ಆರ್ಥಿಕವಾದುದು. ಉದ್ಯೋಗವನ್ನು ಹುಡುಕುತ್ತಾ : ಬೇರೆ ಬೇರೆ ಊರುಗಳಲ್ಲಿ ನೆಲೆಯೂರಿದ ದ.ಕ.ಜಿಲ್ಲೆಯ ಕುಟುಂಬಗಳ ಉದಾಹರಣೆಗಳು ನಮಗೆ ಹೇರಳವಾಗಿ ಸಿಗುತ್ತವೆ. ವಿಜಯಾ ಬ್ಯಾಂಕ್; ಕರ್ಣಾಟಕ ಬ್ಯಾಂಕ್; ಸಿಂಡಿಕೇಟ್ ಬ್ಯಾಂಕ್‌ಗಳ ಹಣಕಾಸು ಸಂಸ್ಥೆಗಳು ಶುರುವಾಗಿದ್ದು ಮತ್ತು ಬೇರೆ ಬೇರೆ ಊರುಗಳಲ್ಲಿ ಶಾಖೆಗಳನ್ನು ತೆರೆದದ್ದು ದ.ಕ.ಜಿಲ್ಲೆಯ ಇತಿಹಾಸದ ಪ್ರಮುಖ ಮೈಲಿಗಲ್ಲುಗಳಾಗಿವೆ. ಒಂದು ಕಾಲಕ್ಕೆ ಈ ರೀತಿಯ ಬ್ಯಾಂಕ್‌ಗಳಲ್ಲಿ ನಿರ್ದಿಷ್ಟವಾದ ಜಾತಿ ಕೇಂದ್ರಿತವಾದ ಗುಣವೊಂದಿತ್ತು ಎಂದು ಹೇಳಲಾಗಿದೆ. ಸಿಂಡಿಕೇಟ್ ಬ್ಯಾಂಕ್ ಪೈಗಳದ್ದು; ಕರ್ಣಾಟಕ ಬ್ಯಾಂಕ್ ಬ್ರಾಹ್ಮಣರದ್ದು ಮತ್ತು ವಿಜಯಾ ಬ್ಯಾಂಕ್ ಬಂಟರ ಜನಾಂಗದ್ದು ಎಂದು ಮೊದಮೊದಲು ಹೇಳಲಾಗುತ್ತಿತ್ತು. ಮತ್ತು ಈ ರೀತಿಯ ಬ್ಯಾಂಕ್‌ಗಳಲ್ಲಿ ನಿರ್ದಿಷ್ಟ ಜನಾಂಗದವರಿಗೆ ಹೆಚ್ಚಿನ ಉದ್ಯೋಗಾವಕಾಶವೂ ಇತ್ತು ಎಂದು ಹೇಳಲಾಗುತ್ತಿದೆ. ತುಂಬಾ ಖಚಿತವಾಗಿ ಮತ್ತು ಕರಾರುವಕ್ಕಾಗಿ ಈ ಮಾತನ್ನು ಹೇಳಬೇಕಾದರೆ ಪ್ರತ್ಯೇಕವಾದ ಅಧ್ಯಯನವು ನಡೆಯಬೇಕಿದೆ. ಇಂದಿರಾಗಾಂಧಿಯವರು ಬ್ಯಾಂಕ್ ರಾಷ್ಟ್ರೀಕರಣ ಮಾಡುವ ತನಕವೂ ಈ ರೀತಿಯ ಕತೆಗಳು ಚಾಲ್ತಿಯಲ್ಲಿದ್ದವು. ಆದರೆ ಗಮನಾರ್ಹ ಅಂಶವೆಂದರೆ ಬ್ಯಾಂಕ್ ಉದ್ದಿಮೆಯ ದೆಸೆಯಿಂದ ದ.ಕ.ಜಿಲ್ಲೆಯ ಅನೇಕ ತರುಣರಿಗೆ ಆ ಹೊತ್ತಿನಲ್ಲಿ ಉದ್ಯೋಗದ ಅವಕಾಶವು ದೊರೆತಿದ್ದು ನಿಜ. ಕರ್ಣಾಟಕದ ಪ್ರತಿಷ್ಠಿತ ಬ್ಯಾಂಕ್ ಉದ್ದಿಮೆಯಲ್ಲಿ ಈ ಮೊದಲು ಹೇಳಿರುವ ಬ್ಯಾಂಕ್‌ಗಳು ಪ್ರಸಿದ್ಧಿಗೊಂಡಿವೆ. ಬ್ಯಾಂಕ್ ಉದ್ದಿಮೆಯು ಈವತ್ತಿಗೆ ಬಹುಮುಖ್ಯವಾದ ಉದ್ದಿಮೆಯಾದರೂ ಈ ರೀತಿಯ ಉದ್ದಿಮೆಗಳು ಒಂದು ಪ್ರದೇಶದಲ್ಲಿಯೇ ಮೊದಲು ರೂಪು ತಳೆದಿರುವುದಕ್ಕೆ ಕಾರಣಗಳಿವೆಯೆಂದು ಕಾಣುತ್ತದೆ. ಬ್ಯಾಂಕ್‌ಗಳು ಜನರಿಗೆ ಹೇಳಿಕೊಡುವುದನ್ನು ನೋಡಿ: ಠೇವಣಿ ಇಡಿ ಮತ್ತು ಸಾಲವನ್ನು ತೆಗೆದುಕೊಳ್ಳಿ. ಈ ಎರಡರಲ್ಲೂ ಬಡ್ಡಿ ಸಿಗುತ್ತದೆ. ಆದರೆ ಠೇವಣಿ ಇಡುವವರಿಗೆ ಮತ್ತು ಸಾಲವನ್ನು ತೆಗೆದುಕೊಳ್ಳುವವರಿಗೆ ಒಂದೇ ರೀತಿಯ ಮಾನ್ಯತೆಯು ಸಿಗುತ್ತವೆಯೆಂಬುದಕ್ಕೆ ಯಾವ ಗ್ಯಾರಂಟಿಯೂ ಇಲ್ಲ. ಠೇವಣಿ ಇಡುವವರಿಗೆ ಹೆಚ್ಚಿನ ಮಾನ್ಯತೆಯಿದೆ. ಸಾಲವನ್ನು ತೆಗೆದುಕೊಳ್ಳುವವರಿಗೆ ಬ್ಯಾಂಕಿನಲ್ಲಿ ಅಂಥಾ ಮಾನ್ಯತೆಯಿಲ್ಲ. ಬೇಕಾದ ಸಮಯಕ್ಕೆ ಸಾಲವೂ ಸಿಗುವುದಿಲ್ಲ. ಅಂದರೆ ಬ್ಯಾಂಕ್ ಉದ್ದಿಮೆಯೆನ್ನುವುದು ಶುರುವಾದಾಗಲೇ ಅದಕ್ಕೊಂದು ಸ್ಪಷ್ಟ ಉದ್ದೇಶವಿತ್ತು. ಅದೆಂದರೆ ಹಣದ ಚಲಾವಣೆ. ಈ ರೀತಿಯ ಚಲಾವಣೆಯ ಪರಿಭಾಷೆಯು ದ.ಕ.ಜಿಲ್ಲೆಯಲ್ಲಿ ಶುರುವಾಗಿದ್ದು ಆಕಸ್ಮಿಕವಲ್ಲವೆಂದು ಕಾಣುತ್ತದೆ.



ಕೇಶವ ಶರ್ಮ ಕೆ.

> ದಕ್ಷಿಣ ಕನ್ನಡದ ಜನರು ಬೇರೆ ಬೇರೆ ಜಿಲ್ಲೆಗಳಲ್ಲಿ ನೆಲೆಯೂರುವುದಕ್ಕೆ ಅನೇಕಾನೇಕ ಕಾರಣಗಳಿವೆಯಾದರೂ ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸದಲ್ಲಿ ಅಲೆಮಾರಿ ಜನಾಂಗವೊಂದು ಇಲ್ಲವೇ ಇಲ್ಲವೆಂದು ಸ್ಪಷ್ಟವಾಗುತ್ತದೆ.

ಈ ತರಹದ್ದೇ ದ.ಕ.ಜಿಲ್ಲೆಯ ಮತ್ತೊಂದು ಉದ್ದಿಮೆ ಹೋಟೆಲ್. ಈವೊತ್ತಿಗೆ ಪಟ್ಟಣಗಳಲ್ಲಿ ಪ್ರಮುಖ ಉದ್ದಿಮೆಯಾಗಿ ಬೆಳೆದಿರುವ ಹೋಟೆಲ್ ಉದ್ದಿಮೆಯಲ್ಲಿ ತೊಡಗಿಸಿಕೊಂಡವರು ಅನೇಕ ಜನ. ಹೋಟೆಲ್ ಉದ್ದಿಮೆಯಲ್ಲಿ ಶೇಕಡಾ 50ರಷ್ಟು ಲಾಭವಿದೆಯೆಂದು ಅದರಲ್ಲಿ ತೊಡಗಿಸಿಕೊಂಡವರು ಹೇಳುತ್ತಾರೆ. ಆದರೆ ಸಾಂಪ್ರದಾಯಿಕ ಕುಟುಂಬದಲ್ಲಿ ಬೆಳೆದು ಬಂದವರು ಹೋಟೇಲ್ ಉದ್ದಿಮೆಯ ಬಗ್ಗೆ ಒಂದು ರೀತಿಯ ಸಹನೆಯನ್ನು ವ್ಯಕ್ತಪಡಿಸಿದ್ದೂ ಇದೆ. ಸಂಪ್ರದಾಯಸ್ಥರು ಹೋಟೇಲ್ ಉದ್ದಿಮೆಯಲ್ಲಿ ತೊಡಗಿಸಿಕೊಂಡವರ ಬಗ್ಗೆ ಅಸಹನೆಯಿಂದ 'ಅವನೇನು ಅನ್ನಮಾರಿ ಹೊಟ್ಟೆ ಹೊರೆದುಕೊಳ್ಳುತ್ತಾನೆ' ಎಂದು ಹೇಳಿದ್ದೂ ಇದೆ. ಈ ಎರಡೂ ಉದ್ದಿಮೆಗಳು ಮೇಲು ಜಾತಿಯವರು ಬೇರೊಂದು ಊರಿನಲ್ಲಿ ನೆಲೆಯೂರಲು ಕಾರಣವಾದರೆ, ಕೆಳಜಾತಿಯವರು ಘಟ್ಟದ ಮೇಲೆ ಹೋಗಿದ್ದು ಮತ್ತೊಂದು ಪ್ರಮುಖ ಕಾರಣಕ್ಕಾಗಿ. ಅದೆಂದರೆ, ಘಟ್ಟದ ಮೇಲಿನ ಕಾಫಿ ತೋಟಗಳಲ್ಲಿ ಕೆಲಸ ಮಾಡಲು ಘಟ್ಟದ ಕೆಳಗಿನವರನ್ನು ಕರೆಯುತ್ತಿದ್ದರು. ಕಾಫಿ ಮತ್ತು ಏಲಕ್ಕಿ ತೋಟದಲ್ಲಿ ಕೆಲಸ ಮಾಡಲು ಬಂದವರು ಕ್ರಮೇಣ ಕಾಫಿ ಮತ್ತು ಏಲಕ್ಕಿ ತೋಟಗಳಿರುವ ಪ್ರದೇಶಗಳಲ್ಲಿ ನೆಲೆಯೂರಿದರು. ಮುಖ್ಯವಾಗಿ ಚಿಕ್ಕಮಗಳೂರು ಕೊಪ್ಪ, ಶೃಂಗೇರಿ ಈ ಪ್ರದೇಶಗಳಲ್ಲಿ ದ.ಕ.ಜಿಲ್ಲೆಯಿಂದ ಬಂದವರನ್ನು ನಾವು ಕಾಣಬಹುದು. ಈ ರೀತಿಯ ವಲಸೆಗಳಲ್ಲಿ ಆರ್ಥಿಕ ಕಾರಣವು ಪ್ರಧಾನವಾಗಿದೆ. ಏಲಕ್ಕಿ, ಕಾಫಿ ಬೆಳೆಗಳು ದ.ಕ.ಜಿಲ್ಲೆಯ ಪ್ರಮುಖ ಬೆಳೆಯಲ್ಲ. ದ.ಕ.ಜಿಲ್ಲೆಯ ಪ್ರಮುಖ ಬೆಳೆಯೆಂದರೆ ಅಡಿಕೆ ತೋಟವೇ ಆಗಿದೆ. ಅಡಿಕೆ ತೋಟವು ವರ್ಷವಿಡೀ ಕಾರ್ಮಿಕರನ್ನು ಬಯಸುವುದಿಲ್ಲ. ಅದೊಂದು ಕಾರಣವೂ ವಲಸೆಗೆ ಕಾರಣವಾಗಿರಬಹುದು. ಈ ರೀತಿಯ ವಲಸೆಯ ಪ್ರವೃತ್ತಿಯಲ್ಲಿ ಆರ್ಥಿಕವಾದ ಕಾರಣವು ಮುಖ್ಯವಾದ ಕಾರಣವಾಗಿದೆ.

> ಅಳಿಯ ಸಂತಾನ ಕಟ್ಟು' ಸಂಸ್ಕೃತಿಯಲ್ಲಿ ಮಗಳಿಗೆ ತಾಯಿಯ ಜಮೀನು ಮತ್ತು ಮನೆಯ ಒಡೆತನ ವರ್ಗಾಂತರ ಆಗುತ್ತದೆ. ಈ ರೀತಿಯ ಸಂಸ್ಕೃತಿಯು ಜಾರಿಯಲ್ಲಿ ಇರುವ ಕುಟುಂಬಗಳಲ್ಲಿ ಗಂಡು ಮಕ್ಕಳು ಉದ್ಯೋಗಕ್ಕಾಗಿ ಬೇರೆಡೆಗೆ ಹೋಗುವುದು ಅನಿವಾರ್ಯ.

ಭೂ ಹಿಡುವಳಿದಾರರ ಮತ್ತೊಂದು ಸಮಸ್ಯೆಯು ಕೂಡಾ ಗಮನಾರ್ಹ. ದ.ಕ.ಜಿಲ್ಲೆಯಲ್ಲಿ ಸಣ್ಣ ಹಿಡುವಳಿದಾರರ ಸಂಖ್ಯೆಯು ಹೆಚ್ಚಿದೆ. ಐದು ಎಕ್ರೆ, ಹತ್ತು ಎಕ್ರೆ ಹೀಗೆ ಜಮೀನು ಇರುವವರ ಸಂಖ್ಯೆ ಕಡಿಮೆಯಿದೆ. ಅವರಲ್ಲಿಯೂ ಭೂ ಮಸೂದೆಯು ಜಾರಿಗೆ ಬಂದ ಮೇಲೆ ಎಷ್ಟೋ ಜನ ತಮ್ಮ ಜಮೀನನ್ನು ಕಳೆದುಕೊಂಡವರೂ ಇದ್ದಾರೆ. ಈ ಕಾರಣದಿಂದಲೂ ಹೆಚ್ಚು ಮಕ್ಕಳಿದ್ದು ಜಮೀನು ಅಭಿವೃದ್ಧಿ ಅಸಾಧ್ಯವೆಂಬ ಕಾರಣದಿಂದಲೂ ವಲಸೆ ಹೋದವರಿದ್ದಾರೆ. ದ.ಕ.ಜಿಲ್ಲೆಯ ಬಂಟರ ಸಮುದಾಯದಲ್ಲಿ ಇರುವ

ಅಳಿಯ ಸಂತಾನ ಕಟ್ಟು ಕೂಡಾ ವಲಸೆಗೆ ಒಂದು ಕಾರಣವಿರಬೇಕು. 'ಅಳಿಯ ಸಂತಾನ ಕಟ್ಟು' ಸಂಸ್ಕೃತಿಯಲ್ಲಿ ಮಗಳಿಗೆ ತಾಯಿಯ ಜಮೀನು ಮತ್ತು ಮನೆಯ ಒಡೆತನ ವರ್ಗಾಂತರವಾಗುತ್ತದೆ. ಈ ರೀತಿಯ ಸಂಸ್ಕೃತಿಯು ಜಾರಿಯಲ್ಲಿರುವ ಕುಟುಂಬಗಳಲ್ಲಿ ಗಂಡು ಮಕ್ಕಳು ಉದ್ಯೋಗಕ್ಕಾಗಿ ಬೇರೆಡೆಗೆ ಹೋಗುವುದು ಅನಿವಾರ್ಯ. ದ.ಕ.ಜಿಲ್ಲೆಯಿಂದ ಹೊರಗೆ ಬಂದು ನೆಲೆಸಿದ ಅನೇಕ ಕುಟುಂಬಗಳಲ್ಲಿ ಈ ರೀತಿಯ ಸಾಂಸ್ಕೃತಿಕ ಕಾರಣಗಳೂ ಇವೆ.

ಇದರ ಜೊತೆಗೆ ದ.ಕ. ಜಿಲ್ಲೆಯ ಜನರ ಕೆಲವು ಪ್ರಮುಖ ಸ್ವಭಾವಗಳನ್ನು ಗುರುತಿಸಬಹುದು ಎಂದು ಕಾಣುತ್ತದೆ. ಅವೆಂದರೆ. ದ.ಕ.ಜಿಲ್ಲೆಯ ಜನರಲ್ಲಿ ವೈಯಕ್ತಿಕತೆಯ ಸ್ವಭಾವ, ವ್ಯಾವಹಾರಿಕ ಜಾಣ್ಮೆ, ಸಾಂಸ್ಕೃತಿಕ ಉದಾರತೆಯು ಪ್ರಾಯಶಃ ಹೆಚ್ಚು. ಇದು ಎಷ್ಟರ ಮಟ್ಟಿಗೆ ಇವೆಯೆಂದರೆ ದ.ಕ.ಜಿಲ್ಲೆಯ ಜನರು ಹಬ್ಬ ಹರಿದಿನಗಳ ಬಗೆಗೂ ಕೂಡಾ ಹೆಚ್ಚು ನಿರ್ದಿಷ್ಟವಾಗಿಲ್ಲ. ದ.ಕ.ಜಿಲ್ಲೆಯ ಜನರಲ್ಲಿ ಸ್ವಯಂ ಕೇಂದ್ರಿತವಾದ ವ್ಯಕ್ತಿತ್ವವೇ ಹೆಚ್ಚು ಎಂದು ತೋರುತ್ತದೆ. ಉಳಿದ ಜಿಲ್ಲೆಗಳಲ್ಲೂ ಹೋಗಿ ಅವರು ನೆಲಯೂರಬಲ್ಲರು. ಮುಂಬೈಯಂಥಾ ಮಹಾನಗರಗಳಲ್ಲಿ ಹೋಗಿ ಬದುಕಬಲ್ಲರು. ದ.ಕ.ಜಿಲ್ಲೆಯ ಜನರ ಈ ಪ್ರವೃತ್ತಿಯ ಹಿಂದೆ ಚಾರಿತ್ರಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಕಾರಣಗಳು ಇವೆಯೆಂದು ತೋರುತ್ತದೆ.

*(ಲೇಖಕರು ದಕ್ಷಿಣ ಕನ್ನಡದ ಅಡ್ಯನಡ್ಕ ಗ್ರಾಮದವರಾಗಿದ್ದು ಈಗ ಕುವೆಂಪು ವಿಶ್ವವಿದ್ಯಾಲಯದಲ್ಲಿ ಕನ್ನಡ ರೀಡರ್ ಆಗಿದ್ದಾರೆ)*

# ವಿದೇಶಿ ವ್ಯಾಮೋಹ



ಡಾ.ನಾ. ದಾಮೋದರ ಶೆಟ್ಟಿ

ದಕ್ಷಿಣಕನ್ನಡಿಗರು ಪ್ರತಿಭಾವಂತರೆಂದು ಕರ್ನಾಟಕದ ಜನತೆ ಹೇಳುತ್ತಲೂ ನಂಬುತ್ತಲೂ ಬಂದಿದ್ದಾರೆ. ತಕ್ಕಮಟ್ಟಿಗೆ ಇದು ನಿಜವೆ. ತಮ್ಮ ಮಕ್ಕಳನ್ನು ಹೇಗಾದರೂ ಮಾಡಿ ಇಂಜಿನಿಯರುಗಳನ್ನಾಗಿ, ಡಾಕ್ಟರುಗಳನ್ನಾಗಿ ಸಿದ್ದಪಡಿಸುವುದು ಹೆತ್ತವರ ಪರಮ ಕರ್ತವ್ಯವೆಂದು ಮುಖ್ಯವಾಗಿ ಇಲ್ಲಿನ ಮಧ್ಯಮ ವರ್ಗದವರು ನಂಬಿದ್ದಾರೆ. ಅದಾಗಲೇ ಅಮೆರಿಕಾದಂತಹ ಸಂಪನ್ನ ದೇಶದಲ್ಲಿ ನೆಲೆ ಸ್ಥಾಪಿಸಿರುವ ಯುವಕರನ್ನು ಹುಡುಗರನ್ನು ತಮ್ಮ ಹೆಣ್ಣು ಮಕ್ಕಳಿಗಾಗಿ ಹುಡುಕುವ ಹೆತ್ತವರೂ ಅಷ್ಟೇ ಸಂಖ್ಯೆಯಲ್ಲಿದ್ದಾರೆ. ಆ ಕಾರಣಕ್ಕಾಗಿಯೇ ತಮ್ಮ ಹೆಣ್ಣುಮಕ್ಕಳಿಗೂ ಸಾಕಷ್ಟು ವಿದ್ಯಾಭ್ಯಾಸ ನೀಡುತ್ತಾರೆ. ಜಿಲ್ಲೆಯ ಮಧ್ಯಮವರ್ಗದವರು ಕುಟುಂಬ ಯೋಜನೆಯನ್ನು ಅಚ್ಚುಕಟ್ಟಾಗಿ ಪಾಲಿಸುತ್ತಾರೆ. ಹಾಗಾಗಿ ಒಂದು ಅಥವಾ ಎರಡು ಮಕ್ಕಳ ಕುಟುಂಬ.

ಈ ಮಕ್ಕಳು ಅಮೆರಿಕಾ, ಆಸ್ಟ್ರೇಲಿಯಾ ಅಥವಾ ಅರಬ್ ದೇಶಗಳಿಗೆ ಹೊರಟು ಹೋಗುತ್ತಾರೆ. ಹೆತ್ತವರು ಮಕ್ಕಳನ್ನು ನೆನೆದು ಕೊರಗುತ್ತಿರುತ್ತಾರೆ. ಅವರು ಕಳುಹಿಸುವ ಹಣ ಹಾಗೂ ವಾರಕ್ಕೋ ತಿಂಗಳಿಗೋ ಒಮ್ಮೆ ಫೋನಿನಲ್ಲಿ ಆಡುವ ಮಾತುಗಳಷ್ಟೇ ಹೆತ್ತವರಿಗೆ ಸಿಗುವ ಆಶ್ವಾಸನೆ. ಈ ಪ್ರತಿಭಾ ಪಲಾಯನ ರಾಜ್ಯದ ಉಳಿದ ಭಾಗಕ್ಕಿಂತ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಅತಿ ಹೆಚ್ಚು ಪ್ರಮಾಣದಲ್ಲಿದೆ. ಸಂಶೋಧಕರಿಗೆ ಅದೊಂದು ವಸ್ತುವಾಗಬಹುದು. ತಮ್ಮ ಮಕ್ಕಳು ಈ ದೇಶದಲ್ಲಿದ್ದಾರೆ 'ಎಂಬುದಾಗಿ ಹೇಳಿಕೊಂಡರೂ ಒಳಗಿಂದೊಳಗೆ ಇಲ್ಲಿನ ಹೆತ್ತವರು ಕೊರಗುತ್ತಿರುತ್ತಾರೆ. ಜಿಲ್ಲೆಯಲ್ಲಿ ಅಭಯಾಶ್ರಮಗಳ ಸಂಖ್ಯೆ ಹೆಚ್ಚುತ್ತಿವೆ. ವಯಸ್ಸಾದ ಮೇಲೆ, ಮಕ್ಕಳೂ ದೂರದೇಶದಲ್ಲಿರುವದರಿಂದ ಸಹಜವಾಗಿಯೇ ಅವರಿಗೆ ಅಭಯ ಬೇಕಾಗುತ್ತದೆ. ಆಗ ಹೆಚ್ಚು ಹೆಚ್ಚು ಹಣ ಕೂಡಿಹಾಕುವುದರ ಬಗ್ಗೆ ಅವರು ಚಿಂತಿತರಾಗುತ್ತಾರೆ. ಆದ್ದರಿಂದ ಸಾಹಿತ್ಯಕ, ಸಾಂಸ್ಕೃತಿಕ ಚಟುವಟಿಕೆಗಳಿಗೆ, ಇತರ ಸಾರ್ವಜನಿಕ ಸಮಾರಂಭಗಳಿಗೆ ಅವರು ಮನಗೊಡುವುದಿಲ್ಲ. ಇದ್ದ ಬದ್ದ ಹಣವನ್ನು ಅಭಯಾಶ್ರಮಕ್ಕೆ ಕೊಟ್ಟು ಆ ಹಣದ ಬಡ್ಡಿಯಲ್ಲಿ ಅವರ ಬದುಕು ನೀಗಬೇಕು.

> ಪ್ರತಿಭಾ ಪಲಾಯನ ರಾಜ್ಯದ ಉಳಿದ ಭಾಗಕ್ಕಿಂತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅತಿ ಹೆಚ್ಚು ಪ್ರಮಾಣದಲ್ಲಿದೆ.

ಇಂಗ್ಲಿಷರು ಇಲ್ಲಿಂದ ಹೋದರೂ ಇಂಗ್ಲಿಷ್ ಭಾಷೆ ತನ್ನ ಅಕ್ಟೋಪಸ್ ಬಾಹುಗಳನ್ನು ಶಿಕ್ಷಣ ಸಂಸ್ಥೆಗಳಲ್ಲೆಲ್ಲ ಚಾಚಿದ್ದು, ಅಲ್ಲಿನ ಸಂಸ್ಕೃತಿಯನ್ನೂ ಇಲ್ಲಿ ಗಾಢಗೊಳಿಸುತ್ತಿದೆ. ಇಂಗ್ಲೆಂಡಿನ ಕೆಲವು ಹಳ್ಳಿಗಳಲ್ಲಿ ಕೇವಲ ಮುದುಕ ಮುದುಕಿಯರು ಬದುಕುವುದನ್ನು ಕಾಣುತ್ತೇವೆ. ಅಲ್ಲಿನ ಯುವಕ ಯುವತಿಯರು ಇತರ ನಗರಗಳಲ್ಲಿ ನೆಲೆಯೂರಿದ್ದಾರೆ. ದಕ್ಷಿಣಕನ್ನಡ ಜಿಲ್ಲೆಯ ಮಧ್ಯಮವರ್ಗದವರ ಗತಿ ಕೂಡ ಇದೇನೆ. ವಿದೇಶೀ ವ್ಯಾಮೋಹ ಅವರ ಬದುಕನ್ನು ಬರ್ಬರಗೊಳಿಸುತ್ತದೆ ಹಾಗೂ ಪ್ರತಿಭಾ ಪಲಾಯನದ ಮೂಲಕ ನಮ್ಮ ನಾಡು ಅಪಾರ ಸಾಂಸ್ಕೃತಿಕ, ಶೈಕ್ಷಣಿಕ ನಷ್ಟ ಅನುಭವಿಸುತ್ತಿದೆ.

*(ಡಾ. ನಾ. ದಾಮೋದರ ಶೆಟ್ಟಿ ದಕ್ಷಿಣ ಕನ್ನಡದ ಹೆಸರಾಂತ ರಂಗ ತಜ್ಞರು ಹಾಗೂ ಲೇಖಕರು)*

# ಜಾಣರು, ಸ್ನೇಹಪರರು



ಕೋ. ಚೆನ್ನಬಸಪ್ಪ

ನಾನು ದ.ಕನ್ನಡ ಜಿಲ್ಲೆಯಿಂದ ವಿಜಾಪೂರ ಜಿಲ್ಲೆಗೆ ವರ್ಗವಾಗಿ ಹೋದ ಸ್ವಲ್ಪ ಸಮಯದಲ್ಲಿ ಆಗ ಅಲ್ಲಿ ಜಿಲ್ಲಾಧಿಕಾರಿಯಾಗಿದ್ದ ಮಿತ್ರರು ಒಂದು ದಿನ 'ನೀವು ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಕೆಲಸ ಮಾಡಿದ್ದೀರಿ. ನಿಮಗೆ ಯಾವ ಜಿಲ್ಲೆ ಬಹು ಇಷ್ಟವಾಯಿತು?' ಎಂದು ಕೇಳಿದರು. ನಾನು 'ಎಲ್ಲ ಜಿಲ್ಲೆಗಳೂ ನನಗೆ ಪ್ರಿಯವೆ. ನನ್ನದೆಂಬ ಊರು ಯಾವುದೂ ಇಲ್ಲ. ಎಲ್ಲ ಊರುಗಳೂ ನನ್ನೂರುಗಳೆ. ಎಲ್ಲರೂ ನನ್ನನ್ನು ಪ್ರೀತಿಸುತ್ತಾರೆ. ನಾನು ಅವರನ್ನು ಪ್ರೀತಿಸುತ್ತೇನೆ' ಎಂದೆ. ಆ ಮಿತ್ರರು : 'ಅದು ನಿಜ, ಆದರೆ ಒಂದೊಂದು ಕಡೆ ಒಂದೊಂದು ವೈಶಿಷ್ಟ್ಯ, ವಿಶೇಷ ಇರುತ್ತದೆ. ಆ ದೃಷ್ಟಿಯಿಂದ ಯಾವ ಜಿಲ್ಲೆ ಮೆಚ್ಚು?' ಎಂದು ಮತ್ತೆ ಕೇಳಿದರು. ಆ ದೃಷ್ಟಿಯಿಂದ ದಕ್ಷಿಣ ಕನ್ನಡ ಎಂದೆ. ಅವರು ಆಶ್ಚರ್ಯದಿಂದ 'ಆ ಜನ ತುಂಬ ಜಾಣರು, ವಿಪರೀತ ಬುದ್ಧಿಯವರು. ಏನಾದರೂ ಪೀಕಲಾಟಕ್ಕೆ ಸಿಕ್ಕಿಸುವವರು... . ಇ.... ಕೇಳಿದ್ದೆ.'

> ಶಿಕ್ಷಣಕ್ಕೆ ಆ ಜಿಲ್ಲೆಯಲ್ಲಿ ಬಹಳ ಪ್ರಾಧಾನ್ಯ. ಅದರಲ್ಲೂ ಕ್ರಿಶ್ಚಿಯನ್ ಮಿಷಿನರೀಸ್ ಉಚಿತ ಶಿಕ್ಷಣ ಕೊಡುತ್ತಿವೆ.

'ಹಾಗೇನೂ ಇಲ್ಲ. ನಾವು ಒಳ್ಳೆಯವರಾದರೆ ಯಾವ ತೊಂದರೆಯೂ ಇಲ್ಲ, 'ನಾಲಗೆ ಒಳ್ಳೆಯದಾದರೆ ಊರು ಒಳ್ಳೆಯದು' ಎಂಬ ಗಾದೆಯಿದೆ. ಆ ಜನ ಇಂಗಿತಜ್ಞರು, ಜಾಣರು, ಹೆಚ್ಚು ಸಾಕ್ಷರಸ್ಥರು, ಸಾಹಿತ್ಯ ಪ್ರಿಯರು, ಸುಸಂಸ್ಕೃತರು, ಸ್ನೇಹಪರರು. ಪ್ರಾಮಾಣಿಕತೆಯಿಂದ ಕೆಲಸ ಮಾಡುವವರಿಗೆ ಅವರಿಂದ ಯಾವ ಉಪದ್ರವ ಆಗಲಾರದು. ತಕ್ಕಮಟ್ಟಿಗೆ ಬುದ್ಧಿವಂತಿಕೆಯಿಂದ ಜಾಣತನದಿಂದ ಕೆಲಸ ಮಾಡಿದರೆ ಅಂಥವರನ್ನು ಅವರು ಮೆಚ್ಚುತ್ತಾರೆ. ಪ್ರೀತಿಸುತ್ತಾರೆ. ಉಪದ್ವ್ಯಾಪಮಾಡಿ ತಲೆಹರಟೆಯಲ್ಲಿ ತೊಡಗಿದರೆ ಅವರು ಸುಮ್ಮನೆ ಸಹಿಸಲಾರರು..... ಎಲ್ಲಕ್ಕಿಂತ ಪ್ರಿಯವಾದ

ಸಂಗತಿ ಎಂದರೆ ಸಾಮಾನ್ಯ ಜನರೂ ಸಾಹಿತ್ಯ, ಸಂಗೀತ, ಯಕ್ಷಗಾನ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಆಸಕ್ತಿ ವಹಿಸುತ್ತಾರೆ. ಸಂಘ ಸಂಸ್ಥೆಗಳಿಗೆ ಪ್ರೋತ್ಸಾಹ ಕೊಡುತ್ತಾರೆ. ಮಂಗಳೂರಿನಲ್ಲಿರುವ ಒಂದು 'ರಾತ್ರಿಶಾಲೆ' (ಹಗಲು ಓದು ಕಲಿಯಲು ಸಾಧ್ಯವಿಲ್ಲದಂಥವರಿಗೆ ಓಧು ಕಲಿಸುವ - ಅದರಲ್ಲೂ ವಯಸ್ಕರ ಶಾಲೆ)ಯಲ್ಲಿ ಕಲಿತವರು ಎಂ.ಎ., ಬಿ.ಇ. ಎಂ.ಬಿ.ಬಿ.ಎಸ್. ಪಾಸಾಗಿ ದೇಶ ವಿದೇಶಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಅಂಥ ರಾತ್ರಿಶಾಲೆಗಳನ್ನು ನಾನು ಎಲ್ಲಿಯೂ ಕಂಡಿಲ್ಲ. ಅಲ್ಲಿರುವ ಶ್ರೀ ರಾಮಕೃಷ್ಣ ಮಠದಲ್ಲಿ ಅನೇಕ ಅನಾಥ, ಬಡಮಕ್ಕಳು ಯಾವ ಜಾತೀಯತೆ ಭೇದವಿಲ್ಲದೆ ವಿದ್ಯಾಭ್ಯಾಸ ಮಾಡಿ ಐ.ಪಿ.ಎಸ್, ಐ.ಎ.ಎಸ್. ಹುದ್ದೆಯಲ್ಲಿದ್ದಾರೆ. ಮಠಕ್ಕೆ ಸಾರ್ವಜನಿಕರು ಧಾರಾಳವಾಗಿ ಧನ, ಧಾನ್ಯ, ಎಣ್ಣೆ, ಬೆಲ್ಲ, ತೆಂಗಿನಕಾಯಿ.... ರಾಶಿ ರಾಶಿಯಾಗಿ ತಂದುಕೊಡುತ್ತಾರೆ. ಶಿಕ್ಷಣಕ್ಕೆ ಆ ಜಿಲ್ಲೆಯಲ್ಲಿ ಬಹಳ ಪ್ರಾಧಾನ್ಯ. ಅದರಲ್ಲೂ ಕ್ರಿಶ್ಚಿಯನ್ ಮಿಷಿನರೀಸ್ ಉಚಿತವಾಗಿ ಶಿಕ್ಷಣ ಕೊಡುತ್ತಿವೆ. (ಈಗ ಹೇಗಿದೆಯೊ ಕಾಣೆ). ಅಲ್ಲಿಯ ಬಹುಜನರ ಭಾಷೆ ಕನ್ನಡ ಅಲ್ಲದಿದ್ದರೂ (ತುಳು, ಕೊಂಕಣಿಯೆ ಬಹುಜನರ ಭಾಷೆ) ಕನ್ನಡಕ್ಕಾಗಿ ಅವರು ಮಾಡುತ್ತಿರುವ ಕೆಲಸ, ಕನ್ನಡದ ಬಗ್ಗೆ ಅವರಿಗಿರುವ ಪ್ರೀತಿ ಅಸಾಧಾರಣ!! ಕೊಂಕಣಿ, ತುಳು ಮಾತೃಭಾಷೆಯವರಿಂದಲೇ ಅಲ್ಲಿ ಕನ್ನಡ ಭದ್ರವಾಗಿ ನಿಂತಿರುವುದು, ಬದುಕಿರುವುದು, ಇತ್ಯಾದಿಯಾಗಿ ನಾನು ದ.ಕನ್ನಡದವನೆ ಎಂಬಂತೆ ಉಬ್ಬುಬ್ಬಿ ಮಾತನಾಡಿದೆ.

ಆಗ ಆ ಮಿತ್ರರು : 'ಅವರಲ್ಲಿ ನೀವು ಯಾವ ದೋಷವನ್ನು ಕಾಣಲಿಲ್ಲವೆ?' ಎಂದರು. 'ಊರಿದ್ದಲ್ಲಿ ಹೊಲೆಗೇರಿ' ಅಂತ ಗಾದೆಯೆ ಇದೆಯಲ್ಲ ! ಮಾನವ ಎಲ್ಲಿದ್ದರೂ ಅವರ ಸ್ವಭಾವ ಒಂದೇ! ಅವರ ಮೈಬಣ್ಣ, ಮಾತೃಭಾಷೆ, ನಿಂತ ನೆಲ ಯಾವುದೇ ಆದರೂ ಸ್ವಭಾವ ಒಂದೆ. ದುಃಖವಾದರೆ ಅಳುವುದು; ಸಂತೋಷವಾದಾಗ ನಗುವುದು; ಮೆಚ್ಚುಗೆ ಆದಾಗ ಚಪ್ಪಾಳೆ ತಟ್ಟುವುದು ಜಗತ್ತಿನಲ್ಲಿ ಒಂದೇ ರೀತಿ!

ಆದರೂ ಒಂದೊಂದು ದೇಶದ ಜನರಿಗೆ ಒಂದೊಂದು ವಿಶಿಷ್ಟ ಗುಣ. ಹಾಗೆಯೇ ನಮ್ಮ ರಾಜ್ಯದ ವಿವಿಧ ಜಿಲ್ಲೆಗಳ ಜನರ ನಡೆನುಡಿ ಸ್ವಭಾವ ಸಾಮಾನ್ಯವಾಗಿ ಒಂದೆ ಆದರೂ, ಯಾವುದೂ ವೈಶಿಷ್ಟ್ಯ ಇರುತ್ತದೆ.

**(ಕೋ.ಚೆ. ನಿವೃತ್ತ ನ್ಯಾಯಾಧೀಶರು ಹಾಗೂ ಕನ್ನಡದ ಪ್ರಮುಖ ಬರಹಗಾರರು)**

# ಎಲ್ಲಾ ಸರಿ ಆದರೆ....!

**ನಾ**ನು ಹುಟ್ಟಿದ್ದು ಬೆಳೆದದ್ದು ಎಲ್ಲವೂ ಬಯಲುಸೀಮೆಯಲ್ಲಿಯೇ. ಆದರೆ ನನ್ನ ಒಡನಾಟವೆಲ್ಲಾ ಕರಾವಳಿ ಪ್ರದೇಶದ ಅದರಲ್ಲೂ ವಿಶೇಷವಾಗಿ ದಕ್ಷಿಣ ಕನ್ನಡದ ಜನರೊಂದಿಗೇ. ಅದು ಹೇಗೆ ಎನ್ನುವಿರಾ? ಕಳೆದ 16 ವರ್ಷಗಳಿಂದ ನಮ್ಮ ಕುಟುಂಬ ಬದುಕುತ್ತಿರುವುದು ರಾಜಧಾನಿ ಬೆಂಗಳೂರಿನ ಮಿನಿ ದಕ್ಷಿಣ ಕನ್ನಡ ಅರ್ಥಾತ್ ಕೆನರಾ ಬ್ಯಾಂಕ್ ಕಾಲೋನಿಯಲ್ಲಿ. ನಮ್ಮ ಸುತ್ತ ಮುತ್ತಲಿನ 350-400 ಮನೆಗಳಲ್ಲಿ ನಮ್ಮಂತಹ ಒಬ್ಬಿಬ್ಬರನ್ನು ಬಿಟ್ಟರೆ ಉಳಿದಂತೆ ಕಾಮತ್‌ಗಳು, ಪೈಗಳು, ಶೈಣೈಗಳೇ ಹೆಚ್ಚು. ರಾಜ್ಯದ ಇತರೆ ಜಿಲ್ಲೆಗಳ ಜನರೊಂದಿಗೆ ಹೋಲಿಸಿದಾಗ ಸ್ವತಂತ್ರ ಜೀವನ ರೂಪಿಸಿಕೊಳ್ಳುವ ಸ್ವಯಂ ಉದ್ಯೋಗವನ್ನು ಆಯ್ಕೆ ಮಾಡಿಕೊಳ್ಳುವ ಬೆಳೆಸಿದ ಉದ್ಯಮವನ್ನು ಉಳಿಸಿಕೊಳ್ಳಲು ಆ ಜನರ ಚಾಕಚಕ್ಯತೆ ನನಗೆ ಬಹು ಮೆಚ್ಚುಗೆಯಾದ ಗುಣ. ದಕ್ಷಿಣ ಕನ್ನಡ ಜಿಲ್ಲೆ ಅಖಂಡ ಕರ್ನಾಟಕದ ಅವಿಭಾಜ್ಯ ಅಂಗವಾದರೂ ರಾಜ್ಯದ ಇತರೆ ಜಿಲ್ಲೆಗಳ ಜನರಿಗಿಂತ ತಾವು ಭಿನ್ನ, ನಾವೇ ಬೇರೆ ಎಂಬಂತೆ ವರ್ತಿಸುವುದು ಬಹುಜನರ ಒಡನಾಟದಿಂದ ವೇದ್ಯವಾದದ್ದು.



**ಸರಳ ಮಂಜುನಾಥ್**

ನಾಲ್ಕುಜನ ಒಂದೆಡೆ ಸೇರಿದಾಗ ಕೊಂಕಣಿ/ತುಳು ಭಾಷೆಯಲ್ಲಿ ಸಂವಾದ ಆರಂಭವಾಯಿತೆಂದರೆ, ಈ ಭಾಷೆ ತಿಳಿಯದ ಬೇರೊಬ್ಬರು ನಮ್ಮಲ್ಲಿದ್ದಾರೆ ಎಂಬುದನ್ನೆ ಮರೆಯುವ ಅಥವಾ ನಮ್ಮ ಇರುವಿಕೆಯನ್ನೇ ಕಡೆಗಣಿಸುವ ಮನೋಭಾವ ಎದ್ದುಕಾಣುವ ಲಕ್ಷಣ. ಇಂತಹ ಒಂದೆರಡು, ಕೊರತೆಗಳನ್ನ ಬಿಟ್ಟರೆ ಈ ಜನ ಚುರುಕುಮತಿಗಳೂ ಪ್ರಗತಿಶೀಲರು ಬುದ್ಧಿವಂತರು ಎಂಬುದು ನನ್ನ ಅನಿಸಿಕೆ.

# ಮಣ್ಣಿನಿಂದ ಮಣಿಪಾಲ ಕಟ್ಟುವವರು !

'ಮನೆಗೆದ್ದು ಮಾರುಗೆದಿ', 'ಕೈ ಕೆಸರಾದರೆ ಬಾಯಿ ಮೊಸರು', 'ಪರಿಶ್ರಮವೇ ದೇವರು', 'ಆಳಾಗಿ ದುಡಿ ಅರಸಾಗಿ ಉಣ್ಣು' ಇತ್ಯಾದಿ ಜನವಾಣಿಗೆ ದಕ್ಷಿಣ ಕನ್ನಡದ ಜನ ತೆರೆದ ಪುಸ್ತಕ. 'ಆರ್ ಅಂಕುಶಮಿಟ್ಟೊಡಂ ನೆನೆವುದೆನ್ನಮವಂ ಬನವಾಸಿದೇಶಮಂ' ಎಂಬ ಪಂಪನ ಮಾತಿನಲ್ಲಿ ಮಣ್ಣಿನವಾಸನೆಯ ಗುಣ ಗೌರವವು ತುಂಬಿತುಳುಕಿರುವಂತೆ ದಕ್ಷಿಣ ಕನ್ನಡದ ಜನರೂ ಕೂಡ, ತಾವು ಗೌರೀಶಂಕರದಲ್ಲಿ ವಾಸವಾಗಿದ್ದರೂ, ತಮ್ಮ ತಮ್ಮ ಹುಟ್ಟಿದ ಊರುಗಳನ್ನು ಮರೆಯದ ಮರಿ ದುಂಬಿಗಳು; ಆತ್ಮದ ಬೆಳಕಿನಲ್ಲಿ ಹಾಡುವ ಕೋಗಿಲೆಗಳು; ತಿಳಿದು ಮಾತಾಡುವ ಗಿಳಿವಿಂಡು; ಅಂತೆಯೇ ಗೌರೀಶಂಕರವನ್ನು ತೇನಸಿಂಗನು ಮುಟ್ಟುವ ಮೊದಲೇ ಅಲ್ಲಿ ಒಂದು ಉಡುಪಿ ಹೋಟೆಲ್ಲು ಬೀಡು ಬಿಟ್ಟಿತ್ತೆಂದು ಹೇಳುವ ಮಾತಿನಲ್ಲಿ ಉತ್ಪ್ರೇಕ್ಷೆಯಿದ್ದರೂ ಅಲ್ಲಿ ದಕ್ಷಿಣ ಕನ್ನಡದವರ ಸಾಹಸ ಪ್ರಜ್ಞೆಯ ದರ್ಶನವಿದೆಯೆಂಬುದು ಸತ್ಯ. ಅದೇ ರೀತಿ ಈಗಾಗಲೇ ದಕ್ಷಿಣ ಕನ್ನಡದ ಜನ ಮಂಗಳ ಹಾಗೂ ಚಂದ್ರಲೋಕಗಳಲ್ಲಿ ತಮ್ಮ ಕೈಗಾರಿಕಾ ವಸಾಹತುಗಳನ್ನು ಸ್ಥಾಪಿಸಿರಬೇಕೆಂಬ ಧ್ವನ್ಯುಕ್ತ ಮಾತಿನಲ್ಲಿ ಅಸಾಧ್ಯದ ಅಪಹ್ನುತಿಯು ಇರಲಾರದು.



**ಪ್ರೊ. ವಸಂತ ಕುಷ್ಟಗಿ**

> ಗೌರೀಶಂಕರವನ್ನು ತೇನಸಿಂಗನು ಮುಟ್ಟುವ ಮೊದಲೇ ಅಲ್ಲಿ ಒಂದು ಉಡುಪಿ ಹೋಟೆಲ್ಲು ಬೀಡು ಬಿಟ್ಟಿತ್ತೆಂದು ಹೇಳುವ ಮಾತಲ್ಲಿ ಉತ್ಪ್ರೇಕ್ಷೆಯಿದ್ದರೂ ಅಲ್ಲಿ ದಕ್ಷಿಣ ಕನ್ನಡದವರ ಸಾಹಸ ಪ್ರಜ್ಞೆಯ ದರ್ಶನವಿದೆಯೆಂಬುದು ಸತ್ಯ.

ಏಕೆಂದರೆ ದಕ್ಷಿಣ ಕನ್ನಡದ ಜನರು ಮೈಮುರಿದು ದುಡಿಯುವುದೇ ಇರಲಿ, ಸತ್ ಚಿತ್ ಆನಂದಗಳನ್ನು ಸಂಪಾದಿಸುವುದೇ ಇರಲಿ, ಕಲೆಸಾಹಿತ್ಯಗಳ ಅಭಿವ್ಯಕ್ತಿಯೇ ಇರಲಿ, ಪುರಾಣ ಪುಣ್ಯಕಥೆಯೇ ಇರಲಿ, ವಿಜ್ಞಾನದ ಸಾಧನೆಯೇ ಇರಲಿ, ಶೈಕ್ಷಣಿಕ ಕ್ಷೇತ್ರದ ಹರವೇ ಇರಲಿ. ಎಲ್ಲದರಲ್ಲಿಯೂ ನಿರಂಬಳ ಮನಸ್ಸು ಹಾಕಿ ಸ್ಪಷ್ಟ ನಿಲುವುಗಳನ್ನು ಇಟ್ಟುಕೊಂಡು, ಶಿಸ್ತಿನ ಬದುಕನ್ನು ಸ್ವಸಾಮರ್ಥ್ಯ ದರ್ಶನದಿಂದ ಚಿತ್ತಸ್ವಾಸ್ಥ್ಯವನ್ನು ಪಡೆದುಕೊಂಡೇ ಸಾಧಿಸುವವರು ಇವರು. ಅಂತೆಯೇ ಬಿಸಿಲ ಬದುಕನ್ನುಂಡು ಬೆಮರ ಗಂಗೆಯಿಂದ ಕಡಲ ಸೌಂದರ್ಯವನ್ನು ಅಂದಿನಿಂದ ಇಂದಿನವರೆಗೂ ಮುಂದೆಯೂ ಕಟ್ಟಿದವರು, ಕಟ್ಟುತ್ತಿರುವವರು, ಕಟ್ಟುವವರು.

ಇಂತಹ ಬದುಕಿನ ಮಹತಿಯಲ್ಲಿ ತಾನು ತನ್ನ ಕುಟುಂಬ ತನ್ನೂರಿನ ಜನ ತನ್ನ ಜಿಲ್ಲೆಯ ಜನರನ್ನು ಮೊದಲು ಗೌರವಿಸಿ ಅವರಿಗೆ ಆಸರೆಯಾಗುತ್ತಲೇ

ನೆಲದಗಲ ಜಲದಗಲ ಮುಗಿಲಗಲ ವಿಸ್ತಾರ ವಿಶ್ವವಾಗುವ ಜನ ಈ ದಕ್ಷಿಣ ಕನ್ನಡದವರು. ವಿಶ್ವ ವಿಸ್ತಾರದಲ್ಲಿಯೂ ತಮ್ಮ ಮೂಲವನ್ನು ಮರೆಯದ ಬೆಳೆಯುವ ಸ್ವಾವಲಂಬಿ ಸಂಪತ್ತು ಇವರು. ಮಧ್ವಾಚಾರ್ಯರಿಂದ ಹಿಡಿದು ಕಾರಂತರವರೆಗೂ, ಹಾಳು ಮಣ್ಣನ್ನು ಮಣಿಪಾಲವಾಗಿಸಿದ ಪೈಗಳನ್ನೊಳಗೊಂಡು ಅಷ್ಟೆ ಏಕೆ ಅತಿ ಸಾಮಾನ್ಯ ದಕ್ಷಿಣಕನ್ನಡದ ಹೈದನಲ್ಲಿಯೂ ಈ ನೆಲೆ ಬೆಲೆಯ ವಿಕಾಸವನ್ನು ಕಾಣುವ ಬತ್ತದ ಕಮರದ ನೆಲೆ, ಅಪವ್ಯಯವಾಗದ ಬೆಲೆ, ಉಬ್ಬರದ ಅಬ್ಬರಕೆ ಮಾರು ಹೋಗದ ಶೆಲೆ ಇದೆಲ್ಲ ಅಲ್ಲಿ ನಿರಂತರದ ಬೀಡು. ಅಂತೆಯೇ ಇವರನ್ನೆಲ್ಲ 'ಕಡಲತೀರದ ಭಾರ್ಗವರು' ಎಂದು ಕರೆದದ್ದು. ಈ ಮಾತು ಸಧ್ಯ ಇವರಿಗೆ ಸಲ್ಲಬೇಕಾದ ಪ್ರಶಸ್ತಿ.

*(ಲೇಖಕರು ಗುಲ್ಬರ್ಗಾ ನಿವಾಸಿ, ವಿಶ್ವವಿದ್ಯಾಲಯದಲ್ಲಿ ಪ್ರೊಫೆಸರ್ ಆಗಿದ್ದವರು.)*

# ಆಯುರ್ವೇದ ಪ್ರಿಯರು



ಡಾ. ವಸುಂಧರಾ ಭೂಪತಿ

ದಕ್ಷಿಣ ಕನ್ನಡದ ಜನರಲ್ಲಿ ನಾನು ಕಂಡ ವಿಶಿಷ್ಟ ಗುಣವೆಂದು ಆಯುರ್ವೇದ ಚಿಕಿತ್ಸೆಯ ಬಗ್ಗೆ ಅವರಿಗಿರುವ ಒಲವು. ಆಯುರ್ವೇದ ಪದ್ಧತಿಯ ಹೆಚ್ಚಿನ ವೈದ್ಯರೂ ಅಲ್ಲಿಯವರೇ ಎಂದರೂ ತಪ್ಪಿಲ್ಲ. ಜನ ಸಾಮಾನ್ಯರೂ ಕೂಡ ಯಾವುದೇ ಕಾಯಿಲೆ ಬಂದರೂ ಆಯುರ್ವೇದ ಚಿಕಿತ್ಸಾ ಪದ್ಧತಿಯನ್ನೇ ಅವಲಂಬಿಸುತ್ತಾರೆ. ಹಾಗೆಯೇ ಅದನ್ನೆ ಅನುಸರಿಸುತ್ತಾರೆ. ಇದಕ್ಕೆ ಪ್ರಮುಖ ಕಾರಣವೆಂದರೆ ದಕ್ಷಿಣ ಕನ್ನಡದ ಸುತ್ತಮುತ್ತಲಿನ ದಟ್ಟವಾದ ಕಾಡು (ಈಗ ಮಾಯವಾಗುತ್ತಿದೆ) ಹಾಗೂ ಅಲ್ಲಿ ದೊರೆಯುವ ಸಮೃದ್ಧ ಔಷಧೀಯ ಗಿಡಮೂಲಿಕೆಗಳು ಎಂದರೆ ತಪ್ಪಿಲ್ಲ. ನಾನು ತಾರಾನಾಥ ಆಯುರ್ವೇದ ಕಾಲೇಜಿನಲ್ಲಿ ಬಿ.ಎ.ಎಂ.ಎಸ್ ಓದುತ್ತಿರುವಾಗ ನಮ್ಮ ತರಗತಿಯಲ್ಲೇ ಏಕೆ ಇಡೀ ಕಾಲೇಜಿನ ವಿದ್ಯಾರ್ಥಿಗಳಲ್ಲಿ ದಕ್ಷಿಣ ಕನ್ನಡದವರೇ ಹೆಚ್ಚಾಗಿದ್ದರು. ಆಗಲೇ ನನಗೂ ದಕ್ಷಿಣ ಕನ್ನಡದವರ ಬಗ್ಗೆ ತಿಳಿದುಕೊಳ್ಳಲು ಅವಕಾಶ ಉಂಟಾಯಿತು. ತುಳು ಭಾಷೆಯ ಬಗ್ಗೆ, ತಿಳಿದುಕೊಳ್ಳಲು ಅವಕಾಶ ಉಂಟಾಯಿತು. ತುಳುಭಾಷೆಯ ಬಗ್ಗೆ ಕುಸುಬಲಕ್ಕಿ ಗಂಜಿ, ಬಾಳೆಹಣ್ಣಿನ ಹಲ್ವ ಮುಂತಾದವುಗಳ ಬಗ್ಗೆ ತಿಳಿದುಕೊಂಡಿದ್ದು ಆಗಲೇ ಎನ್ನಬಹುದು. ಪಕ್ಕದ ಜಿಲ್ಲೆಯವರಾದರೂ ನನ್ನ ತಂದೆ ತಾಯಿ ಬಳ್ಳಾರಿಯಲ್ಲಿ ಬಿ.ಎ.ಎಂ.ಎಸ್ ಓದಿಸಲು ಹಿಂದೆ ಮುಂದೆ ಯೋಚಿಸುತ್ತಿರುವಾಗ ದೂರದ ಮಂಗಳೂರಿನಿಂದ ಹುಡುಗರಷ್ಟೇ ಅಲ್ಲ ಹುಡುಗಿಯರೂ ಬಳ್ಳಾರಿಗೆ ಬಂದು ಅಲ್ಲಿಯ ಬಿಸಿಲಿಗೆ, ರೊಟ್ಟಿ ಚಟ್ನಿಗೆ, ಚಾ ಮಂಡಕ್ಕಿಗೆ ಹೊಂದಿಕೊಂಡು ಅಲ್ಲಿನ ಜನರೊಡನೆ ಬೆರೆತು ಐದೂವರೆ ವರ್ಷಗಳಷ್ಟು ದೀರ್ಘಕಾಲ ವಿದ್ಯಾಭ್ಯಾಸ ಮಾಡಿ ಆಯುರ್ವೇದದ ಪದವಿ ಪಡೆಯುತ್ತಿರುವುದು ಕಂಡು ಅವರಿಗೆ ಆಯುರ್ವೇದ ಬಗ್ಗೆ ಇರುವ ಪ್ರೀತಿ ಅರ್ಥವಾಗುತ್ತದೆ. ನನ್ನ ಜೊತೆ ಓದಿದ ದ.ಕನ್ನಡದ ವಿದ್ಯಾರ್ಥಿ, ವಿದ್ಯಾರ್ಥಿನಿಯರನ್ನು ನಾನು ಮರೆತಿಲ್ಲ, ಮರೆಯುವುದೂ ಇಲ್ಲ.

> ತಾರಾನಾಥ ಆಯುರ್ವೇದ ಕಾಲೇಜಿನಲ್ಲಿ ಬಿ.ಎ.ಎಂ.ಎಸ್ ಓದುತ್ತಿರುವಾಗ ನಮ್ಮ ತರಗತಿಯಲ್ಲೇ ಏಕೆ ಇಡೀ ಕಾಲೇಜಿನ ವಿದ್ಯಾರ್ಥಿಗಳಲ್ಲಿ ದಕ್ಷಿಣ ಕನ್ನಡದವರೇ ಹೆಚ್ಚಾಗಿದ್ದರು.

*(ವಸುಂಧರಾ ಭೂಪತಿಯವರು ಖ್ಯಾತ ಆಯುರ್ವೇದ ವೈದ್ಯರಾಗಿದ್ದು, ಹಲವಾರು ಪತ್ರಿಕೆಗಳಲ್ಲಿ ಲೇಖನ ಬರೆಯುತ್ತಿದ್ದಾರೆ.)*

# ನೋವುಂಡು ಬೆಳೆದವರು



ಸುರೇಶ್ ಪಿ. ಶೆಟ್ಟಿ

ದಕ್ಷಿಣ ಕನ್ನಡದ ಜನ ಮೂಲತಃ ಮಹತ್ವಾಕಾಂಕ್ಷಿಗಳು. ಜೀವನ ಪ್ರೇಮಿಗಳು. ಅವರ ಈ ಜೀವನ ಪ್ರೇಮವೇ ಅವರನ್ನು ಹಲವು ಹತ್ತು ದಶಕಗಳಾಚೆಯೇ ವಲಸೆ ನಡೆಯುವಂತಾಗಿಸಿದೆ. ಆದರೆ ಈ ವಲಸೆ ಹೆಚ್ಚು ಹೆಚ್ಚು ತೀವ್ರಗೊಂಡಿದ್ದು ಎಪ್ಪತ್ತರ ದಶಕದಲ್ಲಿ.

ಭೂ ಸುಧಾರಣೆ ಕಾಯ್ದೆ ಅನ್ವಯ ಸರ್ಕಾರ 'ಉಳುವವನೇ ಹೊಲದೊಡೆಯ' ಎಂದು ಘೋಷಿಸಿ ಅದನ್ನು ಕರ್ನಾಟಕದಲ್ಲಿ ಮೊಟ್ಟ ಮೊದಲ ಬಾರಿಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲೇ ಜಾರಿ ತಂದದ್ದು ಜಿಲ್ಲೆಯಲ್ಲಿನ ನಮ್ಮಂತಹ ಬಹಳಷ್ಟು ಜನರ ಭೂಮಿ ಪರರ ಪಾಲಾಗಿ ರಾತ್ರೋರಾತ್ರೀ ಬೀದಿ ಪಾಲಾಗಿ ಹೋದೆವು.

ಬದುಕಿನ ಆ ಅಂಧಕಾರವನ್ನು ಹೋಗಲಾಡಿಸಿಕೊಳ್ಳಬೇಕಾದ ಅನಿವಾರ್ಯತೆಯಿತ್ತು. ಹೀಗೆ ಜನತೆ ತಮ್ಮ ಬದುಕನ್ನು ರೂಪಿಸಿಕೊಳ್ಳಲು ಹುಟ್ಟೂರು ತೊರೆಯದೇ ವಿಧಿ ಇರಲಿಲ್ಲ. ಇಂದು ದಕ್ಷಿಣ ಕನ್ನಡದ ಜನ ದೇಶದೆಲ್ಲೆಡೆ ಹರಿದು ಹಂಚಿ ಹೋಗಿದ್ದಾರೆ. ತಮ್ಮ ಸ್ಥಿತಿಗತಿಗಳನ್ನು ವೃದ್ಧಿಸಿಕೊಂಡಿದ್ದಾರೆ. ನಾನು ಇದಕ್ಕೆ ಹೊರತಾಗಿಲ್ಲ.

ನನ್ನ ಅಭಿಪ್ರಾಯ ಹೇಳಬೇಕಾದರೆ 'ಅಂದಿನ ಆ ನೋವು ನಮ್ಮ ಬದುಕಿನ ಮತ್ತೊಂದು ಮಜಲಿಗೆ ಕಾರಣವಾಗಿದೆ. ಇಲ್ಲದಿದ್ದಲ್ಲಿ ನಮ್ಮ ಜನ ಬಾವಿಯಲ್ಲಿನ ಕಪ್ಪೆಗಳಂತೆ ಆ ಊರುಗಳಲ್ಲೇ ಕೊಳೆಯಬೇಕಿತ್ತು.

ಈಗ ನಮ್ಮೂರಿನ ಬಗ್ಗೆ ಅಭಿಮಾನವಿಲ್ಲ ಎಂದಲ್ಲ. ಅಭಿಮಾನವಿದೆ. ಬೆಳೆಸಿದ ಈ ಊರಿನ ಬಗ್ಗೆಯೂ ಅಭಿಮಾನವಿದೆ.

> ಈಗ ನಮ್ಮೂರಿನ ಬಗ್ಗೆ ಅಭಿಮಾನವಿಲ್ಲ ಎಂದಲ್ಲ. ಅಭಿಮಾನವಿದೆ. ಬೆಳೆಸಿದ ಈ ಊರಿನ ಬಗ್ಗೆಯೂ ಅಭಿಮಾನವಿದೆ.

ನಮ್ಮ ಜನರಲ್ಲಿ ಧಾರ್ಮಿಕ ಕಟ್ಟುಪಾಡುಗಳು ಹೆಚ್ಚು. ಆದ ಕಾರಣ ವರ್ಷಕ್ಕೊಮ್ಮೆ ಮನೆದೇವರು, ಭೂತಾರಾಧನೆ, ನಾಗಾರಾಧನೆಯಂತಹ ದೇವತಾ ಕಾರ್ಯಗಳಿಗಾಗಿ ಹುಟ್ಟೂರಿಗೆ ತೆರಳುವುದರಿಂದ ಆ ನೆಲದ ಸಂಪರ್ಕ ಚಿರವಾಗಿ ಉಳಿದಿದೆ.

ಹಿಂದೊಮ್ಮೆ ಪ್ರಾಮಾಣಿಕತೆಗೆ ಹೆಸರಾಗಿದ್ದ ದಕ್ಷಿಣ ಕನ್ನಡ ಜಿಲ್ಲೆಯ ಕೆಲ ಯುವಜನರು ಇಂದು ಕಾನೂನು ಬಾಹಿರ ಕೃತ್ಯಗಳಲ್ಲಿ ತೊಡಗಿ ಭೂಗತ ಜಗತ್ತನ್ನು ಪ್ರವೇಶಿಸುತ್ತಿರುವುದು, ಜನತೆ ದಕ್ಷಿಣ ಕನ್ನಡಿಗರನ್ನು ಅನುಮಾನದಿಂದ ಕಾಣುವಂತಾಗಿಸಿದೆ. ಇದು ದುರಂತ ಮತ್ತು ಬೇಸರ ತರಿಸುವ ಸಂಗತಿಯಾಗಿದೆ.

*(ಇವರು ಮೂಲತಃ ಉಡುಪಿ ಜಿಲ್ಲೆಯ ಕಳತ್ತೂರು ಗ್ರಾಮದವರು. ಈಗ ಬಳ್ಳಾರಿ ಹೋಟೆಲು ಮಾಲೀಕರ ಸಂಘದ ಅಧ್ಯಕ್ಷರಾಗಿದ್ದಾರೆ)*

# ದ.ಕ. ಜನ ಇಲ್ಲದ ಜಿಲ್ಲೆಯೇ ಇಲ್ಲ !



ಹರ್ಷವರ್ಧನ್ ಸುಹಾ

ದಕ್ಷಿಣ ಕನ್ನಡಿಗರಿಲ್ಲದ ಜಿಲ್ಲೆ, ರಾಜ್ಯ ನಮ್ಮ ದೇಶದಲ್ಲಿಲ್ಲ ಎಂದರೆ ಅತಿಶಯವೇನಲ್ಲ. ಈ ಮಾತನ್ನು ಹೇಳಲು ನನಗೆ ಹೆಮ್ಮೆ ಎನಿಸುತ್ತದೆ. ಏಕೆಂದರೆ ಮನುಷ್ಯ ಒಂದೆಡೆಯಿಂದ ಇನ್ನೊಂದೆಡೆಗೆ ವಲಸೆ ನಡೆದು ಅಲ್ಲಿ ತನ್ನ ಬದುಕನ್ನು ರೂಪಿಸಿಕೊಳ್ಳುವುದು, ಬೆಳೆಯುವುದು ಅಷ್ಟು ಸುಲಭದ ಕೆಲಸವೇನಲ್ಲ. ಅದಕ್ಕೆ ಅವನಲ್ಲಿ ಕನಿಷ್ಠ ಸೌಜನ್ಯದ ಗುಣಗಳಿರಬೇಕು. ಅಂತಹ ಗುಣಗಳು ದಕ್ಷಿಣ ಕನ್ನಡಿಗರಲ್ಲಿದೆ. ಆದ್ದರಿಂದಲೇ ಅವರಿಂದು ದೇಶದಲ್ಲೆಡೆ ತಮ್ಮ ಬದುಕನ್ನು ಕಂಡುಕೊಂಡಿದ್ದಾರೆ.

ವೃತ್ತಿ ನೈಪುಣ್ಯ, ಧೈರ್ಯ, ಸ್ನೇಹಪರತೆ, ಸಹನೆ, ಯಾವ ಜನರೊಂದಿಗಿರಲಿ ಆ ಜನರೊಂದಿಗೆ ಹೊಂದಿಕೊಂಡು ಬಾಳುವಂತಹುದು ಇಂತಹ ಕೆಲವು ಗುಣಗಳು ದಕ್ಷಿಣ ಕನ್ನಡಿಗರಲ್ಲಿ ಮೈಗೂಡಿಕೊಂಡಿವೆ.

ಮನುಷ್ಯ ಒಂದೆಡೆಯಿಂದ ಇನ್ನೊಂದೆಡೆಗೆ ವಲಸೆ ನಡೆದು ಅಲ್ಲಿ ತನ್ನ ಬದುಕನ್ನು ರೂಪಿಸಿಕೊಳ್ಳುವುದು, ಬೆಳೆಯುವುದು ಅಷ್ಟು ಸುಲಭದ ಕೆಲಸವೇನಲ್ಲ.

ನಾವೂ 1982ರಷ್ಟು ಹಿಂದೆಯೇ ಇಲ್ಲಿಗೆ ಬಂದಿದ್ದು, ಇಲ್ಲಿಯವರೇ ಆಗಿಬಿಟ್ಟಿದ್ದೇವೆ. ಇಲ್ಲಿಯ ನೆಲ, ಜನಜೀವನವನ್ನು ಇಷ್ಟಪಟ್ಟಿದ್ದೇವೆ. ಅಭಿಮಾನಿಸುತ್ತಿದ್ದೇವೆ. ಹುಟ್ಟೂರನ್ನು ಅಲ್ಲಿಯ, ಸಂಸ್ಕೃತಿಯನ್ನೂ ಮರೆತಿಲ್ಲ.

ಇಲ್ಲಿ ನಮ್ಮ ಜಿಲ್ಲೆಯ ಜನರನ್ನು ಒಂದೆಡೆ ಸೇರಿಸುವಲ್ಲಿ 'South Canara Association' ಪಾತ್ರವಿದೆ. ಈ ಮೂಲಕ ನಮ್ಮ ಸಂಸ್ಕೃತಿ, ಯಕ್ಷಗಾನದಂತಹ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಇಲ್ಲಿಯ ಜನರಿಗೆ ಪರಿಚಯಿಸಿದ್ದೇವೆ. ನಮ್ಮ ಶಕ್ತ್ಯಾನುಸಾರ ಇಲ್ಲಿಯ ಜನರ ಕಷ್ಟ - ಸುಖ ನೋವು ನಲಿವುಗಳಲ್ಲಿ ಭಾಗಿಯಾಗುತ್ತಿದ್ದೇವೆ. ಹೀಗೆ ಸ್ಪಂದಿಸುವುದು ನಮ್ಮ ಕರ್ತವ್ಯವೆಂದೂ ಭಾವಿಸಿದ್ದೇವೆ.

***(ಸುಹಾ ಅವರು ಉಡುಪಿ ಜಿಲ್ಲೆಯ ಪೆರಡೂರಿನವರು. ಈಗ ಕುಬೇರ ಬಾರ್ ಅಂಡ್ ರೆಸ್ಟೋರೆಂಟ್‌ನ ಮಾಲೀಕರಾಗಿದ್ದಾರೆ)***

# ಕಸುಬುಗಾರಿಕೆ ಗುಣ

'ದಕ್ಷಿಣ ಕನ್ನಡ ಜಿಲ್ಲೆ ಆರ್ಥಿಕ ಸಂಪದ್ಭರಿತ ಜಿಲ್ಲೆ' ಎಂಬುದನ್ನು ಸಂಪೂರ್ಣವಾಗಿ ಒಪ್ಪಲಾರೆ. ಅಲ್ಲಿ ರೈತನಿಗೆ ಹಲವು ಸಮಸ್ಯೆಗಳಿವೆ. ವ್ಯವಸಾಯ ತುಂಬಾ ಕಷ್ಟಕರವಾಗಿದೆ. ಕೂಲಿಕಾರರೇ ಸಿಗದ ಪರಿಸ್ಥಿತಿಯಿದೆ.

ನಮ್ಮದೇ ಎರಡು ಮುಡಿ (5 ಎಕರೆ)ಯಷ್ಟು ಭೂಮಿಯನ್ನು ಸಾಗುವಳಿ ಮಾಡಿಸುತ್ತಿದ್ದೇನೆ. ದಿನಕ್ಕೆ ಒಬ್ಬ ಆಳಿಗೆ 150 ರೂಪಾಯಿ ಕೂಲಿ ಕೊಟ್ಟು, ಅವನಿಗೆ ಕಾಫಿ, ತಿಂಡಿ, ಊಟ, ಉಪಾಹಾರಗಳನ್ನು ಕೊಟ್ಟು ನೋಡಿಕೊಂಡರೂ ಕೂಲಿಕಾರರು ಸಿಗುವುದು ದುರ್ಲಭವಾಗಿದೆ.

ಇದರಿಂದ ವರ್ಷಕ್ಕೆ ಐದು ಸಾವಿರ ರೂಪಾಯಿಗಳಷ್ಟು ನಷ್ಟ ಉಂಟಾಗುತ್ತಿದೆ. ಆದರೂ ನಮ್ಮ ಪೂರ್ವಿಕರ ಭೂಮಿಯನ್ನು ಬೀಳು ಬಿಡುವಂತೆ ಮಾಡಬಾರದೆಂಬ ಉದ್ದೇಶದಿಂದ ಸಾಗುವಳಿಯನ್ನು ಮುಂದುವರಿಸುತ್ತಿದ್ದೇವೆ. ಎರಡು ದಶಕಗಳಾಚೆ ಇಂತಹ ಪರಿಸ್ಥಿತಿ ಇರಲಿಲ್ಲ. ಎಲ್ಲವೂ ಅಸ್ತವ್ಯಸ್ತವಾಗಿದೆ.



ರಾಮಚಂದ್ರ ಮಧ್ಯಸ್ಥ

ವ್ಯವಸಾಯದಿಂದ ಲಾಭವಿಲ್ಲ ಎಂದಾದ ಮೇಲೆಯೇ ನಮ್ಮ ಜನರ ವಲಸೆ ಹೆಚ್ಚಿದೆ. 1940ರಷ್ಟು ಹಿಂದೆಯೇ ನಮ್ಮ ಕುಟುಂಬ ಇತ್ತ ವಲಸೆ ಬಂದಿದೆ.

ದಕ್ಷಿಣ ಕನ್ನಡದಿಂದ ವಲಸೆ ಬಂದ ಯಾವ ಜನರು ಕೈಯಲ್ಲಿ ದುಡ್ಡಿನ ಕಂತೆಯನ್ನು ಇಟ್ಟುಕೊಂಡು ಬಂದವರಲ್ಲ. ಕೈ ಕಸುಬನ್ನು ನಂಬಿಕೊಂಡು ಬಂದವರು.

ಇಂದು ನಾವು ಸೇರಿದಂತೆ ಬಳ್ಳಾರಿಯ ಹಲವಾರು ಪ್ರಮುಖ ಹೊಟೇಲ್‌ಗಳ ಮಾಲೀಕರು ಹಿಂದೊಂದು ದಿನ ಒಂದು ಹೊಟೇಲಿನ ಕಾರ್ಮಿಕರಾಗಿದ್ದವರೆ. ನಮ್ಮ ಇಂದಿನ ಸ್ಥಿತಿಯನ್ನು ನಾವೇ ರೂಪಿಸಿಕೊಂಡಿದ್ದೇವೆ ಬೇರೆ ಯಾವ ಜಾದೂ ಇಲ್ಲಿಲ್ಲ.

ದಕ್ಷಿಣ ಕನ್ನಡದಿಂದ ವಲಸೆ ಬಂದ ಯಾವ ಜನರು ಕೈಯಲ್ಲಿ ದುಡ್ಡಿನ ಕಂತೆಯನ್ನು ಇಟ್ಟುಕೊಂಡು ಬಂದವರಲ್ಲ ಕೈ ಕಸುಬನ್ನು ನಂಬಿಕೊಂಡು ಬಂದವರು.

ದಕ್ಷಿಣ ಕನ್ನಡಿಗರದು 'ತಣ್ಣೀರನ್ನು ತಣಿಸಿ ಕುಡಿಯುವಂತಹ ವ್ಯಕ್ತಿತ್ವ, ಅವರ ಕ್ರಮ, ಪ್ರಾಮಾಣಿಕತೆಯೇ ಅವರನ್ನು ಭಿನ್ನರಾಗಿ ಕಾಣಿಸುವಂತೆ ಮಾಡಿದೆ.

***(ಮಧ್ಯಸ್ಥರು 1940ರಷ್ಟು ಹಿಂದೆಯೇ ಕುಂದಾಪುರ ತಾಲೂಕು ಕೋಟ ಗ್ರಾಮದಿಂದ ಬಂದು, ಬಳ್ಳಾರಿಯಲ್ಲಿ ಅಶೋಕಾ ಹೋಟೆಲ್ ನಡೆಸುತ್ತಿದ್ದಾರೆ)***

# ಅಜಾತ ಶತ್ರುಗಳು



ಪ್ರೇಮಾಭಟ್

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಹುತೇಕ ಜನರು ಕೃಷಿಕರು, ಕೈಗೆ ಹಾರೆ ಪಿಕಾಸಿ ತೆಗೆದುಕೊಂಡು ದುಡಿವ ಜನ. ಮಣ್ಣಿಗೆ ಮೋರೆ ತಿರುಗಿಸದೆ ಬದುಕುವ ಜನ. ಕೈಕೆಸರಾದರೆ ಬಾಯಿ ಮೊಸರೆಂಬ ಜನ ಕಾಯಕವೆ ಕೈಲಾಸವೆಂದರಿತವರು. ಬೆವರು ಕಿತ್ತು ಬರುವವರೆಗೂ ಬವಣೆ ಪಡುವ ಜನರು. 'ಇರುವನ್ನಮೀ ಬಾಳು ದಿಟದವರ ವಿವರಣೆಯ ಹೊರೆ ನಮ್ಮ ಮೇಲಿಲ್ಲ ನಾವದರ ಸಿರಿಯ॥ ಪಿರಿದಾಗಿಸಲು ನಿಂತು ಯುಕ್ತಿಯಿಂ ದುಡಿಯುವುದೆ ಪುರುಷಾರ್ಥ ಸಾಧನೆಯೋ ಮಂಕುತಿಮ್ಮ' ಎಂಬಂತೆ ನಡೆದುಕೊಳ್ಳುವ ಜನ. ಎಲ್ಲಿ ಹೋದರೂ ಎಲ್ಲಿ ಬಂದರೂ ತಲೆ ಎತ್ತಿ ನಿಲ್ಲಬಲ್ಲ ನಿಪುಣರು. ಕೃಷಿ ಬಿಟ್ಟರೆ ಕಾರ್ಖಾನೆ, ಬ್ಯಾಂಕ್ ಉದ್ಯಮಗಳಲ್ಲಿ ದುಡಿಯುವವರು. ಪೌರೋಹಿತ್ಯವನ್ನೆ ಬದುಕಿನ ಬಂಡವಾಳವನ್ನಾಗಿ ಮಾಡಿಕೊಂಡವರು, ಸಮುದ್ರದೊಡನೆ ಸರಸವಾಡುವ ಮೊಗವೀರರು ಯಾವುದೇ ಜಾತಿ ಮತಪಂಥವಿರಲಿ ಪ್ರಾಮಾಣಿಕ ನೆಲೆಯಲ್ಲಿ ದುಡಿವ ಹಂಬಲವನ್ನು ಬಿಟ್ಟುಕೊಡದವರು. ಕಷ್ಟಕ್ಕೆ ತೆರೆದುಕೊಳ್ಳುವ ಇಷ್ಟಕ್ಕೆ ತಲೆ ಬಾಗುವ ಹೃದಯ ಶ್ರೀಮಂತಿಕೆ ಉಳ್ಳವರು. ನೇರ ಮಾತು ನೇರ ನುಡಿಯಲ್ಲಿ ಜನ ಜನಿತರಾದವರು.

ಮನೆಗೆ ಬರುವ ಅತಿಥಿಗಳನ್ನು ಪ್ರೀತಿಯಿಂದ ಬರಮಾಡಿಕೊಳ್ಳುವ, ಆತಿಥ್ಯದಿಂದ ತಣಿಸಿ ಕಳುಹಿಸುವ ಮಾನವಂತ ಜನ. ವ್ಯಕ್ತಿತ್ವದಲ್ಲಿ ಅಪೂರ್ವವಾದ ಸುವರ್ಣರೇಖೆ, ದೈವಭಕ್ತಿ - ದೇಶಭಕ್ತಿ ಉಳ್ಳವರು. ಬುದ್ಧಿವಂತಿಕೆ, ಜಾಣತನ, ವಿವೇಕ ಎಲ್ಲವೂ ಈ ಜನರಲ್ಲಿ ಮುಪ್ಪರಿಗೊಂಡಿವೆ. ಪ್ರಾಮಾಣಿಕ ಬದುಕಿನ ಹಂದರ ತುಸು ಸಡಿಲವಾಗಿದ್ದರೆ ಅದು ಇತ್ತೀಚಿನ ದಿವಸಗಳಲ್ಲಿ. ಭ್ರಷ್ಟರಾಜಕಾರಣದ ಕಸುರು ವ್ಯಾಪಕವಾಗಿ ಹರಡಿರುವುದೆ ಇದಕ್ಕೆ ಕಾರಣ.

ಅಜಾತಶತ್ರುಗಳಾದ ಈ ಜನರಲ್ಲಿ ಈರ್ಷ್ಯೆ ದ್ವೇಷಕ್ಕೆ ಎಳೆಯಿಲ್ಲವಾದರೂ ಅಂತಹದೊಂದು ದ್ವೇಷ ಅಂಕುರಿಸಿದರೆ, ಮುಳ್ಳನ್ನು ಮುಳ್ಳಿನಿಂದಲೆ ಕೀಳುವ ಮರ್ಜಿ. ಅತ್ಯಂತ ಸ್ವಾಭಿಮಾನಿಗಳಾದ ಈ ಜನ ಮಾನಕ್ಕೆ ಧಕ್ಕೆ ಬಂದರೆ ಸುಮ್ಮನೆ ಬಿಡರು. ನಿಸರ್ಗದ ಮಡಿಲಲ್ಲಿ ಹುಟ್ಟಿ ನಿಸರ್ಗದಲ್ಲಿ ಬೆಳೆಯುವ ಈ ಜನರು ನಿಸರ್ಗ ಪ್ರಿಯರು.

ನಂದಳಿಕೆಯ ಮುದ್ದಣನನ್ನು ಕೊಟ್ಟ ಈ ನೆಲದ ಸಿರಿ ಮೆರೆದದ್ದು ಸಾಹಿತಿಗಳಿಂದ ಕವಿಗಳಿಂದ, ಬಿರಿದರಳಿದ್ದು ದಾರ್ಶನಿಕರಿಂದ, ಮಠದ ಮುನಿಗಳಿಂದ, ಧರ್ಮಸ್ಥಳದಂತಹ ಧಾರ್ಮಿಕ ನೆಲೆಯಿಂದ. ಬೌದ್ಧಿಕ ತೇಜಸ್ಸಿನಿಂದ ಮೆರೆದು ಜೀವಂತಿಕೆಯನ್ನು ಉಳಿಸಿಕೊಂಡು ಬೆಳೆದ ಮಂಜೇಶ್ವರ ಗೋವಿಂದ ಪೈ ಅವರು ಸಾಹಿತ್ಯ ಕ್ಷೇತ್ರದಲ್ಲಿ ಗಳಿಸಿದ ಮೊತ್ತ ಎಣಿಸಲಾರದಷ್ಟು. 1911 ರಷ್ಟು ಹಿಂದೆಯೇ ಅಸ್ಪೃಶ್ಯತಾ ನಿವಾರಣೆಗೆಂದು ಕಂಕಣ ತೊಟ್ಟ ಗೋವಿಂದ ಪೈ ಅವರು ಅನೇಕ ಕ್ಷೇತ್ರದಲ್ಲಿ ವಿಪುಲವಾದ ಸಂಶೋಧನೆ ಮಾಡಿದವರು. ಹೊಲೆಯ ಎಂಬ ಪದಕ್ಕೆ ಹೊಲದಲ್ಲಿ ದುಡಿಯುವವನು ಎಂಬ ಅರ್ಥವಂತಿಕೆಯನ್ನು ಕೊಟ್ಟವರು. ವ್ಯಾಕರಣ ವಿಷಯ ಬಂದಾಗ ವೈಯಾಕರಣ ಸೇಡಿಯಾಪು ಕೃಷ್ಣಭಟ್ಟರ ಹೆಸರು ಸಾಹಿತ್ಯ ಕ್ಷೇತ್ರದಲ್ಲಿ ಉಳಿಯುವಂತಹದ್ದು. ಚಿರಹಸಿರಾಗಿ ಉಳಿದ ಹೆಸರು ಈ ಶತಮಾನದ ಶಿವರಾಮ ಕಾರಂತರದ್ದು. ದಕ್ಷಿಣ ಕನ್ನಡ ಜಿಲ್ಲೆಯ ಎಲ್ಲಾ ಪ್ರದೇಶವನ್ನು ಕಾಲ್ನಡಿಗೆಯಲ್ಲಿ ಸುತ್ತಿ, ಅಲ್ಲಿಯ ಗಿರಿ - ಕಂದರ, ನದಿ-ದಡ, ಬೆಟ್ಟ-ಗುಡ್ಡ ಬಯಲುಗಳನ್ನು ಹೊಲಗದ್ದೆ ಹಳ್ಳಿ ಪಟ್ಟಣಗಳೆಲ್ಲದರ ಚಿತ್ರಣ ಕೊಟ್ಟವರು ಕಾರಂತರು. ಅನುಭವದ ದಟ್ಟ ಮೂಸೆಯಲ್ಲಿ ಗಟ್ಟಿ ಸಾಹಿತ್ಯ ಕೊಟ್ಟವರು. ಅವರೇನು ವಿಶ್ವವಿದ್ಯಾಲಯದಲ್ಲಿ ಕಲಿತವರಲ್ಲ. ಜೀವನದ ಅನುಭವವನ್ನು ಅದರ ತಿರುಳನ್ನು ಸವಿದು ನೋಡಿ ಅನುಭವಿಸಿ ಬರೆದರು. ಆಗಿ ಹೋದ ಈ ಧೀಮಂತ ವ್ಯಕ್ತಿಗಳೂ ಶಕ್ತಿಗಳಾಗಿ ಮೆರೆದರು.

ದಕ್ಷಿಣ ಕನ್ನಡದ ನೆಲ - ಜಲ ಜನರಿಗೆ ಸ್ಫೂರ್ತಿಯ ನೆಲೆ. ಆ ನೆಲದಲ್ಲಿ ಹುಟ್ಟಿದವರ ಬದುಕು ಅರ್ಥಪೂರ್ಣ. ಇದ್ದಾರೆ ಇಲ್ಲಿ ಇನ್ನು ಅನೇಕರು, ಈ ನೆಲದ ಮಣ್ಣನ್ನು ಹೊನ್ನಾಗಿಸುವ ಹುನ್ನಾರದಲ್ಲಿ ತೊಡಗಿಸಿಕೊಂಡವರು.

***(ಬೆಂಗಳೂರಿನಲ್ಲಿರುವ ಪ್ರೇಮಾಭಟ್ ಅವರು ಹೆಸರಾಂತ ಕಾದಂಬರಿಕಾರರು)***

# ಬಯಲು ಆಕಾಶ



ನೀನು ಯಾರಾದರೂ ಸರಿ
ಬಾ ಒಳಗೆ
ಬಾಗಿಲು ತೆರೆದೇ ಇದೆ

ಕೂತುಕೋ, ಏನು ತೆಗೆದುಕೊಳ್ಳುತ್ತೀಯ
ಕಾಫೀ ಟೀ ಸಿಗರೇಟು?
ಬೇಡವೆ? ಸರಿ ಬಿಡು

ಈ ಚಳಿಯಲ್ಲಿ ಹೇಗೆ ಬಂದೆ?
ಹೇಳಿ ಕೇಳಿ ಹೇಮಂತ
ಇನ್ನೂ ದೂರ ವಸಂತ!

ಏಕೆ ಹಾಗೆ ನೋಡುತ್ತೀಯೆ
ಗುರುತು ಸಿಗಲಿಲ್ಲವೆ?
ಆ ಫೋಟೊ ನನ್ನ ಸಂಸಾರದ್ದು

ಹೆಂಡತಿ ಒಬ್ಬಳೆ ನಾದಿನಿ ಇನ್ನೊಬ್ಬಳು
ಮಕ್ಕಳು ಇಬ್ಬರೆ!
ಬಾ ಕಂಪನಿ ಕೊಡು ಊಟಕ್ಕೆ

ಇವಳು ಹೋಗಿದ್ದಾಳೆ
ತವರಿಗೆ
ಸದ್ಯಕ್ಕೆ ಮನೆಯಲ್ಲಿ ನಾನೊಬ್ಬನೆ!

ಏಕಯ್ಯ ಗೆಳೆಯ
ಯಾಕಿಷ್ಟು ಕಸಿವಿಸಿ
ಏನಿದ್ದರೂ ಹೇಳು ಪರವಾಗಿಲ್ಲ
ಆಗಬಹುದು ಹೃದಯ ಹಗೂರ!

ಅರೆ!! ಯಾಕೆ ನಿಂತು ಬಿಟ್ಟೆ?!
ಏನು ಚಿಂತೆ?
ಇದ್ದರೆ ಇರಬೇಕು ನನ್ನಂತೆ
ನಿಶ್ಚಿಂತೆ!

ಪ್ರೀತಿ ಸ್ನೇಹ ಸಂಬಂಧವೇ
ನನ್ನ ಸೊತ್ತು!
ಕರೆಯುತ್ತಿರುವೆ ಈ ಹೊತ್ತು
ಎದೆಯಲ್ಲಿ ಏನೋ ಹೊತ್ತು!

ಗೊತ್ತು ನಿನ್ನ ತೊಳಲಾಟ
ನಡಿ ನಾನು ರೆಡಿ
ಸ್ವಲ್ಪ ತಡಿ
ಬರುವೆ ಮನೆಗೆ ಬೀಗ ಹಾಕಿ

ಮರದಿಂದ ಪುರ್ರನೆ
ಹಾರಿತು ಗೂಬೆ
ತೆರೆದ ಕಿಟಕಿಯಲ್ಲಿ
ತೂರಿ ಹಾರಿ ಹೋಗುವುದ ಕಂಡೆ

ಹಿಂದೆ ಬಯಲು
ಮುಂದೆ ಆಕಾಶ
ಮುಂದೆ ಅವನು ಹಿಂದೆ ನಾನು

■ ಎಂ.ಎನ್.ವ್ಯಾಸರಾವ್

# ದಕ್ಷಿಣ ಕನ್ನಡ : ಇತಿಹಾಸ ಮತ್ತು ಆಧುನಿಕತೆ



ಯಕ್ಷಗಾನ - ಯುದ್ಧಕ್ಕೆ ಹೊರಡಲು ಅಪ್ಪಣೆ ಕೇಳುತ್ತಿರುವ ಅಭಿಮನ್ಯು




ಚಿತ್ರ - ಲೇಖನ :
**ಡಾ. ಪುರುಷೋತ್ತಮ ಬಿಳಿಮಲೆ**
ಎ-35, ಮಾಸೂದಪೂರ್,
ವಸಂತಕುಂಜ,
ನ್ಯೂಡೆಲ್ಲಿ - 110 070.


ಕರ್ನಾಟಕದ ಎಲ್ಲ ಜಿಲ್ಲೆಗಳಿಗಿರುವಂತೆ ದಕ್ಷಿಣ ಕನ್ನಡ ಜಿಲ್ಲೆಗೂ ವರ್ಣರಂಜಿತ ಇತಿಹಾಸವಿದೆ, ಅದರ ವರ್ತಮಾನವೂ ಸಾಕಷ್ಟು ವರ್ಣರಂಜಿತವಾಗಿದೆ. ತನ್ನ ತಾಯಿಯ ತಲೆಯನ್ನೇ ತುಂಡರಿಸಿದ ಪರಶುರಾಮನು ಸೃಷ್ಟಿಸಿದ ನೆಲವದು. ಪುರಾಣಗಳ ಪ್ರಕಾರ ನಾಗಕನ್ಯೆಯರು ಓಡಾಡುವ ಸ್ಥಳವದು. ಟಿಪ್ಪೂವಿನ ಪತನದ ಆನಂತರ ಬ್ರಿಟಿಷರು ಇಲ್ಲಿ ಮೊದಲು ನೆಲೆಯೂರಿದರು. ಬ್ರಿಟಿಷರಿಂದಾಗಿ ದಕ್ಷಿಣ ಕನ್ನಡ ಜಿಲ್ಲೆ ಮದರಾಸು ಪ್ರಾಂತ್ಯದೊಂದಿಗೆ ಸೇರಿಕೊಂಡು, ಹಳೆ ಮೈಸೂರು ಮತ್ತು ಉತ್ತರ ಕರ್ನಾಟಕದಿಂದ ಬೇರ್ಪಟ್ಟಿತು. ಕ್ರೈಸ್ತ ಮಿಶನರಿಗಳು ದಕ್ಷಿಣ ಕನ್ನಡ ಜಿಲ್ಲೆಯನ್ನು ಬಳ್ಳಾರಿಯೊಂದಿಗೆ ಜೋಡಿಸಿ, ಮುದ್ರಣ, ಕೈಗಾರಿಕೆ, ಮತಾಂತರ ಮತ್ತಿತರ ಹೊಸ ಬಗೆಯ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಈ ಜಿಲ್ಲೆಯ ಇತಿಹಾಸವನ್ನು ಬದಲಾಯಿಸಿಬಿಟ್ಟರು. ಜಿಲ್ಲೆಯಾದ್ಯಂತ ಮಿಶನರಿಗಳು ಶಾಲೆಗಳನ್ನು ಆರಂಭಿಸಿದಾಗ ಅದುವರೆಗೆ ತೆಪ್ಪಗಿದ್ದ ಮಠಗಳೆಲ್ಲ ಕಣ್ತೆರೆದು ನೋಡುವಂತಾಯಿತು. ಕರಾವಳಿಯಲ್ಲಿ ನಡೆದ ಈ ಬಗೆಯ ಪಲ್ಲಟಗಳನ್ನು ಗುಲವಾಡಿ ವೆಂಕಟರಾಯರ, ಬೋಳಾರ ಬಾಬುರಾಯರ ಕಾದಂಬರಿಗಳು ಅತ್ಯಂತ ವಿಶಿಷ್ಟವಾಗಿ ಮತ್ತು ಸೂಕ್ಷ್ಮವಾಗಿ ದಾಖಲಿಸಿವೆ. ಈ ಶತಮಾನದ 3, 4, 5ನೇ ದಶಕದ ಪಲ್ಲಟಗಳನ್ನು ಡಾ. ಶಿವರಾಮ ಕಾರಂತರು ತಮ್ಮ ಕಾದಂಬರಿಗಳಲ್ಲಿ ಅದ್ಭುತವಾಗಿ ದಾಖಲಿಸಿದ್ದಾರೆ.



ಜುಮಾದಿ ದೈವದ ಮುಖವಾಡ

**ಈ**ಗಂತೂ ದಕ್ಷಿಣ ಕನ್ನಡ ಜಿಲ್ಲೆ ದೇಶದ ಮುಂದುವರೆದ ಜಿಲ್ಲೆಗಳಲ್ಲಿ ಒಂದೆಂಬ ಖ್ಯಾತಿ ಪಡೆದಿದೆ. ಜಿಲ್ಲೆಯ ಮೂಲೆ ಮೂಲೆಗಳಿಗೆ ಬಸ್ಸು ಓಡಾಡುತ್ತವೆ. ಜಿಲ್ಲೆಯ ಗಲ್ಲಿಗಲ್ಲಿಗಳಲ್ಲಿ ಟೆಲಿಫೋನ್ ಬೂತುಗಳಿವೆ, ಬಾರ್ ಅಂಡ್ ರೆಸ್ಟೋರೆಂಟ್ ಗಳಿವೆ, ಶಾಲೆಗಳಿವೆ. ಕರಾವಳಿಯ ಜನ ಊರಲ್ಲಿ ಕೆಲಸ ಇಲ್ಲದಿದ್ದರೆ ಸೀದಾ ಮುಂಬೈಗೆ ಧಾವಿಸುತ್ತಾರೆ, ಇಲ್ಲವೇ ದೂರದ ಮಧ್ಯ ಪ್ರಾಚ್ಯ ದೇಶಗಳಿಗೆ ಸಾಗುತ್ತಾರೆ. ಕಳೆದ ವರ್ಷ ನಾನೊಮ್ಮೆ ಜೋರ್ಡಾನ್ ನಗರವನ್ನು ನೋಡಲು ಅಲ್ಲಿಯ ಪ್ರವಾಸೋದ್ಯಮ ಇಲಾಖೆಯ ಬಸ್‌ನಲ್ಲಿ ಪ್ರಯಾಣ ಮಾಡುತ್ತಿದ್ದೆ. ಆ ಬಸ್‌ನಲ್ಲಿ ಇದ್ದ 14 ಜನರಲ್ಲಿ ಇಬ್ಬರು ಮೂಡಬಿದಿರೆಯವರಾಗಿದ್ದರು. ನಾನೂ ಸೇರಿದರೆ ಮೂರು! ಲಿಬಿಯಾದಲ್ಲಿ ಕೆಲಸ ಮಾಡುವ ಅವರು ಜೋರ್ಡಾನಲ್ಲಿ ಒಂದು ದಿನ ಉಳಕೊಂಡಿದ್ದರು. ನಾವು ಜೋರ್ಡಾನ್ ನಗರದ ಬೀದಿಗಳಲ್ಲಿ ತುಳು ಮಾತಾಡುವ ಸಂತಸವನ್ನು ಅನುಭವಿಸಿದ್ದವು. ಜಗತ್ತಿನ ಬೇರೆ ಬೇರೆ ಕಡೆ ದುಡಿಯುವ ತುಳುವರ ಸಂಪತ್ತಿನ ಸ್ವಲ್ಪಾಂಶವಾದರೂ ದ.ಕ. ಜಿಲ್ಲೆಗೆ ಬರುವುದರಿಂದ ಜಿಲ್ಲೆಯ ಸಂಪತ್ತು ಹೆಚ್ಚಾಗಿದೆ. ಈಚೆಗೆ 'ನವಮಂಗಳೂರು' ಬಂದರು ಬೆಳೆದಿರುವುದರಿಂದ ಜಿಲ್ಲೆಯ ಸಂಪರ್ಕವೂ ಜಾಗತಿಕವಾಗಿದೆ.

ಇಂತಹ ಆಧುನಿಕ ಜಿಲ್ಲೆಯ ಜನ ಅಲ್ಲಿಯ ಪರಂಪರೆಯನ್ನು ಹೇಗೆ ಕಾಯ್ದುಕೊಂಡು ಬಂದಿದ್ದಾರೆ ಮತ್ತು ಯಾಕೆ ಕಾಯ್ದುಕೊಂಡು ಬಂದಿದ್ದಾರೆ ಎಂಬುದು ತುಂಬ ಕುತೂಹಲಕರವಾದ ಪ್ರಶ್ನೆಯಾಗಿದೆ. ಸಮಾಜಶಾಸ್ತ್ರಜ್ಞರು, ಮಾನವ ಶಾಸ್ತ್ರಜ್ಞರು, ಜಾನಪದ ವಿದ್ವಾಂಸರೆಲ್ಲ ಈ ನಿಟ್ಟಿನಲ್ಲಿ ಸಾಕಷ್ಟು ತಲೆ ಕೆಡಿಸಿಕೊಂಡಿದ್ದರೂ, ಯಾರಿಂದಲೂ ಸಮರ್ಪಕವಾದ ಉತ್ತರ ಬಂದಿಲ್ಲ. ನನ್ನಲ್ಲಿಯೂ ಉತ್ತರಗಳಿಲ್ಲ. ಬದಲು ಹೆಚ್ಚು ಪ್ರಶ್ನೆಗಳಿವೆ.

ಕರಾವಳಿಯ ಸಾಂಪ್ರದಾಯಿಕತೆಯ ಎರಡು ಕಣ್ಣುಗಳೆಂದರೆ ಭೂತಾರಾಧನೆ ಮತ್ತು ಯಕ್ಷಗಾನ. ಮಂಗಳೂರು ವಿಶ್ವವಿದ್ಯಾಲಯದಲ್ಲಿರುವ ಗೆಳೆಯ ಡಾ.ಕೆ. ಚಿನ್ನಪ್ಪಗೌಡರ ಪ್ರಕಾರ ಈ ಸಣ್ಣ ಜಿಲ್ಲೆಯಲ್ಲಿ ಈಗ ಅಸ್ತಿತ್ವದಲ್ಲಿರುವ ಭೂತಗಳ ಸಂಖ್ಯೆ 360ಕ್ಕೂ ಹೆಚ್ಚು. ಇದರಲ್ಲಿ ಮತ್ತೆ ಪ್ರತಿಯೊಂದು ಭೂತಕ್ಕೂ ಪ್ರಾದೇಶಿಕ ರೂಪಗಳಿವೆ. ಪ್ರತಿಯೊಂದು ಭೂತಕ್ಕೂ ತನ್ನದೇ ಆದ ಚರಿತ್ರೆಯಿದೆ. ಈ ಚರಿತ್ರೆಯು ಭೂತಗಳ ಆರಾಧನೆಯ ಸಂದರ್ಭದಲ್ಲಿ ಹೇಳುವ ಪಾಡ್ದನಗಳಲ್ಲಿ ಹುದುಗಿದೆ. ಡಾ. ವಿವೇಕ ರೈ, ಅಮೃತ ಸೋಮೇಶ್ವರ, ಕನರಾಡಿ ವಾದಿರಾಜಭಟ್, ವಾಮನ ನಂದಾವರ ಮೊದಲಾದ ವಿದ್ವಾಂಸರು ಪಾಡ್ದನಗಳ ಲೋಕಕ್ಕೆ ಪ್ರವೇಶಿಸಿ, ಅವುಗಳ ಮಹತ್ವವನ್ನು ಈಗಾಗಲೇ ಸಾದರ ಪಡಿಸಿದ್ದಾರೆ. ಭೂತಾರಾಧನೆಯ ಹಾಗೆ ಯಕ್ಷಗಾನವೂ ಕೂಡಾ ಅಸಾಮಾನ್ಯ ಜನಪ್ರಿಯತೆಯನ್ನು ಪಡೆದಿದೆ. ಈಚಿನ ಅಂಕಿ ಅಂಶಗಳ ಪ್ರಕಾರ ಕರಾವಳಿ ಕರ್ನಾಟಕದಲ್ಲಿ ಸುಮಾರು 32 ಮೇಳಗಳು ಆರು ತಿಂಗಳುಗಳ ಕಾಲ ನಿರಂತರ ಪ್ರದರ್ಶನ ನೀಡುತ್ತವೆ. ಅಂದರೆ ಕರಾವಳಿಯಲ್ಲಿ ವೃತ್ತಿ ಮೇಳಗಳು ಪ್ರದರ್ಶಿಸುವ ಯಕ್ಷಗಾನಗಳ ಸಂಖ್ಯೆ 5760. ಇವಲ್ಲದೆ ಜಿಲ್ಲೆಯಲ್ಲಿ 750ಕ್ಕೂ ಹೆಚ್ಚು ಹವ್ಯಾಸಿ ಯಕ್ಷಗಾನ ತಂಡಗಳಿವೆ. ಶಾಲಾ ವಾರ್ಷಿಕೋತ್ಸವ, ಊರಿನ ಜಾತ್ರೆ, ಲಯನ್ಸ್ ಕ್ಲಬ್ ಮೀಟಿಂಗ್, ರೋಟರಿ ಮೀಟಿಂಗ್ ಮೊದಲಾದ ಸಂದರ್ಭಗಳಲ್ಲಿ ಈ ಹವ್ಯಾಸಿ ತಂಡಗಳು ಪ್ರದರ್ಶನ ನೀಡುತ್ತವೆ. ಒಂದು ತಂಡ ನೀಡುವ ಪ್ರದರ್ಶನಗಳನ್ನು ವರುಷಕ್ಕೆ ಸರಾಸರಿ ಐದು ಎಂದು ಇಟ್ಟುಕೊಂಡರೂ ಹವ್ಯಾಸಿಗಳು ನೀಡುವ ಯಕ್ಷಗಾನ ಪ್ರದರ್ಶನಗಳ ಸಂಖ್ಯೆ 3750 ಆಗುತ್ತದೆ. ಇವಲ್ಲದೆ ಮಳೆಗಾಲದಲ್ಲಿ ಜಿಲ್ಲೆಯ ಮೂಲೆ ಮೂಲೆಗಳಲ್ಲಿ ಸಭಾಂಗಣಗಳಲ್ಲಿ 'ಮಳೆಗಾಲದ ಯಕ್ಷಗಾನ' ನಡೆಯುತ್ತವೆ. ಯಕ್ಷಗಾನದ ಒಂದು ಪ್ರಭೇದವಾದ ತಾಳಮದ್ದಳೆ ಕೂಡಾ ಅಲ್ಲಲ್ಲಿ ಜರುಗುತ್ತದೆ. ಇವೆಲ್ಲವನ್ನೂ ಸೇರಿಸಿದರೆ ವರುಷವೊಂದಕ್ಕೆ ಸು. 10,000 ಪ್ರದರ್ಶನಗಳು ಕರಾವಳಿಯಲ್ಲಿ ಕಂಡು ಬರುತ್ತವೆ. ರಾಯಚೂರಿನಲ್ಲಿ ಗೆಳೆಯರೊಬ್ಬರು ಒಮ್ಮೆ ಮಾತಾಡುತ್ತಾ ''ಸರಕಾರದ ದುಡ್ಡೆಲ್ಲ ಯಕ್ಷಗಾನಕ್ಕೇ ಹೋಗುತ್ತಿದೆ. ಹಾಗಾಗಿ ಅದು ಬೆಳೆದಿದೆ ಎಂದಿದ್ದರು. ಯಾವ ಸರಕಾರವೂ ಕೂಡಾ ಹಣ ಕೊಟ್ಟು ಇಂಥ ಕಲೆಯನ್ನು ಈ ಮಟ್ಟದಲ್ಲಿ ಬೆಳೆಸಲಾರದು. ಯಕ್ಷಗಾನವನ್ನು ಬೆಳೆಸಿದ್ದು ಸರಕಾರವಲ್ಲ, ಜನರು. ಜನರು ಟಿಕೆಟ್ ಕೊಂಡು ಯಕ್ಷಗಾನ ನೋಡುತ್ತಾರೆ. ಮಂಗಳೂರಿನ ನೆಹರೂ ಮೈದಾನದಲ್ಲಿ ನಡೆಯುವ ಕೆಲವು ಯಕ್ಷಗಾನ ಪ್ರದರ್ಶನಗಳ ಟಿಕೆಟ್‌ಗಳು ಕಾಳಸಂತೆಯಲ್ಲಿ ಮಾರಾಟವಾಗುವುದನ್ನು ನಾನೇ ನೋಡಿದ್ದೇನೆ. ಒಂದು ಅಂದಾಜಿನ ಪ್ರಕಾರ ವರುಷವೊಂದಕ್ಕೆ ಸುಮಾರು ಆರುಕೋಟಿ ರೂಪಾಯಿಗಳು ಯಕ್ಷಗಾನದ ಹೆಸರಿನಲ್ಲಿ ಚಲಾವಣೆ ಆಗುತ್ತದೆ. ಸುಮಾರು 5 ಲಕ್ಷ ಜನ ಯಕ್ಷಗಾನ ನೋಡುತ್ತಾರೆ.

ಯಕ್ಷಗಾನ ಕಲಾವಿದರ ಸಂಖ್ಯೆಯೂ ಅಗಾಧವಾದುದು. ಸಾಧಾರಣವಾಗಿ ವೃತ್ತಿ ಮೇಳವೊಂದರಲ್ಲಿ 20 ಜನ ಹಿರಿಯ - ಕಿರಿಯ ಕಲಾವಿದರಿರುತ್ತಾರೆ. ಅಂದರೆ ವೃತ್ತಿ ಕಲಾವಿದರ ಸಂಖ್ಯೆ ಆರುನೂರಕ್ಕೂ ಹೆಚ್ಚು. ಹವ್ಯಾಸಿ ತಂಡಗಳಲ್ಲಿಯೂ 20-25 ಜನ ಕಲಾವಿದರಿರುತ್ತಾರೆ. ಕರಾವಳಿಯಲ್ಲಿ ಸುಮ್ಮನೆ ಒಂದು ಕಲ್ಲೆಸೆದರೆ, ಅದು ಯಕ್ಷಗಾನ ಕಲಾವಿದರೊಬ್ಬರ ತಲೆಗೇ ಬೀಳುತ್ತದೆ. ಹೀಗೆ ಯಕ್ಷಗಾನ ಅದ್ಭುತವಾಗಿ ಬೆಳೆದಿದೆ. 'ಇಷ್ಟೊಂದು ಅಗಾಧ ಪ್ರಮಾಣದಲ್ಲಿ ಕಲಾವಿದರಿರುವ ಪ್ರೇಕ್ಷಕರ ಬೆಂಬಲ ಇರುವ ಇನ್ನೊಂದು ಕಲೆ ಜಗತ್ತಿನಲ್ಲಿ ಬೇರೆ ಇಲ್ಲ' ಎಂದು ಅಮೆರಿಕಾದ ಮಾನವ ಶಾಸ್ತ್ರಜ್ಞರಾದ ಪ್ರೊ. ಪೀಟರ್ ಕ್ಲಾಸ್ ಒಮ್ಮೆ ಉದ್ಗರಿಸಿದ್ದರು.



ಅಬ್ಬರದ ಕುಣಿತ - ಯಕ್ಷಗಾನ

**ಜನಪ್ರಿಯತೆಯ ಗುಟ್ಟುಗಳು**

ನಾನು ಈಗಾಗಲೇ ಹೇಳಿರುವಂತೆ ಭೂತಾರಾಧನೆ, ಯಕ್ಷ

### ಕುದುರೆ ಜೂಜಿಗೆ ಕಡಿಮೆಯಿಲ್ಲದ ಕೋಳಿ, ಕೋಣಗಳ ಬಾಜಿ !

ಈ ಭೂತ - ಯಕ್ಷಗಾನ ಬಿಟ್ಟರೆ ಕರಾವಳಿಯಲ್ಲಿ ಜನಜನಿತವಾಗಿರುವ ಇನ್ನೆರಡು ಪ್ರಕಾರಗಳೆಂದರೆ 'ಕಂಬುಲ' ಮತ್ತು ಕೋಳಿ ಕಟ್ಟು. ಕಂಬುಲವು ಓಟದ ಕೋಣಗಳ ಸ್ಪರ್ಧೆ. ಮಂಗಳೂರು, ಪಡುಬಿದ್ರೆ, ಮೂಲ್ಕಿ, ಬೆಳ್ತಂಗಡಿ, ಮೊದಲಾದ ಕಡೆಗಳಲ್ಲಿ ಈ ಸ್ಪರ್ಧೆಯು ತುಂಬ ಆಕರ್ಷಕವಾಗಿ ನಡೆಯುತ್ತದೆ. ಕೋಳಿಗಳನ್ನು ಪರಸ್ಪರ ಕಾದಾಡಿಸುವ 'ಕೋಳಿಕಟ್ಟ'ವೂ ಅಪಾರ ಸಂಖ್ಯೆಯಲ್ಲಿ ಜನರನ್ನು ಆಕರ್ಷಿಸುತ್ತಿದೆ. ಒಂದು ಮೂಲದ ಪ್ರಕಾರ ಇಲ್ಲೆಲ್ಲ ಲಕ್ಷಾಂತರ 'ರೂಪಾಯಿಗಳ ಜೂಜು ಕೂಡಾ ನಡೆಯುತ್ತದೆ. ಇಲ್ಲಿ ಕೋಳಿ ಮತ್ತು ಕೋಣಗಳ ಮೇಲೆ ಕಟ್ಟುವ ಬಾಜಿಯು ಕುದುರೆಯ ಬಾಲಕ್ಕೆ ಕಟ್ಟುವ ಹಣಕ್ಕೆ ಕಡಿಮೆಯಿಲ್ಲ.

ಗಾನ, ಕಂಬುಲ, ಕೋಳಿಕಟ್ಟಗಳ ಅಪಾರ ಜನಪ್ರಿಯತೆಗೆ ಏನು ಕಾರಣಗಳಿರಬೇಕೆಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ, ಅಥವಾ ಅದಕ್ಕೊಂದು ಕಾರಣ ಇದ್ದೀತೆಂದು ಕೂಡಾ ಖಚಿತವಾಗಿ ಹೇಳಲಾಗದು. ಈ ಅರಿವಿನಲ್ಲಿಯೇ ಕೆಲವು ಮಾತುಗಳನ್ನು ಇಲ್ಲಿ ಪ್ರಾಸ್ತಾವಿಕವಾಗಿ ಹೇಳಲಾಗಿದೆ.

ಭೂತಾರಾಧನೆಯಲ್ಲಿ ಭೂತ ಆವೇಶಿತವಾಗುವುದು ಪಂಬದ, ಪರವ, ನಲಿಕೆ, ಅಜಲ ಮೊದಲಾದ ಸಮುದಾಯಗಳ ಜನರ ಮೇಲೆ. ಜಾತಿಯ ಶ್ರೇಣೀಕರಣದ ದೃಷ್ಟಿಯಿಂದ ನೋಡಿದರೆ ಈ ಸಮುದಾಯಗಳು ಶ್ರೇಣೀಕರಣದ ಕೆಳತುದಿಯಲ್ಲಿ ಇದ್ದು 'ಅಸ್ಪೃಶ್ಯ' ರೆಂದು ಗುರುತಿಸಿಕೊಂಡಿದ್ದಾರೆ. ಈ ಅಸ್ಪೃಶ್ಯರು ಅಥವಾ ದಲಿತರು ಬಹುಮಟ್ಟಿಗೆ ಕರಾವಳಿಯ ಮೂಲ ನಿವಾಸಿಗಳು. ಕನಿಷ್ಠ ಪಕ್ಷ ಈಗ ಕರಾವಳಿಯ ಆರ್ಥಿಕ, ಸಾಮಾಜಿಕ ಸ್ಥಿತಿಗಳ ಮೇಲೆ ಹಿಡಿತ ಸಾಧಿಸಿರುವ ಬಂಟರು, ಬಿಲ್ಲವರು, ಗೌಡರು, ಬ್ರಾಹ್ಮಣರು, ಕೊಂಕಣಿಗಳು ಕರಾವಳಿಗೆ ವಲಸೆ ಬರುವ ಪೂರ್ವದಲ್ಲಿಯೇ ಈ ದಲಿತರು ಕರಾವಳಿಯಲ್ಲಿ ವಾಸವಾಗಿದ್ದರು. ಕರಾವಳಿಯ ಪ್ರಕೃತಿಯ ಎರಡು ಫಲಕಗಳಾದ ಸಸ್ಯವರ್ಗ ಮತ್ತು ಪ್ರಾಣಿವರ್ಗಗಳೊಂದಿಗೆ ಮತ್ತು ನಿಸರ್ಗಾತೀತವಾದ ಶಕ್ತಿಗಳೊಂದಿಗೆ ಈ ದಲಿತರು ತಮ್ಮದೇ ಆದ ರೀತಿಯಲ್ಲಿ ಒಂದು ಬಗೆಯ ಸಂಪರ್ಕ ಏರ್ಪಡಿಸಿಕೊಂಡಿದ್ದರು. ಕೊರಗರಲ್ಲಿ, ಮ್ಯಾಲರಲ್ಲಿ, ಅಜಲರಲ್ಲಿ ಲಭ್ಯ ಇರುವ ಅನೇಕ ಐತಿಹ್ಯಗಳು ಈ ಸಂಬಂಧದ ಬಗೆಗೆ ಅಪೂರ್ವ ಬೆಳಕು ಚೆಲ್ಲುತ್ತವೆ.



ಬಣ್ಣ ಹಚ್ಚಿಕೊಳ್ಳುತ್ತಿರುವ ಕಲಾವಿದ ಪುತ್ತೂರು ಶ್ರೀಧರ ಭಂಡಾರಿ

ಖಾಸಗಿ ಆಸ್ತಿಯ ಪರಿಕಲ್ಪನೆಯಿಲ್ಲದೆ, ಸಾಮುದಾಯಿಕ ಜೀವನ ನಡೆಸುತ್ತಿರುವ ಈ ಮುಗ್ಧ ಸಮುದಾಯಗಳ ಮೇಲೆ ಕರಾವಳಿಯ ಇತಿಹಾಸದುದ್ದಕ್ಕೂ ಬಗೆ ಬಗೆಯ ಆಕ್ರಮಣಗಳು ನಡೆದಿವೆ. ಕರಾವಳಿಗೆ ವಲಸೆ ಬಂದ ವಿವಿಧ ಜಾತಿಗಳ ಜನರು ಕರಾವಳಿಯ ಭೂಮಿಯನ್ನು ವಶಪಡಿಸಿಕೊಳ್ಳುತ್ತಾ ಜಮೀನ್ದಾರರಾದಾಗ, ಈ ಮುಗ್ಧ ಜನರು ಜಮೀನ್ದಾರರ ಕೈಕೆಳಗೆ ದುಡಿಯುವ ಕೂಲಿಗಳಾಗಿ ಮಾರ್ಪಾಡು ಹೊಂದಿದ್ದರು. ಸ್ವತಂತ್ರವಾಗಿ ಬದುಕುತ್ತಿದ್ದ ಜನ ವರ್ಗ ಹೀಗೆ ಸ್ವಾತಂತ್ರ್ಯ ಕಳಕೊಂಡಾಗ, ಕಳಕೊಂಡದ್ದನ್ನು ಪಡೆದುಕೊಳ್ಳಲು 'ಭೂತಾರಾಧನೆ' ಹುಟ್ಟಿಕೊಂಡಿರಬೇಕು. ಭೂತಾರಾಧನೆಯ ದಿವಸ ಮಾತ್ರ ಈ ದಲಿತರು ತಾವು ಕಳಕೊಂಡ ಎಲ್ಲ ಅಧಿಕಾರಗಳನ್ನು ರಿಚುವಲ್‌ನಲ್ಲಿ ತಾತ್ಕಾಲಿಕವಾಗಿ ಹಿಂದೆ ಪಡೆದುಕೊಳ್ಳುತ್ತಾರೆ. ಜಮೀನ್ದಾರರ ಮೇಲೆ ಭ್ರಾಮಕ ಹಿಡಿತ ಸಾಧಿಸುತ್ತಾರೆ. ಇದು ತಾತ್ಕಾಲಿಕವಾದ್ದರಿಂದ ಭೂಮಾಲೀಕರೂ ಇದಕ್ಕೆ ತಮ್ಮ ಅನುಮೋದನೆ ನೀಡುತ್ತಾರೆ. ಕರಾವಳಿಗೆ ಜನರು ವಲಸೆ ಬಂದದ್ದು 12 ರಿಂದ 16ನೇ ಶತಮಾನದಲ್ಲಿ ಎಂಬುದು ಹೌದಾದರೆ, ಭೂತಾರಾಧನೆಯ ಚರಿತ್ರೆ ಅದಕ್ಕೂ ಹಿಂದಕ್ಕೆ ಹೋಗಲಾರದು. ಜನರ ವಲಸೆ ಸೃಷ್ಟಿಸಿದ ಆರಾಧನೆಯದು. ಭೂತಾರಾಧನೆ ಎಂದರೆ ಸ್ವತಂತ್ರವಾಗಿದ್ದ ಸಮುದಾಯಗಳು ತಮ್ಮ ಸ್ವಾತಂತ್ರ್ಯವನ್ನು ಕಳಕೊಂಡ ಕತೆ, ವಲಸೆಗಾರರು ಮೂಲ ನಿವಾಸಿಗಳ ಮೇಲೆ ನಡೆಸಿದ ಆಕ್ರಮಣಗಳ ಕತೆ.



ಭೂತಾರಾಧನೆಯ ಕಲಾವಿದ

ಯಕ್ಷಗಾನವು ಉಡುಪಿಯ ಮಠಗಳ ಸಹಾಯದಿಂದ ಈಗಿರುವ ರೂಪಕ್ಕೆ ಬಂದಿದೆ. ವಿಜಯನಗರ ಕಾಲದಲ್ಲಿ ತುಳುನಾಡಿನಲ್ಲಿ ಪ್ರಸಾರಕ್ಕೆ ಬಂದ ವೈಷ್ಣವ ಧರ್ಮವು ಯಕ್ಷಗಾನವನ್ನು ಪರಿಷ್ಕರಿಸಿತು. ಧಾರ್ಮಿಕ ಮನೋಭಾವದ ಜನಕ್ಕೆ ರಾಮ, ಕೃಷ್ಣರ ಕತೆ ಬಹುಬೇಗ ಹಿಡಿಸಿತು. ಯಕ್ಷಗಾನದ ಜನಪ್ರಿಯತೆಗೆ ಒಂದು ಕಾರಣ ಅದರ ಧಾರ್ಮಿಕ ಗುಣವೂ ಹೌದು. ಹಾಗಂತ ಧಾರ್ಮಿಕತೆಯೇ ಅದರ ಜೀವಾಳವಲ್ಲ. ಈಗಲೂ ಜನರು ಅದರ ಧಾರ್ಮಿಕತೆಗಾಗಿ ಅದನ್ನು ನೋಡುತ್ತಾರೆ ಎಂದೂ ಹೇಳುವಂತಿಲ್ಲ. ಉದಾಹರಣೆಗೆ ನಾನು ನಾಸ್ತಿಕ, ದೇವರನ್ನು ನಂಬಬೇಕು ಎಂದು ಇಂದಿಗೂ ನನಗೆ ಅನ್ನಿಸುತ್ತಿಲ್ಲ. ನಾನು ಧಾರ್ಮಿಕ ವ್ಯಕ್ತಿಯೂ ಅಲ್ಲ. ಆದರೂ ನಾನು ಈಗಲೂ ಯಕ್ಷಗಾನ ನೋಡುತ್ತೇನೆ. ಅವಕಾಶ ಸಿಕ್ಕಾಗ ವೇಷ ಕಟ್ಟಿ ಕುಣಿಯುತ್ತೇನೆ. ಜನರು ಬಹುಶಃ ಹೀಗೆಯೇ ಯಕ್ಷಗಾನ ನೋಡುತ್ತಿರಬೇಕು. ಪುತ್ತೂರು ಶ್ರೀಧರ ಭಂಡಾರಿ ಅವರ 'ಅಭಿಮನ್ಯು' ನೋಡಲು ಜನರು ಕಾರು ಮಾಡಿಕೊಂಡು ಬರುತ್ತಾರೆ. ಸೂರಿಕುಮೇರು ಗೋವಿಂದಭಟ್ಟರ ಕೌರವ ನೋಡಲು ಜನರು ಮುಗಿ ಬೀಳುತ್ತಾರೆ. ಶ್ರೇಣಿ ಗೋಪಾಲಕೃಷ್ಣ ಭಟ್ಟರ ರಾವಣನ ವೇಷ ನೋಡಲು ಜನರು ಕ್ಯೂ ನಿಲ್ಲುತ್ತಾರೆ. ಇಲ್ಲೆಲ್ಲ ಧಾರ್ಮಿಕತೆಗಿಂತ ಪ್ರತಿಧಾರ್ಮಿಕತೆಯೇ ಹೆಚ್ಚಾಗಿದೆ. ಕುಣಿತ, ಹಾಡು, ವೇಷಭೂಷಣ ಮತ್ತು ವಾದ - ಪ್ರತಿವಾದಗಳನ್ನು ಆಲಿಸಲು ಜನರು ಸೇರುತ್ತಾರೆ. ಪ್ರಖ್ಯಾತವಾದ 'ಗದಾಯುದ್ಧ' ಪ್ರಸಂಗವನ್ನು ನಾನು 10 ಬಾರಿಯಾದರೂ ನೋಡಿರಬೇಕು. ನನ್ನ ಮಿತ್ರ ಕೇಶವ ಶರ್ಮರು ಅಭಿನಯಿಸುತ್ತಿದ್ದ 'ಭಸ್ಮಾಸುರ'ನನ್ನು ನಾನು ನಾಲ್ಕಾರು ಬಾರಿ ನೋಡಿದ್ದೇನೆ. ಈ ಪ್ರದರ್ಶನಗಳು ಪ್ರತಿ ಬಾರಿಯೂ ಹೊಸದಾಗಿರುತ್ತಿದ್ದುದೇ ಇದಕ್ಕೆ ಕಾರಣ. ಎಲ್ಲಿಯವರೆಗೆ ಕಲಾವಿದರಿಗೆ ಹೊಸದನ್ನು ಪ್ರದರ್ಶಿಸಲು ಸಾಧ್ಯವಿರುತ್ತದೋ ಅಲ್ಲಿಯವರೆಗೆ ಜನರು ಅದನ್ನು ನೋಡುತ್ತಾರೆ. ಕರಾವಳಿಯ ಏರಿಳಿತಗಳೆಲ್ಲ ಯಕ್ಷಗಾನದಲ್ಲೂ ಇರುವುದರಿಂದ ಜನರಿಗೆ ಯಕ್ಷಗಾನವೆಂದರೆ ಅವರ ಬದುಕಿನ ಭಾಗವೆ ಆಗಿದೆ.

ಇತರ ಕಲೆಗಳೆಲ್ಲ ಕರಾವಳಿಯ ಮಾತೃವಂಶೀಯ ಕುಟುಂಬ ವ್ಯವಸ್ಥೆಯೊಡನೆ ಸಂಬಂಧ ಇರಿಸಿಕೊಂಡಿವೆ ಎಂದು ನಾನು ಅಲ್ಲಲ್ಲಿ ಹೇಳಿದ್ದೇನೆ. ಮಾತೃವಂಶೀಯ ಕುಟುಂಬ ವ್ಯವಸ್ಥೆಯಲ್ಲಿ ಗಂಡಸಿಗೆ ಆಸ್ತಿ ಅಧಿಕಾರವಿಲ್ಲ. ಹೀಗಾಗಿ ಕುಟುಂಬದೊಳಗೆ ಅವನಿಗೆ ಅಧಿಕಾರ ಕಡಿಮೆ. ಹೀಗೆ ಮನೆಯಲ್ಲಿ ಕಳೆದುಕೊಂಡ ಅಧಿಕಾರವನ್ನು ಮನೆಯ ಹೊರಗಡೆಗೆ ತುಂಬಿಕೊಳ್ಳಲು ಸಾಧ್ಯ. ಕಂಬಳ - ಕೋಳಿ ಕಟ್ಟಗಳಲ್ಲಿ 'ಪುರುಷ'ರದ್ದೇ ಪ್ರಾಧಾನ್ಯ. ಅಲ್ಲಿ ಸ್ತ್ರೀತ್ವಕ್ಕೆ ಯಾವುದೇ ಅವಕಾಶವಿಲ್ಲ. ಎಮ್ಮೆ - ಹೇಂಟೆಗಳಿಗೆ ಹೇಗೆ ಸ್ಥಾನವಿಲ್ಲವೋ ಹಾಗೆಯೇ ಹೆಂಗಸರಿಗೂ ಸಹಾ. ಈ ಅರ್ಥದಲ್ಲಿ ಕಂಬಳ - ಕೋಳಿಕಟ್ಟಗಳು ಪುರುಷ ಪರ್ಯಾಯಗಳು. ಸದ್ಯಕ್ಕೆ ಇವಕ್ಕೆ ನಾಶವಿಲ್ಲ.

ಕೊನೆಗೂ ಇವೆಲ್ಲವೂ ವ್ಯಾಖ್ಯಾನಗಳು ಮಾತ್ರ. ನಿಜ ಯಾರಿಗೆ ಗೊತ್ತು ? ಭೂತಾರಾಧನೆ, ಯಕ್ಷಗಾನ ಕಂಬಳ ಕೋಳಿಕಟ್ಟಗಳನ್ನು ಬಿಟ್ಟು ಕರಾವಳಿಯ ಜನ ಬದುಕಲಾರರು ಎಂಬುದು ಮಾತ್ರ ನಿಜ!

■



# ಹಸಿರು ಸೀರೆ

■ ಗಾಯತ್ರಿ ಎಸ್. ಉಡುಪ

ಅಂಚೆ ಪೆಟ್ಟಿಗೆ 15, ಕಿನ್ನಿಗೋಳಿ-574 150, ದ.ಕ.ಜಿಲ್ಲೆ.

'ಅಕಾ, ದೆನಿ ಅಂಬಾ ಅಂತ ಕೂಗ್ಲಿಕ್ ಸುರುಮಾಡಿ ಎಷ್ಟೊತ್ತಾಯ್ತು.... ಇವತ್ತೊಂದು ಹೊಸ್ತಾ ನಿಂಗ್ ಹೇಳೂಕೆ.... ಏಗಳೂ ನೀನೇ ತಪ್ಪುದಲ್ದ? ಇಲ್ದಿದ್ರೆ ಹಗ್ಗ ಬಿಚ್ಕೊಂಡ್ ಗೆದ್ದೆಗೆಲ್ಲ ಹೋಯಿ ನೇಜಿ ಎಲ್ಲ ತಿಂದ್ ಬಿಡ್ತ್ ಕಾಣ್.... ಯಂತ ಕನ್ಸು ಬಿದ್ದಿತ್ತಾ ಹೆಣ್ಣೆ.... 'ಅಮ್ಮನ ಸ್ವರ ಪದ್ಮಳ ಕಿವಿದೆರೆಗೆ ಅಪ್ಪಳಿಸಿದಾಗ 'ಹೌದಲ್ಲ.... ನಾನು ಕನ್ಸು ಕಂಡದ್ದೇ ಸಮ. ಅಲ್ದ ಮತ್ತೇ?' ಎಂದು ತುಟಿಯಂಚಲ್ಲೇ ನಕ್ಕು ಹಸಿರು ಗದ್ದೆಯನ್ನೇ ದಿಟ್ಟಿಸುತ್ತಿದ್ದವಳು ಎದ್ದು ಹೊರ ನಡೆದಳು. ಇನ್ನೂ ಹನ್ನೆರಡರ ಹರೆಯ ಅವಳಿಗೆ ಆದ್ರೇನು ಶಾಲೆಗೆ ಹೋಗ್ಲಿಕ್ಕಿತ್ತ ಆಗೆಲ್ಲ! ಮೈನೆರಿಯೂಕ್ಮುಂಚೆ ಮದ್ವೆಮಾಡಿ ಗಂಡನ ಮನಿಗೆ ಕಳ್ಸೂ ಕಾಲ! ಪದ್ಮಳ ಅಪ್ಪಯ್ಯ ಗೋವಿಂದರಾಯರು ಬೀಜಾಡಿಯ ಶ್ಯಾನುಭೋಗರು. ಅದ್ಕೇ ಆಚೆಮನೆ ಲಲಿತಾ ಸಂಜೆ ಹೊಳೆಬದೀಲಿ ಕೂತ್ಕೊಂಡು ಪದ್ಮಳನ್ನು ಎಷ್ಟು ಸಲ ರೇಗಿಸಿದ್ದಳು!

'ಶಾನುಭೋಗರ ಮಗಳು, ಅಜ್ಜಿಯಿಲ್ಲದ ಪುಳ್ಳಿ, ರತ್ನದಂತಹ ಹುಡುಗಿ ಊರಿಗೆಲ್ಲ, ಬಲಜಾಣೆ ಗಂಭೀರೆ, ಹೆಸರು ಪದ್ಮಾದೇವಿ, ಹನ್ನೆರಡು ತುಂಬಿಹುದು ಮದುವೆಯಿಲ್ಲ....'

ಆಗೆಲ್ಲ ಪದ್ಮಳಿಗೆ ಸಿಟ್ಟು ಬಂದದ್ದಿಲ್ಲ. ಲಲಿತಾ ಹೇಳಿದ್ದು ಪ್ರೀತಿ ಸಹಿತ ಹಾಸ್ಯಕ್ಕಾಗಿ ಎಂದವಳಿಗೆ ಗೊತ್ತು.

'ಅಲ್ದಿದ್ರೂ ಇಷ್ಟು ಬೇಗ ಮದ್ವೆ ಎಂತಕೆ ಹೆಣ್ಣುಮಕ್ಳಿಗೆ! ಗಂಡನ್ ಮನಿಗೆ ಹೋದ್ರೆ ಇಲ್ಲಾಗೆ ಹೊಳೆ ಕಡೆ ಹೋಪುದು, ಲಲಿತಾಳ ಒಟ್ಟಿಗೆ ಜಿಬಿಲಿ ಆಡೂದು, ರಂಜೆ ಹೂ ಹೆಕ್ಕೊಂಡು ಮಾಲೆ ಮಾಡೂದು, ಗೇರು ಮರ ಹತ್ತಿ ಬಿಜಕ್ಕೊದು ಹಣ್ಣನ್ನ ಕಚ್ಚಿ ಕಚ್ಚಿ ರಸ ಹೀರಿ ಕಡೆಗೆ ಲಂಗಕ್ಕೆ ಒರ್ಸೂದು.... ಕಲೆ ಆದ್ರೂ ಚಿಂತಿಲ್ಲ ಅವ್ರಿಗೆ.... ಮಾವಿನ್ ಮಿಡಿಗೆ ಉಪ್ಪು ಹಚ್ಕೊಂಡು ತಿಂದು ಚಪ್ಪರಿಸೂದು, ಗೋಳಿಮರದ ಬೀಳು ಕಟ್ಕೊಂಡು ಉಯ್ಯಾಲೆ ಮಾಡ್ಕೊಂಡು ತೇಲಾಡೂದು.... ಒಂದೇ ಎರಡೇ? ಎಷ್ಟು ಗಮ್ಮತ್ತಪ್ಪ, ಗಂಡು ಮಕ್ಳ ಹಾಗೆ ಹೇಗೂ ಶಾಲೆಗ್ ಹೋಪುಕಿಲ್ಲ.... ಓದ್ಲಿಕ್ ಬರೀಲಿಕ್ ಕಲ್ತದ್ದು ಏನೋ ಸ್ವಲ್ಪ ಮನೇಲಿ ಅಪ್ಪಯ್ಯ ಹೇಳ್ಕೊಟ್ಟದ್ದು ಮಾತ್ರ. ಮತ್ತೆಲ್ಲ ನವರಾತ್ರಿ, ಚೌತಿ ಸಮಯ ಮಾಡೂ ಪಾರಾಯಣ, ಪ್ರತಿನಿತ್ಯ ಅಪ್ಪಯ್ಯ ಹೇಳೂ ಮಂತ್ರ ಕೇಳಿ ಕೇಳಿ ಬಾಯಿ ಪಾಠ ಬಂದಿತ್ತಷ್ಟೇ.... ಶಾಲೆ ಆದ್ರೂ ಇತ್ತೆಲ್ಲಿ!

ಹದಿನೈದು ಮೈಲು ದೂರದ ಉಡ್ಪಿಗ್ ಹ್ಯೋಕು! ಹರಿಕಥೆ ಯಕ್ಷಗಾನ ಬಯಲಾಟ ಇದೆಲ್ಲ ಊರಲ್ಲಿ ವರ್ಷಂಪ್ರತಿ ಇದ್ದದ್ದೇ ಹಾಂಗ್ಯಾ ಅದೆಲ್ಲ ಕಥೆ ಗೊತ್ತಿತ್. ಯಂತಾದ್ರೂ ಈ ಹಳ್ಳಿ ಸ್ವಚ್ಛಂದ ಜೀವ್ನ ನಂಗಿಷ್ಟಪ್ಪ.... ಪ್ಯಾಟೆ ಕಂಡದ್ದಾದ್ರೂ ಎಲ್ಲಿ? ಬ್ರಿಟಿಷ್ರ ಕಾಲ! ಅವ್ರ ಕಥೇನೆಲ್ಲ ಶ್ಯಾನು ಭೋಗಿಕೆಗೆ ಹೋಗ್ತಿದ್ದ ಅಪ್ಪಯ್ಯ ಹೇಳಿಯೇ ಸ್ವಲ್ಪ ಸ್ವಲ್ಪ ಗೊತ್ತಾಯಿತ್' ಬ್ಯಾಕಾರು ಗದ್ದೆ, ಪಟ್ಲ ಗದ್ದೆ ಎಲ್ಲ ದಾಟಿ ತೋಡು ಬದಿ ಇರುವ ಪಠೇಲ್ರ ಮನೆಯ ಲಲಿತ ಅವಳ ಪ್ರೀತಿಯ ಗೆಳತಿ. ಆದರೆ ಅವಳಿನ್ನೂ ಎಂಟು ವರ್ಷದವಳು. ಅವಳೂ ಶಾಲೆಗೆ ಹೋಗ್ಲಿಲ್ಲ. ಅವ್ಳಿಗೆ ಪದ್ಮಳನ್ನು ದಿವಸಕ್ಕೊಂದ್ಸಲ ಕಾಣದಿದ್ರೆ ಕಾಲು ತುರಿಸುತ್ತಿತ್ತೇನೋ ಎಂಥದೋ ನೆವನ ಮಾಡ್ಕೊಂಡು ಪದ್ಮಳ ಮನೆಗೆ ಬರುತ್ತಿದ್ದಳು.

ಪದ್ಮ ದನ ತರಲಿಕ್ಕೆಂದು ಎದ್ದು ಲಂಗ ಕೊಡವಿಕೊಂಡು ಗದ್ದೆ ಹುಣಿಯಂಚಿನಲ್ಲಿ ನಡೆಯತೊಡಗಿದಳು. ಸುತ್ತಲಿನ ದಟ್ಟ ಹಸಿರು ಅವಳ ಕಣ್ಣ ತುಂಬ ತುಂಬಿಕೊಳ್ಳುತ್ತಿತ್ತು. ಆ ತೆಂಗಿನ ಗರಿಗಳ ಹಸಿರು! ಅವಳಿಗೆ ಸೀರೆಯ ನಿರಿಗೆಗಳಂತೆ ಕಾಣುತ್ತಿತ್ತು. ಬಾಳೆಯೆಲೆ ಹಸಿರು ಸೀರೆಯ ಸೆರಗಿನಂತೆ ತೇಲಾಡುತ್ತಿತ್ತು. ಅದನ್ನೆಲ್ಲ ಮುಟ್ಟುತ್ತ, ಖುಷಿಪಡುತ್ತ ಹುಣಿಯಲ್ಲಿ ಕಾಲು

ದೀಪಾವಳಿ ಸ್ಪರ್ಧೆಯಲ್ಲಿ ಮೆಚ್ಚುಗೆ ಪಡೆದ ಕತೆ

ಜಾರದಂತೆ ಜಾಗ್ರತೆಯಾಗಿ ನಡೆಯುತ್ತಿದ್ದಳು. ಆ ಬಣ್ಣ ಬಣ್ಣದ ಕೆಸುವಿನೆಲೆ ಹಾಂಗಿದ್ದೇ ರವ್ಕೆ ಬೇಕು ನಂಗೆ! ಉಡುಪಿ ಪರ್ಯಾಯಕ್ಕೆ ಹೋಪುಕೆ ಹಸು್ರ ಸೀರೆ ಬೇಕೇ ಬೇಕು ಈ ಸರ್ತಿ! ಅಪ್ಪಯ್ಯನತ್ರ ಎಷ್ಟು ಹೇಳಿದ್ರೂ ಅವ್ರು ಕೆಮಿಗೆ ಹಾಕ್ಕೊಂತಿಲ್ಲೆ! ಅಮ್ಮನೂ ಎಷ್ಟು ಸರ್ತಿ ಹೇಳಿದ್ಲು.... ಅವ್ರಿಗೆಲ್ಲಿ ನೆನ್ಪಿರುತ್! ಪ್ಯಾಟೆಗೆ ಹೋಪುದೇ ವಾರಕ್ಕೊಮ್ಮೆ! ಅಲ್ಲಿ ಯಾರಾರು ಕಂಡ್ರೆ, ನನ್ ಸೀರೆ ನೆನ್ಪೆಲ್ಲಿತ್ತು? 'ಪರ್ಯಾಯಕ್ಕೆ ನಂದೇ ಒಂದು ಸೀರೆ ಉಟ್ಕೊಂಡು ಹ್ವೊಲಿಕ್ಕೆ ಆತಿಲ್ಯಾ? ನೀಲಿ ಬಣ್ಣದಿತ್ ಕಾಣ!' ಅಮ್ಮ ಹೇಳಿದಾಗ ಪದ್ಮಳಿಗೆ ಕಿರಿಚಾಡುವಷ್ಟು ಕೋಪ ಉಕ್ಕಿತ್ತು! ನಂಗ್ಯಾಕೋ ಹಸು್ರ ಸೀರೆ ಅಂದ್ರೆ ಪ್ರಾಣ. ಒಂದ್ಸಲ ತೆಕ್ಕೊಟ್ರೆ ಮತ್ತೆ ಕೇಂತ್ನಾ? ಹೆಣ್ ಮಕ್ಕಂದ್ರೆ ಎಷ್ಟು ಸಸಾರ! ನಮ್ಗೂ ಆಸೆ ಆತಿಲ್ಯಾ? ಹುಣೆಯಲ್ಲಿ ಮುಗ್ಗರಿಸಿದಾಗ ಫಕ್ಕನೆ ಅಡಿಕೆ ಸಸಿ ಆಧರಿಸಿದಳು. ಇದ್ರ ಹಸಿರು ಕಡುದಪ್ಪ! ಎಷ್ಟು ಚಂದ! ಗಿಳಿಹಸ್ರಿಗ್ಗಿಂತ ನಂಗಿದೇ ಚಂದ, ದಪ್ಪ ಹಸ್ರಿಗೆ ಬೇಕಾದ್ರೆ ನೀಲಿಯೋ ಕೆಂಪೋ ಅಂಚಿರ್ಲಿ ಬೇಕಾದ್ರೆ, ಪದ್ಮ ದನವನ್ನು ಗೂಟದಿಂದ ಬಿಚ್ಚಿ ತರುವಾಗ ಅವಳ ಕಣ್ಣು, ಮನಸ್ಸು ತುಂಬಾ ಹಸಿರೇ ತುಂಬ್ಕೊಂಡಿತ್ತು. 'ಈ ಸರ್ತಿ ಪರ್ಯಾಯಕ್ಕೆ ಶ್ರೀಧರ ಮಾವ ಬತ್ತಂಬ್ರು, ಅವ್ನೇನಾದ್ರೂ ನಂಗ್ ಸೀರೆ ತತ್ನಾ ಕಾಣ್!' ಮನೆಗೆ ಬಂದು ಬಚ್ಚಲಿಗೆ ಹೋಗಿ ಕೈಕಾಲು ತೊಳ್ದು ಊಟಕ್ಕೆ ಕೂತಾಗ ಆಗಷ್ಟೇ ಉಡ್ಪಿಯಿಂದ ಬಂದಿದ್ದ ಅಪ್ಪ ಹೇಳುತ್ತಿದ್ದರು....' ಈ ಸರ್ತಿ ಪರ್ಯಾಯಕ್ಕೆ ಶ್ರೀಧರ ಬತ್ತಂಬ್ರು.... ನೀವೆಲ್ಲ ಭಾಗೀರ್ತಕ್ಕ ಮನೆಗೆ ಹೋಯಿ ಪರ್ಯಾಯದ ಗೌಜಿ ಕಂಡ್ ಬರ್ಲಕ್ಕು... ಇಲ್ಲಿ ಹೇಗೂ.... ಸೀತಮ್ಮ ಬರ್ತ್ರು ಹೇಳಿಕಳಿಸಿದ್ರೆ....'

ಪದ್ಮಳಿಗೋ ಭಾರೀ ಖುಷಿ. ಪರ್ಯಾಯಕ್ಕೆ ಹೋದ್ರೆ ಆ ಮೆರವಣಿಗೆ, ಎಷ್ಟು ಚಂದ ಇತ್! ಭಾಗೇರ್ತಿ ಅತ್ತೆ ಮನೆಯ ಮುಖಮಂಟಪದಲ್ಲಿ ಕೂತ್ರೆ ತಟ್ಟೀರಾಯ, ಆನೆ, ಕೀಲು ಕುದುರೆ, ಬಣ್ಣ ಬಣ್ಣದ್ ವೇಷ, ಚೆಂಡೆ, ಬ್ಯಾಂಡು ವಾದ್ಯ, ಗರ್ನಾಲು ಎಲ್ಲ ಕಾಂಬೂಕೆ ಒಳ್ಳೇದಾತ್! ಮೊದ್ಲೊಮ್ಮೆ ಕಂಡಿದ್ದೆ! ಮೆರವಣಿಗೆ ಕಾಂಬೂಕೆ ಆಚೀಚೆ ಮನೆ ಹೆಂಗಸ್ರು ಅದೇ ಮುಖಮಂಟಪಕ್ಕೆ ಬಂದು ಕೂತುಕೊಳ್ಳುತ್ರು.... ಅಬ್ಬಬ್ಬ! ಅದ್ರ ವೇಷವೆ? ಶಂಕರಪುರ ಮಲ್ಲಿಗೆ ಮುಡ್ಕೊಂಡು ಬಣ್ಣ ಬಣ್ಣದ ಪಚ್ಚೆ ಸೀರೆ, ಕಿವೀಲಿ ನೇತಾಡೋ ಲೋಲಾಕು! ಏನ್ ಸೇಳೆ! ನಂಗ್ ಅದೆಲ್ಲ ಸೇರುತ್ತಿಲ್ಲೆ... ಆದ್ರೆ, ಮಲ್ಲಿಗೇಂದ್ರೆ ಪಂಚಪ್ರಾಣ.... ಭಾಗೇರ್ತತ್ತೆ ಒಂದು ಚೆಂಡು ಮಲ್ಲಿಗೆ ಕೊಟ್ಟೇ ಕೊಡ್ತಾರೆ ನಂಗೆ.... ಒಂದು ಲಂಗಾನಾದ್ರೂ ಹಸು್ರ ಬಣ್ಣದ್ದಿಲ್ಲ.... ಅಲ್ಲ, ಈ ಅಪ್ಪಯ್ಯ ಅಮ್ಮಂದ್ರಿಗೆಲ್ಲ ಮಕ್ಕಂದ್ರೆ ಬರೀ ಪಿಂಡ ಹಾಕ್ಲಿಕ್ಕೆ ಬೇಕಾದವ್ರು! ಅವ್ರಿಗೂ ಆಸೆಗಳಿರುತ್, ಬೇಜಾರಾತ್, ಖುಷಿ ಆತ್ ಅಂತೆಲ್ಲ ಗೊತ್ತಾಪುದೇ ಇಲ್ಯಾಂತ.... ಅಲ್ ಹೋಗುಕಾಗ, ಇಲ್ ಹೋಗುಕಾಗ, ಹ್ವಾಂಗ್ ಮಾಡುಕಾಗ, ಹೀಂಗ್ ಮಾಡುಕಾಗ ಅಂತೆಲ್ಲ ಹೇಳ್ತಾ ಇಪ್ಪುದು. ಕಾಲ್‌ಮೇಲೆ ಕಾಲ್ ಹಾಕಿ ಕೂತ್ರೆ 'ತೆಗಿ ಹೆಣ್ಣೆ, ಹಾಂಗ್ ಕೂತು ಕೊಂಬುಕಾಗ ಅಂತ್ಲು ಅಮ್ಮ. ಬೊಟ್ಟಿಡದಿದ್ದೆ 'ಹೆಣ್‌ಮಕ್ಳು ಬೋಳ್‌ಹಣೇಲಿ ಇಪ್ಪುಕಾಗ.... ಹ್ಯಾಂಗಿರ್ಕು ಅಂತ ಗೊತ್ತಿಲ್ಯಾ....' ಅಂತ ಅಮ್ಮ ಹೇಳಿಯೇ ಬಿಡ್ತ್ಲು' ಮುಟ್ಟಾದ ನೇತ್ರು, ಹತ್ರ ಮಾತಾಡಿದ್ದಕ್ಕೆ ಅವಳ್ನ ಮುಟ್ಟೀಯಾ ಬುದ್ಧಿಗಿದ್ದಿ ಇಲ್ಯಾ ನಿಂಗೆ? 'ಅಂತ ಅಮ್ಮನ್ ಗದರಿಕೆ, ಒಟ್ಟಾರೆ ಹಳ್ಳೀಲಿ ಹುಟ್ಟಿದ್ದು ಬೇಜಾರಲ್ಲದಿದ್ರೂ, ಹೆಣ್ಣಾಯಿ ಹುಟ್ಟಿ ಹೀಂಗೆಲ್ಲ ಕೇಳ್ತಾ ಇರ್ಕಲ್ದ...' ಅಂತ ಪದ್ಮಳ ಎಳೆ ಮನಸ್ಸು ಚಿಂತಿಸುತ್ತಿತ್ತು. ಆದ್ರೆ ತಿಂಬೂಕೆ ಬೇಕಾದಷ್ಟು ಅಮ್ಮ ಕೊಡುವವಳೇ. 'ಸಮಾ ತಿನ್ ಹೆಣ್ಣೇ, ಹಾಲು ಮೊಸ್ರು, ಬಿಟ್ರೆ ಬ್ರಾಮಣ್ರಿಗೆ ಎಂತ್ ಇತ್? ಮದ್ವೆಯಾಗಿ ಬಸ್ರಿ, ಬಾಣಂತಿ ಅಂತ ಗಟ್ಟಿ ಇದ್ದು ನೋಡು....'' ಅಂತೆಲ್ಲ ಅವ್ಳು ಹೇಳುವಾಗ ಬೇರೆಲ್ಲ ಕೋಪ ಹೋಗಿ ನಾಚ್ಕೆಯೂ ಆಗ್ತಿತ್ತು ಪದ್ಮಳಿಗೆ.

★

ಪರ್ಯಾಯಕ್ಕೆ ಅಮ್ಮನ ನೀಲಿ ಸೀರೆಯನ್ನೇ ಹೊಟ್ಟೆಯೊಳಗೆ ತುರ್ಕೀ ಉಟ್ಕೊಂಡು ಹೋಗ್ಬೇಕಾಯ್ತು. ಅವಳಿಗೆ ಪರ್ಯಾಯದ ಗೌಜಿಗಿಂತ ತನ್ನ ಬಿಳೀ ಗುಲಾಬಿಯಂತ ಮೈಗೆ ಹಸಿರು ಸೀರೆ ಉಟ್ಕೊಂಡು ಮೆರೀಲಿಕ್ಕಾಗಲಿಲ್ಲ ಅಂತ ದುಃಖವೇ ಬಂದಿತ್ತು. ಆ ರವ್ಕೆಯೋ ದೊಗಲೆ... ಅಮ್ಮಂದೇ ಎದೆ ಹತ್ರ ಪಿನ್ ಹಾಕ್ಕೊಂಡು.... ಭಾಗೇರ್ತತ್ತೆ ಒಂದಿಡೀ ಮಲ್ಲಿಗೆ ಚೆಂಡು ತನ್ ತಲೆಗೆ ಮುಡ್ಸಿದಾಗ ಅದ್ರ ಪರಿಮಳ ಅವಳಿಗೆ ಅಮೇಲೇರಿಸಿತ್ತು! ಮುಟ್ಟಿ ಮುಟ್ಟಿ ಮೂಗಿಗೆ ಕೈ ಹಿಡಿಯುವುದೇ ಅವಳ ಕೆಲ್ಸ! ಅಮ್ಮ ಕಂಡ್ರೆ ಅದ್ಕೂ ಬೈತ್ಲು.... ಹಾಳಾತ್ ಹೆಣ್ಣೆ.... ಏಗಳೂ ಹೂವ ಮುಟ್ಟುಕಾಗ.... ಕಪ್ಪಾತ್! ಅಂತ ಉಡುಪಿ ಶ್ರೀಕೃಷ್ಣದೇವರ ದರ್ಶನ ಮಾಡುವಾಗ ಪದ್ಮಳ ಮನಸ್ಸು ಪ್ರಾರ್ಥಿಸುತ್ತಿತ್ತು..... 'ಮುಂದಿನ್ಸಲ ಪರ್ಯಾಯಕ್ಕಾದ್ರೂ ಹಸಿರು ಸೀರೆ ಕೊಡ್ಸು.... ಕೃಷ್ಣಾ....' ಶ್ರೀಧರ ಮಾವ ಬಂದಿದ್ರೂ ಸೀರೆ ತಂದಿರ್ಲಿಲ್ಲ... ಇವಳಾಗಿ ಕೇಳೂ ಜಾತಿ ಅಲ್ಲ....

ಆದ್ರೆ ಅದೇ ಶ್ರೀಧರ ಮಾವ ಪರ್ಯಾಯ ಕಳ್ದು ಎರಡು ತಿಂಗಳಾದಾಗ ಒಬ್ಬ ಹುಡುಗನನ್ನು ಮನೆಗೆ ಕರ್ಕೊಂಡು ಬಂದಿದ್ದ. ಜೊತೆಗೇ ಒಂದು ಕೆಂಪು ಹಳದಿ ಹೂವಿನ ಸೀರೆ.... ಈ ಸೀರೆ ಉಟ್ಕೊ ಹೆಣ್ಣೆ.... ಹುಡ್ಗ ಒಪ್ಪಿ ಬಿಟ್ರೆ ನವರಾತ್ರಿಗೇ ಧಾರೆ ಎರ್ದು ಕೊಡ್ತು ಭಾವ....' ಅಂದ.

ಅಮ್ಮನಿಗೋ ಏನು ಸಂಭ್ರಮ ಅವಳೇ ಸೀರೆ ಉಡ್ಸಿದ್ಲು. ಹೆಣ್ ತೋರ್ಸೋ ಶಾಸ್ತ್ರ ಮಾಡಿದ್ರು. ಹುಡ್ಗನ ಹೆಸ್ರು ಶ್ರೀನಿವಾಸ ಅಂಬ್ರು. ಕಾರ್ಕಳದ ಶ್ಯಾನುಭೋಗರ ಮಗನಂತೆ. ಇಪ್ಪತ್ತು ಖಂಡಿ ಅಡ್ಕೆ ಆಗುತ್ತಂಬ್ರು.... ಗದ್ದೆ ಬೇಸಾಯ ಇತ್ತಂಬ್ರು....' ಅದೆಲ್ಲ ಅಪ್ಪ ಅಮ್ಮ ಮಾತಾಡುವಾಗ ಅವಳಿಗೆ ಅರ್ಥ ಆಗಿರ್ಲಿಲ್ಲ. ಅವಳಿಗೆ ಬೇಕಾದ್ದೂ ಅಲ್ಲ. ನಂಗ್ ಮದ್ವೆ ಆದ್ರೆ.... ಲಲಿತಾಳೊಟ್ಗೆ ಆಡ್ಲಿಕ್ಕೆ ಇಲ್ಲ; ಹೊಳೇ ಬದೀಲಿ ನೀರಾಟ ಆಡ್ಲಿಕ್ಕೆ ಇಲ್ಲ. ದೆನಿ ಕಟ್ಟೋ ನೆವನದಿಂದ ಹಸಿರು ಗದ್ದೇ ನಡುವೆ ಕನ್ಸು ಕಾಣ್ತಾ ಇಪ್ಪುಕಿಲ್ಲ... ಗಂಡನ್ ಮನೇಲಿ ಹ್ಯಾಗೋ ಏನೋ.... ಹಬ್ಬಕ್ಕೆಲ್ಲ ಮಲ್ಲಿಗೆ ಜಲ್ಲೀ ಬಿಡ್ತಿದ್ದೊ, ನಾನೂ ಲಲಿತಾ ಇಬ್ರೂ ದೊಡ್ಡ್ ಪೂಜೆ ಇದ್ರೆ ರಾಶಿ ರಾಶಿ ಹೂ ತಪ್ಪುದು ಅಪ್ಪಯ್ಯ.... ನಾ ಹೆಚ್ಚೋ ಲಲಿತಾ ಹೆಚ್ಚೋ ಅಂತ ಸ್ಪರ್ಧೆ ಹೂ ಹೇರಿ ಕೊಂಬೂಕೆ... ಅದ್ನ ಎಣಿಸಿಯೇ ಪದ್ಮಳಿಗೆ ಕಿಸಕ್ಕನೆ ನಗೆ ಬಂತು. 'ಎಂತ ಹೆಣ್ಣೇ, ಈಗ್ಲೆ ಗಂಡನ ನೆನ್ಪು ಬರ್ಲಿಕ್ಕೆ ಸುರಾಯ್ತಾ? 'ಅಮ್ಮ ಬತ್ತಿ ಮಾಡ್ತಾ ಓರೆ ಕಣ್ಣಲ್ಲಿ ಕಂಡ್ಳು

★

ನವರಾತ್ರಿ ಕಳ್ದು ಹಬ್ಬಕ್ ಮುಂಚೆ ಮದ್ವೆದಿನ ನಿಶ್ಚಯ ಮಾಡಿಯಾಯ್ತು.

ಪದ್ಮಳಿಗೆ ಲಲಿತಾ ಹಾಸ್ಯ ಮಾಡಿದ್ದೇ ಮಾಡಿದ್ದು! ಈ ಸರ್ತಿಯಾದ್ರೂ ಮದುಮಗ್ಳಿಗೆ ಹಸು್ರ ಸೀರೆ ಬತ್ತಾ ಕಾಂಬ'

'ಹೌದ್.... ಮದ್ವೆ ಮಂಟಪದಲ್ಲಾದ್ರೂ ಹಸು್ರ ಸೀರೆ ಉಟ್ಟು ಅಮ್ಮನ್ ಸೊಂಟಪಟ್ಟಿ ಹಾಕ್ಕೊಂಡು ಮಲ್ಲಿಗೆ ಜಲ್ಲೀ ಬಿಟ್ಕೊಂಡು ಒಳ್ಳೇ ಲಕ್ಷ್ಮೀದೇವಿ ಹಾಂಗೆ ನಿಂತ್ಕಂಡು ಸೀರೆ ನಿರಿ ಹಿಡ್ಕೊಂಡು ಭರಾ ಭರಾ ಅಂತ ನಡೀಬೇಕು....'

ಗಂಡನ ಯೋಚ್ನೆಗಿಂತ ಅವಳಿಗೆ ಇದೇ ದೊಡ್ಡ ಸಂಗ್ತಿ! ಪದ್ಮಳ ಅಂತರಂಗ ಹೆತ್ತವರಿಗೆ ತಟ್ಟಿತ್ತೇ? ಮದ್ವೆ ಮನೆ ಸಿಂಗಾರ, ಹಪ್ಳ ಸೆಂಡ್ಗೆ ತಯಾರಿ, ನೆಂಟ್ರಿಗೆಲ್ಲ ಹೇಳಿಕೆ, ಹೋಳ್ಗೆಲಾಡು ಸಿದ್ಧತೆ ಬೀಗರ ಉಪಚಾರ.... ಇದ್ರಲ್ಲೇ ಮುಳುಗಿದ್ದ ಅಪ್ಪಯ್ಯ ಅಮ್ಮ ಪದ್ಮಳ ಆಸೆಯಂತೆ ಹಸಿರು ಧಾರೆ ಸೀರೆ ತರ್ಲಿಕ್ಕೆ ಶ್ರೀಧರ ಮಾವನಿಗೇ ವಹಿಸಿಕೊಟ್ಟಿದ್ರು. ಹ್ಯಾಂಗೂ ಕುಂದಾಪ್ರ ಪೇಟೆಯಿಂದ ಬರ್ತ್ನಲ್ದ?



ಪದ್ಮ ಕುತ್ತಿಗೆ ಉದ್ದ ಮಾಡಿ ಮಾಡಿ ಬಾಕ್ಯಾರು ಗದ್ದೆ ಕಡೆ ಇಣುಕಿ ಇಣುಕಿ ಸುಸ್ತಾಗಿ ಮಲಗಿ ಬಿಟ್ಟಳು. ಮದ್ವೆಗೆ ಎರಡೇ ದಿನ ಉಳಿದದ್ದು. ಶ್ರೀಧರ ಮಾವಂಗೆಂತದೋ ವ್ಯವಹಾರ. ಅರ್ಜೆಂಟಾಗಿ ಬೆಂಗಳೂರಿಗೆ ಹೋಪುಕಿತ್ತಂತೆ. ಹೋಗಿ ಬರುವಾಗ ಗಡಿಬಿಡಿಯಿಂದಲೇ ಬಂದಿದ್ದ.

'ಪದ್ಮ, ಬೇಜಾರು ಮಾಡ್‌ಬೇಡ್ವೇ. ಬಸ್ಸು ಹೊರಡೂಕೆ ಅವಸರ ಆಯ್ತೂಂತ ನಾ ಎರಡು ಅಂಗ್ಡೀಲಿ ಕೇಳ್ದೆ. ದಪ್ಪ ಹಸು್ರ ಬಣ್ಣದ ಸೀರೆ

ರೇಶ್ಮೆದ್ದು ಇರ್ಲೇ ಇಲ್ಲ.... ಗಿಳಿ ಪಚ್ಚೆ ನಿಂಗ್ ಬೇಡಾ ಅಂದಿದ್ಯಲ್ಲ.... ಅದೊಂದಿತ್.... ಮದುಮಗ್ಳಿಗೆ ಅರಿಶಿನ ಕುಂಕುಮ ಬಣ್ಣದ್ದೇ ಚಂದ ಆತ್ತೂಂತ ಅದ್ನೇ ತಂದೆ. ಭಾರಿ ಚಂದ ಇತ್ ಕಾಣ್.... ಇನ್ನು ಬಸುರಿ ಆದಾಗ ಸೀಮಂತಕ್ಕೋ ಯುಗಾದಿ, ದೀಪಾವಳಿಗೋ ಖಂಡಿತ ಎರಡೆರಡು ಹಸ್ರು ಸೀರೆ ತರ್ಲಕ್ಕು....' ಮಾವ ಸಮಧಾನಿಸುವ ದನಿಯಲ್ಲಿ ಹೇಳುತ್ತಿದ್ದರೂ ಪದ್ಮ ಪೂರ್ತಿ ನಿರಾಶಳಾಗಿದ್ದಳು. ಅವ್ಳಿಗೆ ಮದ್ವೆಗಿಂತ ಸೀರೆ ಬಯಕೆ ಮುಖ್ಯವಾಗಿತ್ತೂಂತ ಯಾರೂ ತಿಳೀಲೇ ಇಲ್ಲ! ಅವಳ ವಯಸ್ಸದ್ರೂ ಎಷ್ಟು? ಲಲಿತಾಳ ಜೊತೆ ಜಿಬಲಿ ಆಡ್ಲಿಕ್ಕೂಹೋದಾಳು ಮದ್ವೆ ಮುಗ್ಸಿ!



ಅಂತೂ ಮದ್ವೆ ಮನೆ ತುಂಬಾ ಗೌಜಿಯೋ ಗೌಜಿ! ಜನವೇ ಜನ! ಅದನ್ನು ನೋಡಿಯೇ ಅವಳಿಗೂ ಸಂಭ್ರಮ! ಹೊರತು ಹತ್ತಿರದಲ್ಲೇ ಕುಳಿತ ಎಳೆ ಹುಡುಗನಾದ ಶ್ರೀನಿವಾಸನ ಬಗ್ಗೆ, ಗಂಡನೆನ್ನುವ ಬಗ್ಗೆ ಪುಳಕಗಳು ಎದ್ದಿರಲೇ ಇಲ್ಲ! ಒಮ್ಮೊಮ್ಮೆ ಹಸಿರು ಸೀರೆ ಉಟ್ಟ ಹೆಂಗಸ್ರ ಕಡೆ ದೃಷ್ಟಿ ಬೀರುತ್ತಾ ಅಲ್ಲೇ ಕಣ್ಣು ಕೀಲಿಸುತ್ತಿದ್ದಳು.

ಮದ್ವೆ ಮುಗ್ದು, ಪತಿಗೃಹಪ್ರವೇಶ, ಬೀಗರ ಔತಣ ಕಾರ್ಯಕ್ರಮಗಳೆಲ್ಲ ಕಳೆದು ಮರಳಿ ತವರಿಗೆ ಬಂದಿದ್ದಾಯ್ತು. ಮೈನೆರೆಯುವವರೆಗೂ ಅಪ್ಪಯ್ಯ ಅಮ್ಮನೊಟ್ಟಿಗೇ ಇರ್ಬೇಕಾಗಿತ್ತು! ಅದು ಅವಳಿಗೆ ಗಮ್ಮತ್ತೇ ಆಯ್ತು. ಲಲಿತೆ ಒಟ್ಟಿಗೆ ಇನ್ನೂ ಸ್ವಲ್ಪ ದಿನ ಆಡ್ಕೊಂಡು ಇರ್ಲಕ್ಕು. ಆದ್ರೆ ಅಮ್ಮ ಬಿಡ್ತಾ, ಇಲ್ಯಾ ಯಾರಿಗ್ಗೊತ್ತು?

ದಿನಗಳುರುಳಿ ಮೊದಲ ಯುಗಾದಿ ಹತ್ತಿರ ಬಂತು. ಹೊಸ ಮದುಮಕ್ಳಿಗೆ ವಸ್ತ್ರ ಕೊಟ್ಟು ಉಪಚಾರ ಮಾಡುಕಿತ್.

ಪದ್ಮಳ ಅಪ್ಪಯ್ಯ 'ಈ ಸಲ ಆದ್ರೂ ಯುಗಾದಿ ಉಡುಗೊರೆ, ಅಂತ ಹಸ್ರು ಸೀರೆ ಕೊಡ್ಕು ಹೆಣ್ಣಿಗೆ ಎಷ್ಟು ಆಸೆ ಪಡ್ತಿತ್ತಪ್ಪ.... ಅಂತ ಯೋಚಿಸಿ ಮುಂದಿನ್ ಶನಿವಾರ ಉಡ್ಪಿಗೆ ಹೋದಾಗ ತಪ್ಪದು ಅಂತ ತೀರ್ಮಾನಿಸಿದರು. ಅದ್ನ ಹೆಂಡ್ತಿಗೂ ಪದ್ಮಂಗೂ ಹೇಳಿ ಅವರ ಮನಸ್ಸಿಗೂ ತಂಪೆರೆದರು. ಪದ್ಮಳಿಗೆ ಈಗ್ಲಾದ್ರೂ ದೇವ್ರು ಕಣ್ಬಿಟ್ರಪ್ಪ.... ಯುಗಾದಿ ಬೇಗ ಬರ್ಲಿ... ಮೊದ್ಲು ಸೀರೆ ಉಟ್ಕೊಂಡು ಲಲಿತಾಗೆ ತೋರ್ಸಿ ಬರ್ಕು... ಆಮೇಲೆ ಅಪ್ಪಯ್ಯ ಅಮ್ಮಂಗೆ....' ಪದ್ಮಳ ಹುಡುಗು ಬುದ್ಧಿ ಅದರಾಚೆ ಬೆಳೆದಿರ್ಲೇ ಇಲ್ಲ. ಗಂಡನ ಎದುರು ಸೀರೆಯ ಸೆರಗ ಮರೆಯಲ್ಲಿ ಓರೆನೋಟ ಬೀರುವ ಮನೋಭಾವ ಅರಳಿರಲೇ ಇಲ್ಲ.

ಅಪ್ಪ ಉಡ್ಪಿಗೆ ಹೋಗಿ ಬರುವ ದಿನ ಅವಳ ಮನಸ್ಸಿನ ಲಹರಿಗಳನ್ನು ಅಳೆದವರಾರು? ಉತ್ಸಾಹದ ಓಡಾಟ, ಲವಲವಿಕೆಯ ಗುನುಗು, ಲಲಿತೆಯೊಂದಿಗಿನ ಹೊಟ್ಟೆ ಬಿರಿಯುವ ನಗು ಮಾತು! ಹೊಳೆಯ ನೀರು ತೇಪಿದ್ದೇ ತೇಪಿದ್ದು!

'ಲಲ್ತಾ ಇವತ್ತು ಅಪ್ಪಯ್ಯ ಹಸ್ರು ಸೀರೆ ತರ್ತಾರಂತೆ ಯುಗಾದಿಗೆ! ಸುರುವಿಗೆ ನಿಂಗೇ ಉಟ್ಟು ತೋರ್ಸೂದು....'

ಅಪ್ಪಯ್ಯ ಕತ್ತಲಾದ್ರೂ ಬರ್ಲಿಲ್ಲ. ಪದ್ಮಳ ಕಣ್ಣುಬಾಕ್ಯಾರು ಗದ್ದೆಯ ಹಸಿರಂಚಿನ ಹುಣಿಯ ಮೇಲೇ ನೆಟ್ಟಿತ್ತು.

'ಹೋ.... ಅಪ್ಪಯ್ಯ ಬಂದೇ ಬಿಟ್ರು....' ಪದ್ಮ ದಬಕ್ಕಂತ ಅಂಗ್ಳಕ್ಕೇ ಹಾರಿ ಓಡಿ ಹೋಗಿ ಅಪ್ಪಯ್ಯನ ಕೈಚೀಲ ಎಳೆಯ ಹೊರಟಾಗ ಅವ್ರ ಕಣ್ಣಂಚಿನಲ್ಲಿ ಬಳ ಬಳ ನೀರು! ಮುಖವೋ ಕಪ್ಪು ಗಟ್ಟಿದೆ! ತಲೆ ಕೂದಲು ಕೆದರಿದೆ! ಒಂದೂ ಮಾತು ಆಡ್ಲಿಲ್ಲ ಅಪ್ಪಯ್ಯ. ಪದ್ಮ ಕಂಗೆಟ್ಟಳು. ಅಪ್ಪಯ್ಯನನ್ನು ಮಾತಾಡ್ಸೂಕೆ ಅವ್ಳಿಗೆ ಹೆದರ್ಕಿ ಆಯ್ತು. ಅಮ್ಮನ ಕರ್ಕೊಂಡು ಬತ್ತೆ ಅಂತ ಹೆಜ್ಜೆ ಹಿಂದೆ ಇಟ್ಟಳು. ಅಪ್ಪ ಚಾವಡಿಗೆ ಬಂದು ಕುಸಿದವರೇ 'ಗೌರೀ.... ಎಲ್ಲಾ ಮುಗೀತ್. ಈಗ್ಲೇ ಹೊರಡು ಹೆಣ್ಣಿನ ಕರ್ಕೊಂಡು ಹ್ಯೋಕು.... ಅಲ್ಲಿ ಕಾರ್ ಬಂದಿತ್, ಬೇಗ ಹೊರಡು....' ಗಂಡನ ಮಾತು ಗೌರಕ್ಕನಿಗೆ ಅರ್ಥವಾಗಲೇ ಇಲ್ಲ.

'ಏ.... ಏನಾಯ್ತು? ಎಂತಕೆ ಹಂಗೆಲ್ಲ ಮಾತಾಡ್ತಿ? ಶ್ರೀನಿವಾಸ ಹ್ಯಾಂಗಿದ್ದ? ಏನಾರಾ ಆಯ್ತಾ? ಭಾರವಾದ ಕುಗ್ಗಿದ ದನಿಯಲ್ಲಿ ಅಪ್ಪಯ್ಯ ಹೇಳಿದ್ದು ಬಹುಶಃ ಮರ್ಕುತ್ತಲೇ.... 'ಸೀನು.... ಗೆಳೆಯರೊಟ್ಟಿಗೆ ಮಲ್ಪೆ ಸಮುದ್ರಕ್ಕೆ ಹೋದದ್ದಂಬ್ರು.... ಮುಂದೆ ಮುಂದೆ ಹೋಗ್ಬೇಡಾಂದ್ರೂ ಕೇಳ್ಲಿಲ್ಲಾಂಬ್ರು.... ನೀರಲ್ಲಿ....

ಜಾರಿ ಬಿದ್ದವ ಮತ್ತೆ ಬರ್ಲಿಲ್ಲಂತೆ.... ಈಗ ಹೆಣ ಸಿಕ್ಕಿರ್ಲಕ್ಕು.... ನಾವೀಗ್ಲೇ ಹ್ಯೊಕು....' ಎಂದು ಜೋರು ಮರ್ಕಿದಾಗ ಬಾಗಿಲಂಚಿನಲ್ಲಿ ನಿಂತಿದ್ದ ಪದ್ಮಳಿಗೆ ಅರ್ಥವಾಗಿತ್ತು. ಕೈಯಲ್ಲಿ ಅರ್ಧಕಟ್ಟಿದ್ದ ಜಾಜಿ ಮಾಲೆ ಕೆಳಕ್ಕೆ ಜಾರಿ ಬಿದ್ದು ಅದರ ಮೇಲೆ ಎಚ್ಚರತಪ್ಪಿ ಬಿದ್ದಳು. ಉಡ್ಪಿ ಪರ್ಯಾಯದಲ್ಲಿ ತಕ್ಕೊಂಡಿದ್ದ ಹಸ್ರು ಬಳೆ ನೆಲಕ್ಕೆ ಬಡ್ದು ಪುಡಿಪುಡಿಯಾಯ್ತು. ಅಪ್ಪಯ್ಯ ಅಮ್ಮನುಪಚಾರದಿಂದ ಎಚ್ಚರವಾದಾಗ ಪದ್ಮಳ ಕಣ್ಣ ಮುಂದೆ ಬಂದ ಮೊದಲ ಚಿತ್ರ ಲಕ್ಷ್ಮಮ್ಮನದು. ಬೋಳು ತಲೆಯ ರವಿಕೆ ತೊಡದೆ ಕೆಂಪು ಸೀರೆ ಹೊದೆದು ಏಗಳೂ ಬತ್ತಿ ಹೊಸೆಯುವ ಲಕ್ಷ್ಮಮ್ಮ ದುತ್ತೆಂದು ಕಾಣಿಸಿಕೊಂಡಂತಾದಾಗ 'ಅಮ್ಮಾ....' ಎಂದು ಚೀರಿದಳು.

ಕೆಲವೇ ಗಂಟೆಗಳಲ್ಲಿ ಎಲ್ಲರೂ ಶ್ರೀನಿವಾಸನ ಮನೆಗೆ ಧಾವಿಸಿದ್ದರು. ಪುರೋಹಿತರ ನಿರ್ದೇಶನದಂತೆ ಎಲ್ಲವೂ ಯಾಂತ್ರಿಕವಾಗಿ ನಡೆಯುತ್ತಿತ್ತು. ಎಲ್ಲರೂ ನಿಸ್ತೇಜರಾಗಿ ಕೊರಡಿನಂತಾಗಿದ್ದರು.

ಇನ್ನೂ ಮೈನೆರೆಯದ ಹುಡುಗಿ ಪದ್ಮ! ಎಲ್ಲರ ಹೃದಯ ಅವಳ ದುರವಸ್ಥೆಗೆ ಚೀರಿಕೊಳ್ಳುತ್ತಿತ್ತು. ಆದರೇನು? ಸಂಪ್ರದಾಯ ಬಿಡುಕ್ಕಾತ್ತಾ? ಅಂತ ಎರಡೂ ಮನೆಯವರು ಪದ್ಮಳ ನೀಳಕೂದಲನ್ನು ಕತ್ತರಿಸಿ ತಲೆಯನ್ನು ಬೋಳಿಸಲು ಸಿದ್ಧತೆ ನಡೆಸಿದರು. ತಾಳಿಯನ್ನು ಕೀಳಲಾಯ್ತು. ಕಾಲುಂಗುರ, ಬಳೆಗಳನ್ನು ಕಳಚಲಾಯ್ತು. ಪದ್ಮ ಈಗ ಅಳುತ್ತಿರಲಿಲ್ಲ. ಜೀವಂತ ಹೆಣವಷ್ಟೇ ಅವಳೀಗ. ಇನ್ನು ಸಾಯೂವರ್ಗೆ ಇದೇ ಕೆಂಪು ಸೀರೆ ಬೋಳುತಲೆ ನನ್ ಸಂಗಾತಿ ಅನ್ನುವ ಸತ್ಯ ಅರಿತಳು. ಮನಸ್ಸು ಕಲ್ಲಾಯ್ತು. ಆದ್ರೆ ಒಂದು ಯೋಚ್ನೆ ಅವಳನ್ನು ಆಗ್ಲೂ ಕಾಡ್ತು. 'ಲತವರ್ಮನೆಗೆ ಹೋದ್ರೆ..... ಲಲ್ತಾಗೆ ನನ್ ಗುರ್ತ ಆತ್ತಾ? ಅವ್ಳು ಇನ್ ನನ್ನೊಟ್ಟಿಗೆ ಮಾತಾಡೂಕೆ ಬತ್ಳಾ?'

★

ಎಳೆಹರೆಯದಲ್ಲೇ ಕೆಂಪು ಸೀರೆಯನ್ನು ಜನ್ಮಪರ್ಯಂತ ಸಂಗಾತಿಯನ್ನಾಗಿಸಿಕೊಂಡ ಪದ್ಮಕ್ಕನಿಗೆ ಈಗ ಎಪ್ಪತ್ತರ ಪ್ರಾಯ. ಬದುಕಿಡೀ ಕೌಟುಂಬಿಕರ ಬಾಣಂತನ ಸ್ಕಾಯೋ.... ಮನೆ ವಾರ್ತೆಯನ್ನು ಕಂಡ್ಕೊಂಡೋ ಕಾಲ ಸರಿದಿತ್ತು. ಪದ್ಮಕ್ಕನ ತಮ್ಮ ಹರೀಶನ ಒಬ್ಬನೇ ಮಗ ಸಂಜಯ ಆರು ದಶಕಗಳ ಬಳಿಕ ಹುಟ್ಟಿದವ. ಆಧುನಿಕತೆಯ ಗಾಳಿ ಕುಡಿದವ. ತನ್ನನ್ನು ಎತ್ತಿ ಸಾಕಿದ, ಮುದ್ದಾಡಿದ ಪದ್ಮಕ್ಕನ ಕಮರಿದ ಬಾಳಿನ ಕರುಣ ಕತೆ ಕೇಳಿ ಅವನ ಅಂತಃಕರಣ ಮಿಡಿದಿತ್ತು. 'ಅಪ್ಪಾ, ನಾನಂತೂ ಒಂದು ಹಸ್ರು ಸೀರೆ ಪದ್ಮತ್ತೆಗೆ ತಂದ್ಕೊಡ್ತೆ.... ಪಾಪ.... ಸಂಪ್ರದಾಯ ಅಂತ ಅವ್ರನ್ನು ನೋಯಿಸಿದ್ರಿ....' ಅಂದವನು ಹಸಿರು ರೇಶ್ಮೆ ಸೀರೆ ಅಂಚು, ಹೂವು ಇಲ್ಲದ್ದು ಮಡಿ ಹೆಂಗಸ್ರು ಉಡುವಂತದ್ದು ತಂದೇ ಬಿಟ್ಟಿದ್ದ.

'ಈಗ್ಲಾದ್ರೂ, ಪದ್ಮತ್ತೆಗೆ ಸಂತೋಷ ಆತ್ತಾ ಕಾಂಬ.' ಅಂತ ಅವನ ಸುಧಾರಣಾ ಮನೋಭಾವ ಆಶಿಸುತ್ತಿತ್ತು.

ಪದ್ಮತ್ತೆಯ ಕಾಲ ಬಳಿ ಹಸಿರು ಸೀರೆ ಇಟ್ಟು ನಮಸ್ಕರಿಸಿ ಸಂಜಯ ಹೇಳಿದ. ಇದು ನಿಮ್ಗೆ ಅತ್ತೆ.... ನಿಮ್ಕತೆ ಎಲ್ಲಾ ಕೇಳಿ ತುಂಬಾ ಬೇಜಾರಾಯ್ತು. ನೀವು ಇದ್ನ ಉಟ್ರೆ ನಂಗೆ ಸಂತೋಷ ಆತ್.... ನೀವೂ ಸಂತೋಷ ಪಡಿನಿ.....'

ಪದ್ಮಕ್ಕನಿಗೆ ಹಿಂದಿನ ನೆನಪು ಬಂತೋ ಏನೋ. ಮುಖ ಗಂಭೀರವಾಯ್ತು. ಅವನನ್ನೆ ಕಣ್ಣರಳಿಸಿ ನೋಡಿಹೇಳಿದ್ರು....

'ನಾ ಇದ್ನ ಉಡ್ತಿಲ್ಲೆ ಮಾಣಿ, ನಂಗೀಗ ಯಾವ ಆಸೆಯೂ ಇಲ್ಲ.... ನಿಂಗ್ ಬೇಜಾರಾಗೂದಾದ್ರೆ.... ಇದ್ನ.... ತಲೆದಿಂಬಡಿಲೇ ಇಟ್ಕೊಂಡು.... ಮನಿಕಂತೆ ಏಗಳೂ....' ಅವರ ದನಿ ಮಂದ್ರವಾಗಿ ನಡುಗಿದಾಗ ಸಂಜಯ ತನ್ನ ವಯಸ್ಸನ್ನೇ ಮರೆತು ಅವರ ತೊಡೆ ಮೇಲೆ ಉರುಳಿ ಬಿಕ್ಕಿ ಬಿಕ್ಕಿ ಅತ್ತ.

■

ಪ್ರಬಂಧ

# ಹೂಗಳ ಲೋಕ



■ **ಮಲ್ಲಿಕಾರ್ಜುನ ಹುಲಗಬಾಳಿ**
ಬಸವಸಂಪದ, ಬನಹಟ್ಟಿ- 587 311
ಬಾಗಲಕೋಟೆ ಜಿಲ್ಲೆ.

**ಯಾ**ಕೋ ಏನೋ ಗೊತ್ತಿಲ್ಲ, ಹೂಗಳನ್ನು ನೋಡಿದಾಗಲೆಲ್ಲ ನನಗೆ ಕನಿಕರವೆನಿಸುತ್ತದೆ. ಅನುಕಂಪದ ಭಾವ ಒಸರತೊಡಗುತ್ತದೆ. ಆವತ್ತೇ ಹುಟ್ಟಿ, ಆವತ್ತೇ ಸಾಯುವ ಈ ಕ್ಷಣಿಕ ಸುಂದರಿಯರನ್ನು ಮನುಷ್ಯರಾದ ನಾವು ಅದೆಷ್ಟು ನಿರ್ದಯವಾಗಿ ನಡೆಯಿಸಿಕೊಳ್ಳುತ್ತೇವಲ್ಲ, ಎಂದು ಬೇಸರಿಸಿಕೊಳ್ಳುತ್ತೇನೆ.

'ನಮ್ಮೊಡನಿದ್ದೂ ನಮ್ಮಂತಿರದಿದ್ದರೆ ಹೇಗೆ?' ಎಂಬ ನಮ್ಮ ಹರೋತ್ಸಾಹಕ್ಕೆ ಈ ಕುಸುಮ ಕನ್ಯೆ ನಲುಗುತ್ತಿರಬೇಕು. ನಮ್ಮ ನಾಗರಿಕ ಬದುಕಿನ ಎಡಸುಪೆಡಸುಗಳನ್ನು, ಅನಿಷ್ಟ-ಕನಿಷ್ಟಗಳನ್ನೆಲ್ಲ ಒಂದೂ ಬಿಡದೆ ಈ ಕನ್ಯೆಯ ಮೇಲೆ ಹೇರಿದ್ದೇವಲ್ಲ. ಇವೆಲ್ಲವನ್ನು ನೋಡಿಯೇ ಇರಬೇಕು. ಹೂಗಳನ್ನು ಕಂಡಾಗ 'ಅಯ್ಯೋ ಪಾಪ' ಎಂದು ಲೊಚಗುಟ್ಟುವಂತಾಗುತ್ತದೆ. ಹೀಗೆ ಅನುದಿನವೂ ಅತ್ಯಾಚಾರ ನಡೆಯುತ್ತಿದ್ದರೂ, ತಾನು ಮಾತ್ರ ಮುಖ ಗುಗ್ಗಳ ಮಾಡಿಕೊಳ್ಳದೆ, ಸದಾ ಹೂನಗೆ ಚೆಮ್ಮಿಸುವ 'ಹೂವಮ್ಮ' ನಿಜಕ್ಕೂ ಹಿರಿಗುಣವುಳ್ಳ ನಮ್ಮಮ್ಮ.

ತಪ್ಪು ಮಾಡಿದ ತನ್ನ ಲೋಕದವರನ್ನು ಒಂದು ಲೈಫ್ ಟರ್ಮ್ ಭೂಲೋಕಕ್ಕೆ ಅಟ್ಟುವದು ಆ ದೇವರಿಗೆಲ್ಲ ಮಾಮೂಲು ತಾನೆ! ಹಾಗೆಯೇ ಆ ದೇವರ ಶಾಪಕ್ಕೆ ಬಲಿಯಾಗಿ, ಪಾಪ ಪರಿಹಾರಾರ್ಥವಾಗಿ ಇಲ್ಲಿಗೆ ಬಂದಿರುವ ದೇವತೆಗಳೇ ಈ ಹೂಗಳಿರಬೇಕು. ನಗು ನಗುತ್ತಲೇ ಶಿಕ್ಷೆ ಅನುಭವಿಸಿ, ಆದಷ್ಟು ತುರ್ತಾಗಿ ಹಾರಿ ಹೋಗುವ ಗರ್ಜು ಅವಕ್ಕಿರಬೇಕು. ಆ ನಂತರ ಈ ಪುಷ್ಪ ಸಂಕುಲ ನಭೋ ಮಂಡಲದಲ್ಲಿ ಮಿನುಗು ತಾರೆಗಳಾಗಿ ಕಂಗೊಳಿಸುತ್ತಿವೆಯೋ ಏನೋ! ಅದೇನಾದರೂ ಇದ್ದೀತು. ನಾವು ಈ ಹೂಗಳ ಮಧ್ಯ

> ದಾಂಪತ್ಯ ಜೀವನದಲ್ಲಂತೂ ಕಂಡಕಂಡಲೆಲ್ಲ ಹೂವೇ ಹೂಗಳು. ಹಾಗೆ ನೋಡಿದರೆ, ಈ ಹೂಗಳ ಸಾಕ್ಷಿಯಲ್ಲಿಯೇ ಅಲ್ಲವೆ ಗಂಡು-ಹೆಣ್ಣುಗಳ ಮೊದಲ ಮಿಲನವಾಗುವದು. ಅವರ ಪ್ರೀತಿಯ ಹೂವು ಅರಳುವದು ಆ ಹೂ-ಹಾಸಿಗೆಯ ಮೇಲೆಯೆ.

ಬದುಕುತ್ತಿದ್ದೇವಲ್ಲ....! ಇದು ನಮ್ಮ ಪುಣ್ಯ.... ಅದು ಭುವನಭಾಗ್ಯವೇ ಸರಿ.

ಈ ಹೂಲೋಕ ಅದೆಷ್ಟು ದೊಡ್ಡದು! ನಮ್ಮೆಲ್ಲರ ಮನೆಗಳ, ಮನಗಳ ಒಳಗೂ ಹೊರಗೂ ತುಂಬಿಕೊಂಡಿದೆ. ಚೋಟುದ್ದ ಗೇಣುದ್ದ, ಆಕಾಶದುದ್ದ! ಕೆರೆಯಿಂದ ಸಾಗರದವರೆಗೆ, ನೆಲತಳದ ಗವಿಯಿಂದ ಗೌರಿಶಂಖರ

ಶಿಖರದವರೆಗೆ ......, ಎಲ್ಲೆಡೆ ಮಗಮಗಿಪ ಕುಸುಮ ರಾಶಿ! 'ಅದೋ ಅಲ್ಲಿ, ಇದೋ ಇಲ್ಲಿ ಪ್ರತ್ಯಕ್ಷ ಸುಮ ಸಾಕ್ಷಿ' ಎಂದು ಕವಿಯೊಬ್ಬರು ಸುಮ್ಮನೇ ಹಾಡಿಲ್ಲ. ಕವಿವರ ಬೇಂದ್ರೆಯವರಂತೂ -




'ಒಂದರೊಳು ಒಂದಿಲ್ಲ, ಒಂದರೊಳು ಕುಂದಿಲ್ಲ, ಒಂದರಾ ಅಂದ ಇನ್ನೊಂದಕ್ಕಿಲ್ಲ.... ಚೆಂದಕ್ಕೆ ಒಂದೇ ಮೈಯ ಸಾಲದೆಂಬಂತೆ ನೂರೊಂದು ಮೈಯಿಂದ ಕುಣಿಯುವದು ಸ್ವಚ್ಛಂದ' ಎಂದು ಆ ಹೂಗಳ ಜತೆಗೆ ಕುಣಿದಾಡುತ್ತಾರೆ. ಅಬ್ಬಬ್ಬಾ....!ಎಷ್ಟೊಂದು ತರತರಹದ ಹೂಗಳು! (ಅವುಗಳಿಗೂ ಕೂಡ ನಾವು ತರ-ತಮ ಭೇದ ಅಂಟಿಸಿದ್ದೇವಲ್ಲ!) ಹೆಸರು ಗೊತ್ತಿರುವವು ಕೆಲವು....ಗೊತ್ತಿರದ ಅನಾಮಧೇಯಗಳೂ ಹಲವಾರು.

ನಮ್ಮ ಮನುಷ್ಯ ಬುದ್ಧಿ ಎಲ್ಲಿ ಹೋಗುತ್ತದೆ! ಈ ಹೂರಾಶಿಗಳಲ್ಲೂ ನಾವು ಸ್ಪೃಶ್ಯ - ಅಸ್ಪೃಶ್ಯ, ದಲಿತ- ಬಲಿತ, ಮಂಗಳಕರ- ಅಮಂಗಳಕರ ಎಂದೆಲ್ಲ ಅಡ್ಡಡ್ಡ ಗೆರೆಗಳನ್ನೆಳೆದಿದ್ದೇವೆ. ಬೆಳ್ಳಿ ಹಕ್ಕಿಗಳ ಸಾಲಿನಂತೆ ಕಂಗೊಳಿಸುವ ಆ ಪಾರ್ಥೇನಿಯಂ ಗಿಡದ ಹೂಗಳನ್ನು ಕಂಡರೆ ಅದೇಕೆ ದೂರ ಸರಿಯುತ್ತಾರೊ? ಅದೇ ರೀತಿ ಹಂದಿ ಹೂಗಳೆಂದು ನಮ್ಮ ಗ್ರಾಮಸ್ಥರು ಕರೆಯುವ ಟಿಕ್ಕೆ ಹೂಗಳು, ಮುಟ್ಟುವದಕ್ಕೂ, ಮುಡಿಯುವದಕ್ಕೂ ನಿಷೇಧ. ಈ ತೆರನಾದ ಸಾಮಾಜಿಕ ಬಹಿಷ್ಕಾರ ತರವೆ?

ಮತ್ತೆ, ಚೆಂದದ ಚೆಂಡು ಹೂವಿನದು ಇನ್ನೊಂದು ತರಹದ ನೋವು. ಮನುಷ್ಯರ ಕೊರಳ ಅಲಂಕರಿಸಬಾರದೆಂಬ ಕಟ್ಟಳೆ ಈ ಹೂವಿಗೆ. ಕೇವಲ ದೇವರಿಗೆ ಹಾಗೂ ಹೆಣಕ್ಕೆ ಮಾತ್ರ ಈ ಮೀಸಲಾತಿ. ಇದೆಲ್ಲ ನನಗೆ ಗೊತ್ತಿರಲಿಲ್ಲ. ಒಂದು ಸಲ, ಆಗಿನ್ನೂ ನಾನು ಹುಡುಗ, ನಮ್ಮೂರಿಗೆ ಬಂದಿದ್ದ ಸ್ವಾಮೀಜಿಯೊಬ್ಬರಿಗೆ ಭಕ್ತಿಯಿಂದ ಅರ್ಪಿಸಲೆಂದು ಚೆಂಡು ಹೂವಿನ ಮಾಲೆ ಕೈಯಾರೆ ತಯ್ಯಾರಿಸಿದ್ದೆ. ಇನ್ನೇನು ಸ್ವಾಮೀಜಿಯ ಕೊರಳನ್ನು ಅದು ಅಲಂಕರಿಸಬೇಕು.... 'ಕೂಡದು.... ಕೂಡದು....' ಎಂದು ಮಹಾಚಿತ್ತ ಕೈ ಎತ್ತಿ ಕೂಗಿತು. ಇದನ್ನು ಗಮನಿಸಿದ ಹಿರಿಯರೊಬ್ಬರು, ಕೈಹಿಡಿದು ನನ್ನನ್ನು ಬೇರೆ ಕಡೆ ಕರೆದುಕೊಂಡು ಹೋಗಿ, ಚೆಂಡು ಹೂವಿನ 'ಕಳಂಕದ ಕತೆ' ಹೇಳಿದ್ದರು. ಪಾಪ! ಸೌಂದರ್ಯವಿದ್ದರೂ ಇದಕ್ಕೆ ಸೌಭಾಗ್ಯವಿಲ್ಲವಲ್ಲ!

ಛೇ, ಮನುಷ್ಯ ಜನ್ಮವೆ! ತನ್ನಂತೆ ಪರರ ಬಗೆದು ನೋಡುವ ಮನುಷ್ಯರ ರೀತಿಗೆ ಅಸಹ್ಯವೆನಿಸಿತು. ಹೆಂಗಸರು ಹೂವಿನ ಹಾಗೆ ಕೋಮಲರು, ನಯವಾಗಿ ನಾಜೂಕಿನಿಂದ ಇವೆರಡನ್ನು ಬಳಸಬೇಕು, ನಡೆಸಬೇಕು' ಎಂದೆಲ್ಲ ಆ ಮಹಾನುಭಾವ ಕವಿ ಭವಭೂತಿ ಹೇಳಿದ್ದಾನೆ. ಹಾಗಂತ ನಾವು ಇರಲಿಕ್ಕಾದೀತೆ? ಹೇಳಿಕೇಳಿ ನಮ್ಮದು ಸೋಷಿಯಲಿಸ್ಟ್ ಮತ್ತು ಸೆಕ್ಯೂಲರ್ ಸೊಸೈಟಿ. ಅದರರ್ಥ, ಹೇಳೋದು ಒಂದು, ಮಾಡೋದು ಇನ್ನೊಂದು ಇದು ನಮ್ಮ ಸೊಸೈಟಿಯ ಸ್ಪೆಶಾಲಿಟಿ. ಹೆಣ್ಣಿನಂತೆ ಹೂವೂ ಕೂಡ, ಮೈ-ಮನ ಮುದಗೊಳಿಸಲೆಂದು ನಮಗಾಗಿಯೇ ಸೃಷ್ಟಿಯಾಗಿರುವ, ಭೋಗವಸ್ತು. ಇವೆರಡನ್ನು ನಾವು 'ಸಮಾನ ಗೌರವ' ದಿಂದಲೇ ಬಳಸಿಕೊಳ್ಳುತ್ತೇವೆ ಬಿಡಿ.



ಹೌದು ಹೆಣ್ಣಿನ ಹಾಗೆ ಹೂವೂ ಕೂಡ ನಮಗೆ ಅನಿವಾರ್ಯ. ಹುಟ್ಟಿನಿಂದ ಸಾಯುವ ವರೆಗೆ, ತೊಟ್ಟಿಲಿನಿಂದ ಚಟ್ಟದ ಅಲಂಕಾರದವರೆಗೆ, ಹುಟ್ಟು ಹಬ್ಬ, ಮದುವೆ-ಮುಂಜುವೆ, ಸಭೆ ಸಮಾರಂಭಗಳವರೆಗೆ, ಹೂಗಳಿದ್ದರೇನೆ ಇವೆಲ್ಲ ಕಳೆಗಟ್ಟುವದು. ಹೊಟ್ಟೆಗೆ ಹಿಟ್ಟು ಕಮ್ಮಿಯಾದರೂ ನಡೆದೀತು. ಜುಟ್ಟಿಗೆ ಮಲ್ಲಿಗೆ ಬೇಕೇಬೇಕು ಎನ್ನುವವರು ನಾವು. ನಿರ್ದಯವಾಗಿ ತಾಯಿ ಬಳ್ಳಿಯಿಂದ ಕಿತ್ತು ತಂದು, ಹರ ಪೂಜೆಗೊ, ಗುರು ಪೂಜೆಗೊ ಅರ್ಪಿಸುವವರು, ಮುನಿದ ಮನದನ್ನೆಯ ಮುಡಿಗೇರಿಸಿ ಕೃತಾರ್ಥರಾಗುವವರು. ಮಂತ್ರಿ-ಮಹೋದಯರ ಕೊರಳ ಅಲಂಕರಿಸುವ ಹಾರಗಳಿಗೂ ಈ ಹೂಗಳು 'ಹಾರ'ವಾಗಬೇಕೆ? ಅಕಟಕಟಾ! ಚೆನ್ನೆಯರ ಕೆನ್ನೆಗಳ ರಾಗಬಂಧಿಯ ಹಾಗಿರುವ ಈ ಕುಸುಮ ಬಾಲೆಯರ ಮೇಲೆ ಅದೆಂಥ ಘೋರ ಅನ್ಯಾಯ!

ಆದರೂ ಒಂದು ಸಮಾಧಾನ. ಹೂವಿನ ಪಕ್ಷಪಾತಿಯಾಗಿ ಕವಿಗಳಿದ್ದಾರೆ ಸದ್ಯ! ಹೂಗಳೆಂದರೆ ಅವರಿಗೆ ಅದೆಷ್ಟು ಅಕರಾಸ್ತೆ! 'ಶಿವಮಂದಿರ ಸಮ, ವನ ಸುಂದರ ಸುಮ' ಎಂದು ಋಷಿ ಕವಿ ಕುವೆಂಪು, ಹೂಗಳಲ್ಲಿ ದೇವತ್ವ ಕಂಡಿದ್ದಾರೆ. ಇಂತ ಸುಹೃದಯಿ ಕವಿಗಳಿರುವದರಿಂದಲೇ ಅಲ್ಲವೆ ಹೂಕುಲ ಈಗಲು ಕುಲಕುಲು ನಗುತ್ತಿರುವುದು. ಎಷ್ಟೇ ಆಗಲಿ, ಕವಿಗಳದು ಹೂ ಮನಸ್ಸು ನೋಡಿ 'ಚಂದರನ ಚೆಲುವಿಕೆ, ಇಂದರನ ಹೋಲಿಕಿ ಇರುವ ಹೂವೇ....

.... ಮೈ ಹಿಂಗ್, ನಿನ್ನ ಮನ ಹ್ಯಾಂಗ್?' ಎಂದು ಜಾನಪದ ಕವಿಯೊಬ್ಬ ಕೇಳುತ್ತಾನೆ. ಭೋಜರಾಜನ ಆಡಳಿತದಲ್ಲಿ ಎಲ್ಲೆಂದರಲ್ಲಿ ಪುಷ್ಕರಣಿಗಳು. ಆ ಪುಷ್ಕರಣಿಗಳ ತುಂಬೆಲ್ಲ ತಾವರೆಗಳೇ ತಾವರೆಗಳು. ಅಲ್ಲಿ ಬೀಸುವ ಗಾಳಿ ಚೈತ್ರಗಂಧ. ಮೂಗಿಗಡರಿದರೆ ಸಾಕು ಸುಮ-ಸುಗಂಧ, ಆಗ ಎಂಥ ಅರಸಿಕ ಧ್ರಾಬೆ ಕೂಡ ಕವಿಯಾಗುತ್ತಾನೆ. ಇನ್ನು ಕಾಳಿದಾಸನಂಥ ಕವಿ ಮನಸ್ಸು ಸುಮ್ಮನೆ ಇದ್ದೀತೆ! 'ಮೇಘದೂತ'ದಲ್ಲಂತೂ ಕಾಳಿದಾಸ ಕವಿ ಹುಚ್ಚೆದ್ದು ಹಾಡುತ್ತಾನೆ. ತನ್ನ 'ಹೆಣ್ಣು'ಗಳಿಗೆ ಹೂಗಳ ಹೋಲಿಕೆ ಕೊಡುವಲ್ಲಿ, ಆತನ ಕೈ ಹಿಡಿದವರೇ ಇಲ್ಲ.

ಕವಿ ಬೇಂದ್ರೆ ಅದನ್ನೇ ಹೀಗೆ ಕನ್ನಡಿಸಿದ್ದಾರೆ -

**'ಮಾಟ ಕಮಲ ಕೈಯಲ್ಲಿ, ಕರುಳಿನಲ್ಲಿ**
**ಬಾಲಕುಂದ ಮಾಲೆ,**
**ರೋಧ್ರ ಪುಷ್ಪಗಳ ಸೂಸು ಹುಡಿಯು**
**ಚೆಲುವಾದ ಮೊಗದ ಮೇಲೆ,**
**ಚೆಲುವ ಕುರುಬಕವು ಹೆರಳಿನಲ್ಲಿ**
**ಶಿರಸಲವು ಕಿವಿಯಬಳಿಗೆ'**

ಹೆಣ್ಣಿನ ಹಾಗೆ ಹೂಗಳಿಗೂ ಹೊಗಳಿಕೆ ಇಷ್ಟವಾದುದೆ. ಹೆಣ್ಣಿನ ಅಂಗಾಂಗಗಳಿಗೆಲ್ಲ ಪ್ರತಿಮೆಯಾಗಿ ನಿಲ್ಲುತ್ತವೆ ಹೂಗಳು. ಉದಾ : ಅವಳ ಕಿವಿ ಕಮಲ, ಸಂಪಿಗೆಯ ಮೂಗು, ಬಾಯಿ ಕಮಲ.... ಅವಳು ಕಮಲಾಕ್ಷಿ! ಇವೆರಡರಲ್ಲಿ ಈ ಹೊಗಳಿಕೆಯಿಂದ ಯಾರು ಧನ್ಯರಾಗಿದ್ದಾರೆಯೋ ಹೇಳಲಿಕ್ಕಾಗದು. ನಮ್ಮ 'ಎಂಡ್ಕುಡುಕ ರತ್ನ'ನಿಗೂ ಹೂಗಳ ಹುಚ್ಚುಬಿಟ್ಟಿಲ್ಲ. ಆತನಿಗೆ 'ಎಣ್ಣೆಂದರೆ ಊ ಇದ್ದಂಗೆ' ಅವನ ಪುಟ್ನಂಜಿಯೋ, 'ಆಲಿನಲ್ಲಿ ತೇಲಿಬಿಟ್ಟ ಕಮಲ'. ಮತ್ತೆ ಜಾನಪದ ಗರತಿಗೂ ಹೂವಿನ ಗುಂಗು. 'ಕಮಲದ ಹೂವೆ ನಿನ್ನ ಕಾಣದೆ ಇರಲಾರೆ, ಮಲ್ಲಿಗೆಯ ಮಾಯೆ ಬಿಡಲಾರೆ' ಎನ್ನುವ ಆಕೆಗೆ, ಅಲ್ಲೆಲ್ಲ ಶಿವನೇ ಕಾಣುತ್ತಾನೆ. 'ಮೊಗ್ಗ್ಯಾಗ ಕಣ್ಣ ತಗದಾನ, ಮಾಲ್ಯಾಗ ಮನಗ್ಯಾನ, ಹೂವಿನಾಗ ಹುದಗ್ಯಾನ' ಎಂದೆಲ್ಲ ಆಕೆ ಶಿವನಿರುವ ತಾಣ ಬಣ್ಣಿಸುತ್ತಾಳೆ.

ದಾಂಪತ್ಯ ಜೀವನದಲ್ಲಂತೂ ಕಂಡಕಂಡಲೆಲ್ಲ ಹೂವೇ ಹೂಗಳು. ಹಾಗೆ ನೋಡಿದರೆ, ಈ ಹೂಗಳ ಸಾಕ್ಷಿಯಲ್ಲಿಯೇ ಅಲ್ಲವೆ ಗಂಡು-ಹೆಣ್ಣುಗಳ ಮೊದಲ ಮಿಲನವಾಗುವದು. ಅವರ ಪ್ರೀತಿಯ ಹೂವು ಅರಳುವದು ಆ ಹೂ-ಹಾಸಿಗೆಯ ಮೇಲೆಯೆ. ಅಡಗೋಲಜ್ಜಿಯ ಕತೆಗಳ ನಾಯಕಿ, ಸಪ್ತ ಸಮುದ್ರದಾಚೆಯ ನಾಡಿನ ಆ ರಾಜಕುಮಾರಿ - 'ಬರೀ ಏಳುಮಲ್ಲಿಗೆಯ . ತೂಕದ' ನಾಜೂಕಿನ ನಾರಿಯಂತೆ 'ಪಿರುತಿ ಮಲ್ಲಿಗೆಯಂಥಾಕಿ, ನೀ ಬೆಲ್ಲದಂತಾಕಿ' ಎಂದೆಲ್ಲ ಹಾಡುತ್ತ ತನ್ನ ಸುತ್ತಲೇ ಸುತ್ತುವ 'ಗಂಡುದೊರೆ'ಯ ನೋಡಿದ ಆ ಹೆಣ್ಣು ಜೀವನಕ್ಕೆ ಸ್ವರ್ಗ ಮೂರೇಗೇಣು!

ಆದರೆ ಈ ಗಂಡಿನ ಪ್ರೇಮಕ್ಕೋ... ಗುಂಗಿಯ ಹುಳದ ನಿಯಮ. ಅಂಗಿಯ ಮೇಲೊಂದು, ಮತ್ತೊಂದು ಅಂಗಿಗಳ ಬಯಸುತ್ತದೆ. ಈ 'ಗಂಡುಗುಂಗಿ' ಹೂವಿನಿಂದ ಹೂವಿಗೆ ಹಾರಾಟ, ಅದರ ಕೆಟ್ಟ ಚಾಳಿ. 'ಘಮಾ ಘಮಾಡಿಸುವ ಮನೆಯ ಮಲ್ಲಿಗೆ' ಬಿಟ್ಟು, ಹಾದಿಬದಿಯ ಹೂಗಳತ್ತಲೇ ಅವುಗಳ (ಆ) ಗಮನ.

ಒಂದು ಸಲ ಪಾಂಚಾಲಿಗೆ ಸೌಗಂಧಿಕಾ ಪುಷ್ಪದ ಆಶೆಯಾಯಿತಂತೆ. ಅದನ್ನು ತರಬಲ್ಲ ಛಾತಿ ಆ ಬಲಭೀಮನ ಬಿಟ್ಟರೆ ಇನ್ನಾರಿಗೆ? ತನ್ನೆಲ್ಲ ಎಗ್ಗಡ ದಿಗ್ಗಡಗಳಿಗೆ 'ಖ್ಯಾತ'ನಾಗಿದ್ದ ಭೀಮ, ಆ ಕೂಡಲೆ ಹೊರಟು ನಿಂತ, ಎದೆಗೆ

ಗದೆಯನೇರಿಸಿಕೊಂಡು. ಅದರಲ್ಲೂ ತನ್ನ ಪ್ರಿಯ ತಳೋದರಿಯ ಮನೀಷೆ ಈಡೇರಿಸುವದೆಂದರೆ, ವೃಕೋದರನಿಗೆ ಎಲ್ಲಿಲ್ಲದ ಹುಮ್ಮಸ್ಸು.

ಸೌಗಂಧಿಕಾ ಪುಷ್ಪವೆಂದರೆ, ಅದೇನು ದುರ್ಯೋಧನನ ರುಂಡವೆ, ಚೆಂಡಾಡಿಸಿ ತರಲು!' ದಾರಿಗಡ್ಡವಾಗಿ ಮಲಗಿದ ಮುದಿ ಹನುಮಂತನ ಬಾಲ ಎತ್ತಲಾಗದೆ, ಬೆವರಿಳಿಸಿಕೊಂಡಿದ್ದ. ಅಂತೂ ಹೂವಿಗಾಗಿ ಆತ ಹಣ್ಣಾಗಿ ಹೋದ.



ಇನ್ನು ಇವನ ಬೀಗ ಸಕಲ ಕಲಾ ವಲ್ಲಭ - ಆ ಕೃಷ್ಣ ಪರಮಾತ್ಮನ 'ಹೂವಿನ ನೋವು' ಇನ್ನೊಂದು ಪರಿ. ಪಾರಿಜಾತದ ಹೂವಿಗಾಗಿ ರುಕ್ಮಿಣಿ - ಸತ್ಯಭಾಮೆಯರು ಈ ಪರಮಾತ್ಮನನ್ನು ಪರಿಪರಿಯಾಗಿ ಗೋಳಿಟ್ಟುಕೊಳ್ಳಲಿಲ್ಲವೆ? ತ್ರಿಮೂರ್ತಿಗಳಲ್ಲಿ ಒಬ್ಬನಾದ ವಿಷ್ಣುದೇವನಿಗೂ ಹೂಗಳ ವಾಂಛಲ್ಯ. ಹೊಕ್ಕುಳಲ್ಲಿಯೇ ಹೂ ಅರಳಿಸಿಕೊಂಡು, ಅದರ ಮೇಲೆ ಇರಲೆಂದು ಬ್ರಹ್ಮನಿಗೆ ಜಾಗೆಯನ್ನು ಬಾಡಿಗೆ ಕೊಟ್ಟಿರಬಹುದೆ?

'ಈ ಸೃಷ್ಟಿ ನೂತನ, ಹೂವೆಮ್ಮ ಚೇತನ' ಎಂಬ ಕವಿ ಕಣವಿ ಅವರ ಮಾತುಗಳನ್ನು ಅಲ್ಲಗಳೆಯಲಾಗದು. ಅವು ಪ್ರಕೃತಿ ಮಾತೆಯ ಚೊಚ್ಚಲು ಮಕ್ಕಳು. ಹೊಲದಲ್ಲಿ ಬೆಳೆಯುವ ಹೂಗಳಿಗಿರುವ ಆ ಸೊಗಸು, ಸೊಲೋಮನ್ ಚಕ್ರವರ್ತಿಯ ವೈಭವದ ದಿರಿಸಿಗೂ ಇಲ್ಲ' ಎಂದು ಕ್ರಿಸ್ತ ಪ್ರಭುವೇ ಅಪ್ಪಣೆ ಕೊಡಿಸಿದ್ದಾನೆ. ಇದು ಉಳಿದವರ ಹೊಗಳಿಕೆ, ಹೋಲಿಕೆಗಳಿಗೆ ಮಿಗಿಲಾದುದು ಎಂಬುದು ನನ್ನ ಗ್ರಹಿಕೆ.

ಸೌಂದರ್ಯದೊಂದಿಗೆ ಸುವಾಸನೆಯೂ ಇದ್ದರೆ ಅದು ಹೂವಿಗೆ ಬೋನಸ್ ಪಾಯಿಂಟಾಗುತ್ತದೆ. ಬರೆಯುವ ಕವಿಗೆ ಮಧುರ ಕಂಠವಿದ್ದಂತೆ, ಬ್ಯಾಟ್-ಬಾಲ್‌ಗಳೆರಡರಲ್ಲೂ ಸಿದ್ಧಿ ಇರುವ ಕ್ರಿಕೆಟಿಗನಿದ್ದಂತೆ. ಇಂಥ ಹೂಗಳು ತಾನೆ, ನೋಡಿದವರಿಗೆ ಮೋಡಿ ಹಾಕುವುದು! ಕ್ಷಣಿಕಾಯುಷಿಯಾಗಿದ್ದರೂ, ಬ್ರಹ್ಮ ಕಮಲವನ್ನೇ ನಾವು ಬಯಸುತ್ತೇವೆ.

ವಿದೇಶಿ 'ಗಣ್ಯ ಮಹಿಳೆ'ಯಾದ 'ಗುಲಾಬಿ'ಗಂತೂ ಸುತ್ತಲೂ ಅಂಗರಕ್ಷಕರಾಗಿ ಕಾಯುವ ಮುಳ್ಳು ಸೇನೆ ಇದೆ. (ಎಷ್ಟೇ ಆಗಲಿ ಈಕೆ ಹೂಗಳ ರಾಣಿ ಅಲ್ಲವೆ!?) ಮೊಗಲ ಬಾದಷಾ ಜನಾನದ ತುಂಬೆಲ್ಲ ವೈಯಾರದಿಂದ ಓಡಾಡಿದವಳು ಈ ಗುಲಾಬಿ. ಯವನ ಸುಂದರಿ ನೂರ್‌ಜಹಾನಳಿಗೆ ಹುಚ್ಚು ಹಿಡಿಸಿದವಳು. ತನ್ನ ಬಣ್ಣ, ಮಾಟ, ಕಂಪುಗಳಿಂದ ಮನಕ್ಕೆ ತಂಪನ್ನೀಯುವವಳು.

ಇನ್ನು ಮಲ್ಲಿಗೆಯೋ, ಮೌನವೇ ಬಂಗಾರ ಎನ್ನುವವಳು. 'ಬಿರಿಗಣ್ಣ ಮಲ್ಲಿಗೆಯೆ, ಸರಿಯೆ ನಿನಗೀ ಮೌನ?' ಎನ್ನುವ ಕವಿಗೆ, 'ಹಾದಿಹೋಕರು ನಸುವೆ ನೋಡಬಹುದಲ್ಲ ಹೊರಳಿ' ಅಷ್ಟೇ ಸಾಕು, ಎಂಬರ್ಥದಲ್ಲಿ ತಲೆದೂಗುತ್ತಾಳೆ. ಸರ್ವಜ್ಞನಿಗೆ 'ಮಲ್ಲಿಗೆಯ ಹೂ ಲೇಸು, ಬಲ್ಲವರ ಕಳೆ ಲೇಸು' ಈಕೆ ಗುಲಾಬಿಯ ಹಾಗೆ ಯವನ ಸುಂದರಿಯಲ್ಲ 'ನಡು ಯವ್ವನದ ಗಂಭೀರ ಗರತಿ' ಎನ್ನುತ್ತಾರೆ, ಎ.ಎನ್. ಮೂರ್ತಿರಾಯರು.

ಆದರೂ ಈ 'ಗುಲಾಬಿ-ಮಲ್ಲಿಗೆ'ಯರ ಕಾಂಬಿನೇಶನ್ನು ಅದ್ಭುತವಾದುದು. 'ಈ ಗುಲಾಬಿಯ ಬಣ್ಣ/ಕಣ್ಣ ತಣ್ಣನೆಯ ಬಿಂಬ/ಕೋಮಲತೆಯ ಒಲುಮೆಗಿದು/ತವರು ಜೇನು' (ಚೆನ್ನವೀರ ಕಣವಿ) ಸೌಜನ್ಯ-ಸೌಶೀಲ್ಯಕ್ಕೆ ಹೆಸರಾಗಿರುವ ಮಲ್ಲಿಗೆಯು ನಿಗರ್ವಿ, ಸೀದಾ-ಸಾದಾ. ಮತ್ತೆ ಸದಾ ಹಸನ್ಮುಖಿ. ಕೈಯಲ್ಲಿ ತಕ್ಕಡಿ ಹಿಡಿದುಕೊಂಡು ಸುಮ್ಮನೆ ಯಾಕೆ ಅಳೆಯುವದು? 'ಈ ಮಲ್ಲಿಗೆ ಈ ಗುಲಾಬಿ, ಚೆಲುವಿನೆರಡು ಕಣ್ಣುಗೊಂಬಿ' ಎಂದು ತೀರ್ಪು ಇತ್ತಿದ್ದಾರಲ್ಲ ಕವಿ ಕಣವಿ ಅವರು!

ಸೌಂದರ್ಯ-ಗಾಂಭೀರ್ಯಗಳ ಜತೆ ಲಾವಣ್ಯವನ್ನು ಮೈಗೂಡಿಸಿಕೊಂಡಿರುವ ಕಮಲರಾಶಿಯ ನೋಡಿದಿರಾ! ಕಾಳಿದಾಸನ 'ಕಮಲೋ ಕಮಲೋತ್ಪತ್ತಿ' ನೆನಪಿಗೆ ಬರುವದಿಲ್ಲವೆ! ಕಾಳಿದಾಸನಂತವರ ಕಾವ್ಯೋತ್ಪತ್ತಿಗೆ ಈ 'ಕಮಲಕಾಶಿ'ಯೇ ಕಾವ್ಯ ಗಂಗೋತ್ರಿ. ಹೆಣ್ಣು-ಪ್ರೀತಿ-ಪ್ರೇಮಕ್ಕೆಲ್ಲ ಸಮ ಸಮ ಈ ಕುಸುಮ. ಹುಟ್ಟಿನ ಪರಿಸರ ಎಂಥದ್ದೇ ಇರಲಿ, ಪ್ರತಿಭೆ - ಪ್ರಯತ್ನದಿಂದ ಮೇಲೇರಿ ಬರುವ ನಮ್ಮ ದಲಿತ ಮಕ್ಕಳಂತಿದೆ ಈ ತಾವರೆ. ಅವರ ಕನಸುಗಳ ಮೊಗ್ಗೆಯೊಡೆಯುವದೂ ಇಂಥ ಕೆಸರಲ್ಲಿಯೇ ತಾನೆ!

'ಏಳು ಕಮಲವೆ ನಿನ್ನ
ಯಾವ ಕರ್ಮದಿ ಬಂದು
ಇಂಥ ಕೆಸರಲಿ ಬಿದ್ದೆ?' ಎಂದು ವ್ಯಥೆ ಪಡುವ ಅನುಭಾವ ಕವಿ ಮಧುರಚೆನ್ನರಿಗೆ, ಅದರ ಹೋರಾಟದ ಬದುಕು ಅಚ್ಚರಿ ಮೂಡಿಸಿರಬೇಕು ಕವಿ ಮತ್ತೆ ಕೇಳುತ್ತಾನೆ -

'ಹೇಳು ಕಮಲವೆ ನಿನ್ನ
ಯಾವ ಪುಣ್ಯದಿ ಮತ್ತೆ
ಮೊಗವೆತ್ತಿ ಮೇಲಕ್ಕೆದ್ದೆ?'

ಕೆಸರಿನೊಂದಿಗೆ ಕೆಸರಾಗಿಯೇ ಉಳಿದಿದ್ದರೆ.... ಹೇಳ ಹೆಸರಿಲ್ಲದೇ ಹೋಗುತ್ತಿತ್ತು ಕಮಲ ಪುಷ್ಪ. ಅಲ್ಲವೆ ಮತ್ತೆ ಈ ಕಮಲ ಕೋಮಲೆಯ ಬಾಳು - ಮನುಜರಿಗೆಲ್ಲ ಸ್ಫೂರ್ತಿಗಾಳು.

ಹಾಗೆಲ್ಲಾ ಈ ಹೂಲೋಕವೆಂಬುದು ಒಂದೆ ತೆಕ್ಕೆಗೆ ಸಿಗದಷ್ಟು ಅಗಾಧ ರೂಪಿ. ಅದಕ್ಕೆ ಸಹಸ್ರನಾಮಾವಳಿ! ಇಷ್ಟಿದ್ದೂ ಯಾರಗಮನವನ್ನೂ ಸೆಳೆಯದೆ, 'ಯಾರೂ ತುಳಿಯದ ಹಾದಿಯ ಬದಿಯಲಿ ಮೌನದಿ ನಿಂತು ನಗುವ' ಕಾಡ ಕುಸುಮಗಳೆಷ್ಟೊ! ಯಾವ ಹೆಸರಿನಿಂದ ಕರೆದರೂ ಕುಸುಮ ಕುಸುಮವೆ! 'ಯಾತರದ ಹೂವಾದರೇನು ನಾತರದು ಸಾಲದೆ?' ಎಂದು ಹೂಗಳನ್ನು ಅರಸಿ ಹೋಗದ ಅರಸಿಕರೇ ಇಂದು ಹೆಚ್ಚಾಗಿದ್ದಾರೆ. ಹರಿಹರನ ಹಾಗೆ 'ಕುಸುಮ ರಗಳೆ'ಯನ್ನು ಇವರ ಮುಂದೆ ಹಾಡಿದಿರೊ - 'ಸಾಕು ನಿಲ್ಲಿಸು ಮಹರಾಯಾ ನಿನ್ನ ಬೊಗಳೆ' ಎಂದು ನಮ್ಮ ಬಾಯಿ ಬಡೆಯುತ್ತಾರೆ. ಹೂವಿನ ವಾಸನೆಗೆ ಮೂಗು ಮುಚ್ಚುವ 'ಮೀನುಗಾರ್ತಿ'ಯರ ದಂಡದ ಅವಜ್ಞೆ-ಅನಾದರ ಒಂದೆಡೆ, ಹೂವ ಕಂಡರೆ ಸಾಕು, ಅದನ್ನು ಹರಿದು, ಹರಿಯ ಅಡಿಗೊ, ನಾರಿಯ ಕಡೆಗೂ ('ಗಲ್ಲಿಗೇ') ಏರಿಸಿ ಕೊಲ್ಲುವವರ ಪಡೆ ಇನ್ನೊಂದೆಡೆ. ಇವರಾರೂ ಹೂವನ್ನು ಹೂವನ್ನಾಗಿ ನೋಡುತ್ತಿಲ್ಲ ಎಂಬುದೇ ನನ್ನ ಸಂತಾಪ.

ಹೀಗೆಲ್ಲ ನಮ್ಮ 'ಭವಭಾರ' ಹಗುರಗೊಳಿಸುತ್ತಿರುವ ಹೂಲೋಕಕ್ಕೆ ಮೆಚ್ಚುಗೆಯ ಒಂದು ಮುಗುಳ್ನಗೆ ನಾವು ನೀಡಿದರೆ ಸಾಕು, ಸಾರ್ಥಕವಾದೀತು ಜನ್ಮ - ಇಬ್ಬರದೂ.

■

## ಅಧಿಕಾರಿಯೋ ? ರಾಜಕಾರಣಿಯೋ ?

ಜೇಸುದಾಸ್ ಸೀಲಂ ಕರ್ನಾಟಕ ಕೇಡರ್‌ಗೆ ಸೇರಿದ ಐಎಎಸ್ ಅಧಿಕಾರಿ. ಕಳೆದ ಸಾರ್ವತ್ರಿಕ ಚುನಾವಣೆ ವೇಳೆ ಹುದ್ದೆಗೆ ರಾಜೀನಾಮೆ ನೀಡಿದರು. ಆಂಧ್ರದ ಬಾಪಟ್ಲಾ ಕ್ಷೇತ್ರದಿಂದ ಕಾಂಗ್ರೆಸ್ ಅಭ್ಯರ್ಥಿ ಆಗಿ ಸ್ಪರ್ಧಿಸಿ ಸೋತರು.

ಈಗ ಅವರು ರಾಜೀನಾಮೆ ವಾಪಸು ಪಡೆದು ಮರಳಿ ಅಧಿಕಾರಿ ಆಗಲು ಬಯಸಿದ್ದಾರೆ. ಅವರು ಸಲ್ಲಿಸಿದ ಅರ್ಜಿಯನ್ನು ಮುಖ್ಯಮಂತ್ರಿ ಕೃಷ್ಣ ಕೂಡ ಅಂಗೀಕರಿಸಿದ್ದಾರೆ.

ಆದರೆ ರಾಜೀನಾಮೆ ಸಲ್ಲಿಸಿ ಮೂರು ತಿಂಗಳಾದ ಮೇಲೆ ಅದನ್ನು ವಾಪಸು ಪಡೆಯುವುದು ಸಾಧ್ಯ ಆಗಲಾರದು ಎಂದು ಅಧಿಕಾರಿಗಳು ಹೇಳುತ್ತಿದ್ದಾರೆ.

# ಮರಗಳ ಮರ್ಮರ



ಸಸಿ ನೆಟ್ಟು ಮರ ಬೆಳೆಸುವುದು ಈಗ ಸರ್ಕಾರದ ಕೆಲಸ. ಸರ್ಕಾರದ ಕೆಲಸ ದೇವರ ಕೆಲಸ. ಹೀಗಾಗಿ ಮನುಷ್ಯರು ಅದಕ್ಕೂ ತಮಗೆ ಸಂಬಂಧ ಇಲ್ಲವೆಂಬಂತೆ ಇರುವುದೇ ಹೆಚ್ಚು. ತನ್ನ ಮುಂದಿನ ತಲೆಮಾರಿಗಾಗಿ ಮರದ ಸಸಿ ನೆಡುತ್ತಿದ್ದ ಹಣ್ಣು ಹಣ್ಣು ಮುದುಕನನ್ನು ಕಂಡ ರಾಜನೊಬ್ಬ ಬಹುಮಾನಿಸಿದ್ದು ನಮ್ಮ ಪಾಲಿಗೆ ಕೇವಲ ರಂಜನೀಯ ಕತೆ. ಮರ ಗಿಡಗಳಿಂದ ದೂರವಾಗಿ ಕಾಂಕ್ರೀಟು ಕಾಡುಗಳ ಬಿಲದಲ್ಲಿ ನೆಮ್ಮದಿ ಪಡೆಯಲು ಯತ್ನಿಸುವ ನಾವೂ ಒಂದು ದಿನ ವಾಸ್ತವಕ್ಕೆ ಕಣ್ಣು ತೆರೆಯಬೇಕಾದ ಕಾಲ ಬರುತ್ತದೆ. ಆದರೆ ತೀರಾ ತಡವಾಗಿ ಕಣ್ಣು ತೆರೆದರೂ ಅಪಾಯ....

ಉತ್ತರ ಕರ್ನಾಟಕದ ಬಯಲು ಪ್ರದೇಶಕ್ಕೆ ಆಗಾಗ ಹೋಗುವುದಿರುತ್ತದೆ. ಹಾಗೆ ಹುಬ್ಬಳ್ಳಿ, ಕಲಬುರ್ಗಿ, ಬಳ್ಳಾರಿಯಂಥ ಕಡೆ ಹೋದಾಗ ಧಗೆ ನನ್ನನ್ನು ಕಂಗೆಡಿಸುತ್ತದೆ. ಬಹಳ ವರ್ಷ ಬೆಂಗಳೂರಲ್ಲಿ ಇದ್ದುದೇ ಇದಕ್ಕೆ ಕಾರಣ ಅನ್ನಿಸುತ್ತದೆ. ಹಾಗೆ ನೋಡಿದರೆ ಈಚಿನ ವರ್ಷಗಳಲ್ಲಿ ಬೆಂಗಳೂರೂ ಬದಲಾಗಿದೆ. ಇಪ್ಪತ್ತು ವರ್ಷದ ಹಿಂದೆ ನವೆಂಬರ್‌ನಿಂದ ಫೆಬ್ರವರಿವರೆಗೆ ಸ್ವೆಟರ್ ಇಲ್ಲದೆ ಹೋಗುವುದು ಸಾಧ್ಯವೇ ಇರಲಿಲ್ಲ. ಆ ತಿಂಗಳುಗಳಲ್ಲಿ ಬೆಳಗಿನ ಹೊತ್ತು ಮಂಜು ಮುಸುಕುವುದು ತೀರಾ ಸಾಮಾನ್ಯವಾಗಿತ್ತು. ಈಗ ಅದೇ ಕಾಣೆಯಾಗಿದೆ. ಆದರೂ ಬೇರೆ ಊರುಗಳಲ್ಲಿನಷ್ಟು ಧಗೆ ಇಲ್ಲಿ ಕಾಡುವುದಿಲ್ಲ.

ವರ್ಷದ ಹಿಂದೆ ಡಿಸೆಂಬರಿನಲ್ಲಿ ಕಲ್ಬುರ್ಗಿಗೆ ಹೋದಾಗ, ಬೆಂಗಳೂರಿನ ಬೇಸಿಗೆ ಹಾಗೆ ಅಲ್ಲಿ ರಣ ಬಿಸಿಲು. ನಾವು ಇರುತ್ತಿದ್ದ ಎಂ.ಎಸ್.ಕೆ ಮಿಲ್ ರಸ್ತೆಯಲ್ಲಿ ಆಗಲೀ, ಸುತ್ತಮುತ್ತ ಆಗಲಿ ಮರಗಳೆಂಬುವೇ ಕಾಣೆ. ಯಾಕೆ ಹೀಗೆ ಎಂದು ಅಲ್ಲಿನ ಒಬ್ಬರನ್ನು ಕೇಳಿದರೆ ''ಇಲ್ಲಿ ಮರಾಗಿಡಾ ಏನೂ ಬೆಳ್ಯೂದಿಲ್ಲ ರೀ'' ಎಂದು ಹುಳ್ಳಗೆ ಮುಖ ಮಾಡಿದರು. ಹೊರಡುವ ಮುಂಚೆ ಅಲ್ಲಿನ ಸುಪ್ರಸಿದ್ಧ ದರ್ಗಾಕ್ಕೆ ಹೋಗಿದ್ದೆ. ಇಡೀ ಆವರಣ ಆವರಿಸಿ ನಿಂತ ಬೃಹತ್ತಾದ ಬೇವಿನ ಮರಗಳು. ಇಡೀ ಪ್ರದೇಶ ಎಷ್ಟೊಂದು ತಂಪಾಗಿತ್ತು ಅಂದರೆ, ನಡು ಮಧ್ಯಾಹ್ನದಲ್ಲಿಯೂ ಅಲ್ಲಿ ನೆಲದ ಮೇಲೆ ಹಾಯಾಗಿ ಜನ ಉರುಳಿಕೊಂಡಿದ್ದರು. ''ಇಲ್ಲೇನೂ ಗಿಡ ಮರ ಬೆಳೆಯೋದಿಲ್ಲ ಅಂತೀರ. ಇಲ್ಲಿ ನೋಡಿದರೆ ಇಷ್ಟು ಛಂದಾಗಿ ಬೇವಿನ ಮರಗಳು ಬೆಳೆದಿವೆ. ಇಂಥದ್ದು ಊರೊಳಗೆ ಹಾಕಿದರೆ ಇಷ್ಟೊಂದು ಬಿಸಿಲು ಕಾಡೋದಿಲ್ಲ ಅನ್ನಿಸುತ್ತೆ'' ಅಂದೆ.

''ಸರ್ಕಾರ ಮಂದಿ ಯಾವುದರೆs ಗಿಡ ಹಚ್ಚಿ ಹೋಗುತ್ತಾರೆ. ನೀರು ಸಿಗಾದಿಲ್ಲ. ಅವು ಮೈ ಬಡಾದರಾಗೆ ದನಾ ಪನಾ ತಿಂದು ಹೋಗತಾವರೀs'' ಎಂದು ತಮ್ಮ ಅಸಹಾಯಕತೆ ಹೇಳಿಕೊಂಡರು.

ಹುಬ್ಬಳ್ಳಿಯಲ್ಲೂ ಸರಿ ಸುಮಾರು ಇದೇ ಉತ್ತರ. ಜೊತೆಗೆ ಅವರು ನನ್ನ ಮೇಲೇ, ನಾನೇ ಏನೋ ಅವರಿಗೆ ಅನ್ಯಾಯ ಮಾಡಿದ್ದೇನೆಂಬಂತೆ,

''ನೀವು ಬೆಂಗಳೂರು ಮಂದಿ ಬಿಡರಿ ಆರಾಮಿರತೀರಿ. ನಿಮಗೆಲ್ಲಾ ಮನಿ ಬಾಗಲಾಗೇ ಸಿಗತದ. ಸರ್ಕಾರಾನೇ ನಿಮದೈತೆ. ನಿಮಗೆಲ್ಲ ಇತಲಾಗಿನ ಊರು ಊರನಿಸೋದೇ ಇಲ್ಲ. ಮಂದಿ ಮಂದೀ ಹಂಗ ಕಾಣೋದಿಲ್ಲ'' ಎಂದು ರೇಗಿಬಿಟ್ಟರು.

ನನಗಾಗ ಎಂಬತ್ತರ ದಶಕದಲ್ಲಿ ಬೆಂಗಳೂರಲ್ಲಿ ಮರ ನೆಡುವ ಆಂದೋಳನವೇ ನಡೆದದ್ದು ನೆನಪಾಯಿತು. ನಾವಿರುವ ಮಲ್ಲೇಶ್ವರದಲ್ಲಿ ಕಾಲೇಜು ಹುಡುಗರು ನೆಟ್ಟ ಸಸಿ ಬೆಳೆಯಲು ನೀರೆರೆಯುತ್ತಿದ್ದರು. ಅದಕ್ಕಾಗಿ ಅವರು ಆಚೀಚಿನ ಮನೆಗಳಲ್ಲಿ ನೀರು ಬೇಡುತ್ತಾ ಇದ್ದುದು, ಕುಡಿಯುವ ನೀರು ನಲ್ಲಿಯಲ್ಲಿ ಸಿಗುವುದೇ ಕಷ್ಟ ಎನಿಸುತ್ತಿದ್ದ ಆ ದಿನಗಳಲ್ಲಿ, ಮನೆಯ ಹೆಂಗಸರು ಗಿಡಗಳಿಗೆ ನೀರೆರೆಯಲು ಸ್ವಲ್ಪವಾದರೂ ನೀರು ತಂದು ಕೊಡುತ್ತಾ ಇದ್ದುದು ನೆನಪಾಯಿತು. ಹಾಗಾಗಿಯೇ ಇಂದು ಬೆಂಗಳೂರಿನ ಬಹುಪಾಲು ಕಡೆ ಮರಗಳ ಸಂಖ್ಯೆ ಉಳಿದಿದೆ. ಕೆಲವು ಕಡೆ ಹೆಚ್ಚಾಗಿದೆ. ಆಗಂತೂ ಹೊಸದಾಗಿ ಆಗುತ್ತಿದ್ದ ಬಡಾವಣೆಗಳಲ್ಲಿ ಕಾಡು ಬಾದಾಮಿ, ಕ್ಯಾಸರೀನೂ, ಅಶೋಕಾ, ಜಕಾರಾಂಡದಂಥ ಗಿಡ ನೆಟ್ಟು ಬೆಳೆಸಿದ ಪರಿಣಾಮವಾಗಿ ಈ ಹತ್ತು ಹದಿನೈದು ವರ್ಷ ಕಳೆಯುತ್ತಾ ಬಂದಿರುವಾಗ ಮರಗಳು ಸೊಂಪಾಗಿ ನಿಂತಿವೆ. ವಿಜಯನಗರ, ಆರ್.ಪಿ.ಸಿ.ಲೇಔಟ್, ಜೆ.ಪಿ.ನಗರ, ಕೋರಮಂಗಲ ಮುಂತಾದೆಡೆ ಕಣ್ಣಿಗೆ ಮುದ ನೀಡುವಷ್ಟು ಸೊಂಪಾಗಿ ಬೆಳೆದು ನಿಂತಿವೆ. ಇದೆಲ್ಲ ನೋಡುವಾಗ ಬೇರೆ ಊರುಗಳವರು ಹೇಳುವುದೆಲ್ಲ ಕುಂಟು ನೆಪದ ಹಾಗೆ ಕಾಣುತ್ತಿದೆ.

ಬೇರೆ ಊರುಗಳಿಗೆ ಹೋದಾಗ ಅಲ್ಲಿ ಮರಗಳಿಲ್ಲದೇ ಬೋಳು ಬೋಳಾಗಿ ಕಾಣುತ್ತಿದ್ದುದು, ಮುಖ್ಯವಾಗಿ ಬೆಳಿಗ್ಗೆ ನಾನೆದ್ದು ವಾಕಿಂಗ್ ಹೋಗುವಾಗ ಮನಸ್ಸಿಗೆ ಪಿಚ್ಚೆನಿಸುತ್ತಿತ್ತು. ಒಂದಿಷ್ಟು ಧಗೆ. ಅಲ್ಲೇನು ನಾನು ನೆಲಸ ಮಾಡಬೇಕಾಗಿಲ್ಲವಲ್ಲ ಅಂದುಕೊಳ್ಳುತ್ತಿದ್ದೆ. ಹಾಗಾಗಿ ಬೆಳಗಾವಿಯಂಥ ನಗರದ ಬಗ್ಗೆ ಮೆಚ್ಚುಗೆಯಿಂದ ಮಾತಾಡುತ್ತಿದ್ದೆ.

ಹೀಗೆ ಮಾತಾಡುತ್ತಿದ್ದಾಗ, ಅರಣ್ಯಶಾಸ್ತ್ರದ ಬಗ್ಗೆ ತಿಳಿದುಕೊಂಡಿರುವ ಹಿರಿಯರೊಬ್ಬರು, "ಇದು ಕೇವಲ ಸೌಂದರ್ಯ, ಒಂದಿಷ್ಟು ವಾತಾವರಣ ತಂಪಾಗಿಸೋ ವಿಷಯ ಅಲ್ಲ...." ಎಂದು ಹೇಳಿದರು. ಅವರ ಜೊತೆ ಮಾತಾಡುತ್ತಾ ನನಗೆ ಗೊತ್ತಿರದಿದ್ದ ಹಲವಾರು ವಿಷಯಗಳು ತಿಳಿದವು. ಈಚಿನ ದಿನಗಳಲ್ಲಿ 'ನಗರ ಅರಣ್ಯೀಕರಣ' ಎಂಬುದೇ ಒಂದು ಪ್ರಮುಖ ವಿಭಾಗವಾಗಿ ರೂಪುಗೊಳ್ಳುತ್ತಾ ಇದೆ. ನಗರಗಳಲ್ಲಿ ಹೆಚ್ಚುತ್ತಿರುವ ಕಾರ್ಖಾನೆ, ವಾಹನಗಳ ಧೂಳು, ಶಬ್ದ ತಡೆಯಲಿಕ್ಕೂ ಮರಗಳು ಬೇಕೇ ಬೇಕು. ಇದನ್ನು ಮನಗಂಡು ಹಲವೆಡೆ ಯಶಸ್ವಿ ಪ್ರಯೋಗ ನಡೆದಿವೆ.

ಗುಜರಾತ್‌ನ ರಾಜಧಾನಿ ಗಾಂಧೀ ನಗರದಲ್ಲಿ 1989ರಲ್ಲಿ ಮೊದಲು ಸಸಿ ನೆಡುವ ಕಾರ್ಯ ಆರಂಭಗೊಂಡಿತು. ಆರು ವರ್ಷದಲ್ಲಿ ನಗರದ ಶೇಕಡಾ 14ರಷ್ಟು ಪ್ರದೇಶದಲ್ಲಿ ಮರಗಳು ಬೆಳೆದು ನಿಂತವು. ಇದರಿಂದಾಗಿ ಅಲ್ಲಿನ ವಾತಾವರಣದ ತಾಪಮಾನ ಸರಾಸರಿಯಾಗಿ ನಾಲ್ಕು ಡಿಗ್ರಿ ಸೆಲ್ಷಿಯಸ್‌ನಷ್ಟು ತಗ್ಗಿತು. ಅಷ್ಟೆ ಅಲ್ಲ ವಾರ್ಷಿಕ ಸರಾಸರಿ ಮಳೆ ಐವತ್ತು ಮಿಲಿಮೀಟರ್‌ನಷ್ಟು ಹೆಚ್ಚಾಗಿದೆ. ಅಲ್ಲಿನ ತೋಟಗಾರಿಕೆ ಇಲಾಖೆಯವರಿಗೆ ಇದರಿಂದ ವಾರ್ಷಿಕ ಹಲವಾರು ಲಕ್ಷ ರೂಪಾಯಿಗಳಷ್ಟು ವರಮಾನ ಹೆಚ್ಚಾಗಿದೆ. ಇದರಿಂದ ಪ್ರೇರಿತರಾದ ಅವರು ಈಗಾಗಲೇ ಮತ್ತೆ ಹದಿನೇಳು ಲಕ್ಷ ಸಸಿ ನೆಟ್ಟಿದ್ದಾರೆ. ಇಂಥದ್ದೇ ಒಂದು ಯಶಸ್ವೀ ಪ್ರಯೋಗ ಆಂಧ್ರದ ವಿಶಾಖಪಟ್ಟಣದಲ್ಲೂ ನಡೆದಿದೆ. ಅಲ್ಲಿನ ಉಕ್ಕು ಕಾರ್ಖಾನೆಯ ಬೇಲಿಯುದ್ದಕ್ಕೆ ಮರಗಳು ತಲೆ ಎತ್ತಿ ನಗುತ್ತಿವೆ. ಅಲ್ಲಿನ ಕುಲುಮೆಯೊಂದು ಬೆಂಕಿಯನ್ನು ಸದಾ ಒಡಲಲ್ಲಿ ಇಟ್ಟುಕೊಂಡು ಅಗ್ನಿಗರ್ಭವಾಗಿ ಕುದಿಯುತ್ತಾ ಇರುತ್ತದೆ. ಸದಾ ಮೂರು ಸಾವಿರ ಡಿಗ್ರಿಗೂ ಹೆಚ್ಚಿನ ಉಷ್ಣದಲ್ಲಿ ಕರಗುವ ಉಕ್ಕು ಸುತ್ತಲ ಪರಿಸರಕ್ಕೂ ಒಂದಿಷ್ಟು ಉರಿ ಚಾಚಿದಂತೆ. ಹಾಗಾಗಿ ವಿಶಾಖ ಪಟ್ಟಣಕ್ಕೆ ಕಾಲಿಡುವುದೆಂದರೆ ಬೆಂಕಿಯ ಮನೆಯೊಳಗೆ ನಡೆದಂತೆ. ಈಗ ಕಾರ್ಖಾನೆ ಆವರಣದೊಳಗೆ ರೆಂಬೆ ಕೊಂಬೆ ಚಾಚಿನಿಂತ ಹಲಸು, ಮಾವು, ಬೇವು ತೋಳು ಬೀಸಿ ಬಂದವರ ಕುಶಲ ವಿಚಾರಿಸುತ್ತವೆ. ಬರೀ ಅಲ್ಲಿ ಬೀಳುವ ಬೇವಿನ ಬೀಜ ಹೆಕ್ಕಿ ಕಾರ್ಖಾನೆ ವರ್ಷಕ್ಕೆ ಐದು ಲಕ್ಷ ಸಂಪಾದಿಸುತ್ತದೆ. ಉಕ್ಕಿನ ಕಾರ್ಖಾನೆಯಾಚೆ ಸಮುದ್ರದವರೆಗೆ ಚಾಚಿಕೊಂಡು ಮೈತೆರೆದ ಉಪ್ಪು ನೀರು ತುಂಬಿದ ನೆಲದಲ್ಲೂ ಈಗ ಸಾಲ್ವಡಾರ್ ಗಿಡಗಳು ಮೈಬಿಟ್ಟುಕೊಂಡು ನಗುತ್ತಿವೆ. ಅಲ್ಲಿನ ಉಕ್ಕುವ ಕಡಲು, ರಾಚುವ ಬಿಸಿಲು, ಇದೆಲ್ಲ ಮೀರಿ ಉರಿಬಿದ್ದ ಗೂಡಿನಿಂದ ಧಾವಿಸುವ ಇರುವೆಗಳ ಹಾಗೆ ನಡೆದಾಡುವ ಬಂದರು ಕಟ್ಟೆಯ ಜನ ಎಲ್ಲ ನನಗೆ ತುಂಬಾ ಇಷ್ಟ. ಅಂಥದ್ದರಲ್ಲಿ, ಅಲ್ಲಿಗೊಂದಿಷ್ಟು ತಂಪು ಎರೆಯುವ ಕೆಲಸ ಕಾರ್ಖಾನೆ ಮಾಡುತ್ತಿದೆ ಎಂಬುದೂ ನನಗೆ ಸೋಜಿಗದ್ದಾಗಿ ಕಾಣುತ್ತದೆ.

ಎಲೆಯ ಪದರುಗಳ ನಡುವೆ ನಗರದ ಧೂಳು, ಶಬ್ದ, ಬಯಲು ಗಾಳಿ ಎಲ್ಲ ಬಚ್ಚಿಟ್ಟುಕೊಳ್ಳುವ ಮರ ಎಷ್ಟೊಂದು ಸುಂದರ!

ಈಗಲೂ ನಮ್ಮ ಹಳ್ಳಿಗಾಡುಗಳಿಗಿಂತ ನಗರಗಳಲ್ಲಿ ರಾತ್ರಿ ಹೊತ್ತು ತಾಪಮಾನ ನಾಲ್ಕು ಡಿಗ್ರಿಗಳಷ್ಟಾದರೂ ಹೆಚ್ಚಿರುತ್ತದೆ ಎಂದು ವಿಜ್ಞಾನಿಗಳು ಹೇಳುತ್ತಾರೆ. ಅದು ತಗ್ಗಬೇಕಾದರೆ, ನಮ್ಮ ರಾತ್ರಿಗಳು ಇನ್ನಷ್ಟು ಪ್ರಶಾಂತತೆಯಿಂದ ರಾತ್ರಿಗಳ ನಮ್ಮ ನಿದ್ದೆಗೆ ಮಲುದನಿಯ ಜೋಗುಳ ಹಾಡಬೇಕೆಂದರೆ, ಇನ್ನಷ್ಟು ಮರಗಳು ಬೇಕು.

■ ಮನೋಜ್

**ಕವಿ ರಾಮಚಂದ್ರಶರ್ಮರ ಒಂದು ಕವಿತೆ 'ಪಿಚಕಾರಿ ಮರ'. ದಶಕದ ಹಿಂದೆ ಪಾಲಿಕೆ ಅವರ ಮನೆಯ ಮುಂದೆ ನೆಟ್ಟ ಪಿಚಕಾರಿ ಮರದ ಸಸಿಯನ್ನು ಅವರ ಹೆಂಡತಿ ಸಾಕಿ ಬೆಳೆಸಿದ್ದು ಕಂಡು ಬರೆದ ಕವಿತೆ ಅದು.**

**ರಾತ್ರಿ ಎಲ್ಲ ಮಲಗಿದ ಮೇಲೆ ಸಣ್ಣದೊಂದು ಪಾತ್ರೇಲಿ ನೀರು ಕೊಂಡೊಯ್ದು ಸಸಿಗೆ ಎರೆದು ಬರುತ್ತಿದ್ದರು ಶರ್ಮರ ಹೆಂಡತಿ. ಹೀಗೆ ಮಾಡುವುದು ಯಾರ ಕಣ್ಣಿಗೂ ಕಾಣದಿರಲು ನಾಚಿಕೆ ಕಾರಣವೋ, ತನ್ನಂಥ ಹೆಂಗಸು ಹಾದಿ ಗಿಡಕ್ಕೆ ನೀರೆರೆಯುವುದು ಅಪಹಾಸ್ಯಕ್ಕೆ ಕಾರಣ ಎಂದೋ ಹಾಗೆ ವರ್ತಿಸಿರಬೇಕು.**

**ತಂಪುಂಡು ಬೆಳೆದ ಆ ಪಿಚಕಾರಿ ಮರ ಈಗ ತಲೆ ಎತ್ತಿ ರೆಂಬೆ ಕೊಂಬೆ ಚಾಚಿ ಕಡುಗೆಂಪು ಬಣ್ಣದ ಹೂ ಬಿಡುತ್ತಿದೆ. ರಸ್ತೆಯ ಮಗ್ಗುಲಿಗೆ ಚಾಚಿದ ನೆರಳಲ್ಲಿ ಶರ್ಮರ ಕವಿತೆಯೊಂದು ಅರಳಿದೆ.**



ಪಶ್ಚಿಮದಿಕ್ಕಿಗೆ ತಲೆ ಕೊಟ್ಟು ಪೂರ್ವದೆಡೆ ಕಾಲುಚಾಚಿ ಮಲಗಿರುವ ಬುದ್ಧನ ಈ ಆಕೃತಿಯು ನಾಸ್ತಿಕರಿಗೆ ಶಿಲ್ಪಿಯೊಬ್ಬ ಕಡೆದ ಮಹಾನ್ ಕೃತಿಯಂತೆ ಕಂಡರೆ, ಆಸ್ತಿಕರಿಗೆ ಸಾಕ್ಷಾತ್ ಭಗವಾನ್ ಬುದ್ಧನೇ ತತ್ವ ಪ್ರಸಾರ ಕಾರ್ಯವನ್ನು ನೆರವೇರಿಸುತ್ತಾ ಬಹುದೂರದಿಂದ ಇಲ್ಲಿಗೆ ಬಂದು ಮಾರ್ಗಾಯಾಸದಿಂದ ಮಲಗಿಕೊಂಡನೇನೋ ಎನಿಸುತ್ತದೆ.



# ಬೆಟ್ಟದ ಮೇಲೆ ಮಲಗಿರುವ ಬುದ್ಧ

**ಕ**ಲ್ಬುರ್ಗಿ ಜಿಲ್ಲೆಯ ಶಹಾಪುರ ಇತ್ತೀಚೆಗೆ ಕೃಷ್ಣಾ ನೀರಾವರಿ ಯೋಜನೆಯ ಆಡಳಿತ ಕಛೇರಿ. ಜಿಲ್ಲಾ ಕೇಂದ್ರ ಹಾಗೂ ಇನ್ನಿತರ ವಿವಾದಗಳಿಂದಾಗಿ ಮಾಧ್ಯಮಗಳ ವಸ್ತುವಾಗಿದೆ. ಇದು ಈ ಹಿಂದೆ ಸಗರದ ಬೊಮ್ಮಯ್ಯ, ರಸ್ತಾಪುರದ ಭೀಮಕವಿ. ಶಹಾಪುರದ ಚರಬಸವೇಶ್ವರ ಮಹಾತ್ಮರಿಂದಾಗಿ ಸಾಹಿತ್ಯ, ಸಂಸ್ಕೃತಿ ಮತ್ತು ಧಾರ್ಮಿಕತೆಯ ಸುವರ್ಣಯುಗವನ್ನೇ ಕಳೆದಿದೆ. ಇಂದೂ ಸಹ ಶಹಾಪುರ, ಜೇವರ್ಗಿ ಮತ್ತು ಸುರಪುರಗಳು ಸಗರ ಚಕ್ರವರ್ತಿಯಿಂದಾಗಿ ಸಗರನಾಡೆಂದೆ ಪ್ರಖ್ಯಾತವಾಗಿವೆ. ರಾಷ್ಟ್ರಕೂಟರಿಂದ ಹಿಡಿದು ಹೈದ್ರಾಬಾದಿನ ನಿಜಾಮನವರೆಗೂ ಆಳಿಸಿಕೊಂಡು ಬಂದಿರುವ ಈ ನಗರ ಅನೇಕ ಸಾಂಸ್ಕೃತಿಕ ಬದಲಾವಣೆಗೆ ಒಳಪಟ್ಟಿದೆ. ಈ ಎಲ್ಲಾ ಬದಲಾವಣೆಗಳ ನಡುವೆಯೆ ಅಂದಿನ ಅರಸರ ಆಳ್ವಿಕೆಯ ಸಾಕ್ಷಿಗಳಾದ ಕೋಟೆ - ಕೊತ್ತಲುಗಳು ಐತಿಹಾಸಿಕ ಪ್ರಜ್ಞೆ ಇರದ ಜನರಿಂದಾಗಿ ತನ್ನ ಚೆಲುವನ್ನು ಕಳೆದುಕೊಂಡು ಅಸ್ಥಿ ಪಂಜರವಾಗುತ್ತಿವೆ.

ನಗರದ ಬೀದರ್ - ಬೆಂಗಳೂರು ಮುಖ್ಯ ರಸ್ತೆಯ ಮೂಲಕ ಹಾದು ಹೊರಟರೆ ಕ.ವಿ.ಮಂ. ಕಛೇರಿಯ ಹತ್ತಿರ ಉದ್ದದ ಬೆಟ್ಟಗುಡ್ಡಗಳು ಮತ್ತೆ ಅದರ ಮೇಲೆ ಹಬ್ಬಿರುವ ಸಸ್ಯರಾಶಿ ಕಾಣಿಸುತ್ತದೆ. ಒಂದು ಕಡೆ ಕೋಟೆ - ಕೊತ್ತಲುಗಳು ಕಂಡು ಬಂದರೆ ಮತ್ತೊಂದು ಕಡೆ ಕೆರೆ, ಕೊಳ್ಳ ಪುಷ್ಕರಣಿಗಳು ಕಂಡು ಬರುತ್ತವೆ. ಇವುಗಳನ್ನೆಲ್ಲಾ ಗಮನಿಸುತ್ತಿದ್ದಂತೆ ಆ ಬೆಟ್ಟದಲ್ಲಿ ಏನೋ ಒಂದು ಆಕೃತಿ ಕಂಡಂತಾಗುತ್ತದೆ. ಮತ್ತೇ ಅಲ್ಲೇ ದಿಟ್ಟಿಸಿ ನೋಡಿದಾಗ ಆ ಬೆಟ್ಟಗುಡ್ಡಗಳಲ್ಲಿ ಮನುಷ್ಯಾಕೃತಿಯೊಂದು ಸ್ಪಷ್ಟವಾಗುತ್ತಾ ಹೋಗುತ್ತದೆ. ಥಟ್ಟನೆ ಆ ಆಕೃತಿಯೊಂದು ಎಲ್ಲೋ ನೋಡಿದ್ದೇವೆ ಎಂದೆನಿಸಿ ಮನಸ್ಸಿನಲ್ಲಿ ಮೂಡಿದ್ದ ಅನೇಕ ಆಕೃತಿಗಳೊಂದಿಗೆ ತಾಳೆ ಹಾಕಿ ನೋಡ ತೊಡಗುತ್ತೇವೆ. ಅದು ಗೌತಮಬುದ್ಧನನ್ನು ಹೋಲುತ್ತದೆ. ನಿಜ ಆ ಆಕೃತಿ ಬೇರಾವುದು ಆಗಿರದೆ ಸಾಕ್ಷಾತ್ ಗೌತಮ ಬುದ್ಧನದೇ ಆಗಿದೆ.

ಪ್ರಕೃತಿ ತನ್ನ ಒಡಲಿನಲ್ಲಿ ಏನೆಲ್ಲಾ ರಹಸ್ಯಗಳನ್ನು ಅಡಗಿಸಿಕೊಂಡಿದೆ. ಕೆಲ ರಹಸ್ಯಗಳು ಇತಿಹಾಸದ ಹೊಟ್ಟೆಗೆ ಆಹಾರವಾದರೆ, ಕೆಲವು ತಾವೇ ಇತಿಹಾಸ ವನ್ನು ನಿರ್ಮಿಸಿವೆ. ಪ್ರಕೃತಿಯಲ್ಲಿಯ ಅನೇಕ ವಸ್ತುಗಳು ಪರಿವರ್ತನೆಗೊಂಡು ಕಾಲ ಕಾಲಕ್ಕೆ ಬದಲಾವಣೆಯ ರುಚಿ ಕಾಣುತ್ತಿವೆ. ಆದರೆ ನಗರದ ಬಂಡೆಯ ಮೇಲೆ ಬೆಟ್ಟವಾಗಿ ಮಲಗಿರುವ ಭಗವಾನ್ ಬುದ್ಧನು ಪರಿವರ್ತನೆ ತನಗೆ ಸಂಬಂಧವಿಲ್ಲವೇನೋ ಎಂಬಂತೆ ನಿಶ್ಚಿಂತೆಯಿಂದ ನಿದ್ದೆ ಗೈಯುತ್ತಿದ್ದಾನೆ.

ಪಶ್ಚಿಮದಿಕ್ಕಿಗೆ ತಲೆಕೊಟ್ಟು ಪೂರ್ವದೆಡೆ ಕಾಲುಚಾಚಿ ಮಲಗಿರುವ ಬುದ್ಧನ ಈ ಆಕೃತಿಯು ನಾಸ್ತಿಕರಿಗೆ ಶಿಲ್ಪಿಯೊಬ್ಬ ಕಡೆದ ಮಹಾನ್ ಕೃತಿಯಂತೆ ಕಂಡರೆ, ಆಸ್ತಿಕರಿಗೆ ಸಾಕ್ಷಾತ್ ಭಗವಾನ್ ಬುದ್ಧನೇ ತತ್ವ ಪ್ರಸಾರ ಕಾರ್ಯವನ್ನು ನೆರವೇರಿಸುತ್ತಾ ಬಹುದೂರದಿಂದ ಇಲ್ಲಿಗೆ ಬಂದು ಮಾರ್ಗಾಯಾಸದಿಂದ ಮಲಗಿಕೊಂಡನೇನೋ ಎನಿಸುತ್ತದೆ. ಆ ಆಕೃತಿ ಎಷ್ಟೊಂದು ಮನೋಹರ ಮತ್ತು ಸಾಕ್ಷಾತ್ ಇದೆಯೆಂದರೆ ಬುದ್ಧನ ಗುಂಗರು ಕೂದಲು, ನೇರನಾಸಿಕ, ವಿಶಾಲವಾದ ಎದೆ ಮತ್ತು ಮುಗುಳುನಗೆಯ ತುಟಿಗಳು ಅವರಿಂದ ಒಂದಿಷ್ಟೂ ವ್ಯತ್ಯಾಸವಿರದಷ್ಟು ಸ್ಪಷ್ಟವಾಗಿ ಕಾಣಿಸುತ್ತದೆ. ಇದು ಪ್ರಕೃತಿಯ ವೈಚಿತ್ರ್ಯವಾದರೆ, ಇಲ್ಲಿಗೆ ಹತ್ತಿರದ ಸನ್ನತಿ ಹಾಗೂ ಸುತ್ತಲಿನ ಗ್ರಾಮಗಳಲ್ಲಿ ಹಿಂದೆ ಈ ಭಾಗದಲ್ಲಿ ಬೌದ್ಧ ಧರ್ಮವಿದ್ದ ಬಗ್ಗೆ ಕುರುಹುಗಳು ದೊರೆತಿವೆ. ಇದು ಕಾಕತಾಳೀಯವಾದರೂ ಸೃಷ್ಟಿಯ ವೈಚಿತ್ರ್ಯವೆಂದೇ ಹೇಳಬಹುದು.

ಸಂಜೆ ಹೊಂಬಿಸಿಲಿನ ಸೂರ್ಯನು ನಿಧಾನವಾಗಿ ಆಕೃತಿಯ ತಲೆಯ ಹತ್ತಿರ ಮುಳುಗಲು ತವಕಿಸುತ್ತಿದ್ದಂತೆ ಭಗವಾನ್ ಬುದ್ಧ ಮತ್ತಷ್ಟು ರಮಣೀಯ ಹಾಗೂ ಮನೋಹರವಾಗಿ ಕಾಣಿಸುತ್ತಾನೆ. ಪ್ರಕೃತಿ ಪ್ರಿಯರಿಗಂತೂ ಈ ದೃಶ್ಯ ಅಭೂತಪೂರ್ವವಾಗಿ ಕಂಡು ಬರುತ್ತದೆ.

ಆದರೆ ಇದ್ಯಾವುದರ ಪ್ರಜ್ಞೆ ಇಲ್ಲಿನ ನಗರಸಭೆಯವರಿಗೆ ಮತ್ತು ಕರ್ನಾಟಕ ಪ್ರವಾಸೋದ್ಯಮ ಇಲಾಖೆಯವರಿಗೆ ಇಲ್ಲದಿರುವುದು ಅತ್ಯಂತ ವಿಷಾದದ ಸಂಗತಿಯಾಗಿದೆ. ಜಗತ್ತಿಗೆ ಮೊಟ್ಟಮೊದಲು ಮನುಷ್ಯ ಸರಿಸಮಾನತೆಯನ್ನು ಬೋಧಿಸಿದ ಬುದ್ಧ ಇಲ್ಲಿ (ಪ್ರಕೃತಿಯ ರೂಪದಲ್ಲಿ) ಸಾಕ್ಷಾತ್ಕಾರಗೊಂಡಿದ್ದರೂ ಅದರತ್ತ ಅದೇ ಮಾನವೀಯತೆಯಿಂದ ನೋಡುವ ಅವಕಾಶ ಕಲ್ಪಿಸಿಕೊಡುವ ಶಕ್ತಿ ಇಲ್ಲಿನ ಜನತೆಗೂ ಇರದಿರುವುದು ಖೇದದಿಂದಲೇ ಹೇಳಬೇಕಾಗಿದೆ.

■ ಶಿವರಂಜನ್ ಸತ್ಯಂಪೇಟೆ, ಶಹಾಪುರ

# ಹೊಸ ಪಾತ್ರದಲ್ಲಿ ಕಪಿಲ್‌ದೇವ್




**ಕಪಿಲ್‌ದೇವ್ ನಮ್ಮ ಮೊದಲ ಅತ್ಯುತ್ತಮ ಆಲ್‌ರೌಂಡರ್. ಮಧ್ಯಮ ವೇಗದ ಬೌಲಿಂಗ್ ಮೂಲಕ ವಿಶ್ವ ದಾಖಲೆಯ ವಿಕೆಟ್ ಪಡೆದವರು. ಜಿಂಬಾಬ್ವೆ ವಿರುದ್ಧ 1983ರ ವಿಶ್ವಕಪ್‌ನಲ್ಲಿ ಏಕಾಂಗಿಯಾಗಿ ಹೋರಾಡುತ್ತಾ 175ರನ್ ಮಾಡಿದ್ದು ತೀರಾ ಈಚಿನವರೆಗೆ ಒಂದು ವಿಶ್ವದಾಖಲೆ ಆಗಿತ್ತು. ಭಾರತಕ್ಕೆ ಮೊತ್ತ ಮೊದಲ ವಿಶ್ವಕಪ್ ತಂದಿತ್ತ ತಂಡದ ನಾಯಕ ಕೂಡ ಅವರೇ ಆಗಿದ್ದರು. ಕ್ರಿಕೆಟ್‌ನ ಸಕ್ರಿಯ ಚಟುವಟಿಕೆಯಿಂದ ನಿವೃತ್ತರಾದ ಮೇಲೆ ಕಪಿಲ್‌ಗೆ ಈಗ ಮತ್ತೊಂದು ಹೊಣೆ. ಭಾರತ ಕ್ರಿಕೆಟ್ ತಂಡದ ಕೋಚ್ ಆಗಿ ಅವರ ಮೇಲೆ ಹೆಚ್ಚಿನ ಜವಾಬ್ದಾರಿ.**

ಹರಿಯಾಣಾದವರಾದ ಕಪಿಲ್‌ದೇವ್ ನಿಖಾಂಜ್ ಅಪರೂಪದ ಕ್ರೀಡಾಪಟು. ಸ್ಪಿನ್ನರ್‌ಗಳ ಮೂಲಕವೇ ಭಾರತ ಹೆಣಗುತ್ತಿದ್ದಾಗ, ಇಡೀ ಕ್ರಿಕೆಟ್ ರಂಗದ ಶೈಲಿಯೇ ಬದಲಾಗುತ್ತಿತ್ತು. ವೆಸ್ಟ್ ಇಂಡೀಸ್ ಪರಿಣತ ಪಡೆದಿದ್ದ ವೇಗದ ಬೌಲಿಂಗ್, ವಿಶ್ವ ಕ್ರಿಕೆಟ್ ರಂಗಧ ಪ್ರಮುಖ ಶೈಲಿಯಾಯಿತು. ಅದೇ ಹಾದಿಯಲ್ಲಿ ನಡೆದು ಸಿದ್ಧಿ ಪಡೆದ ಆಸ್ಟ್ರೇಲಿಯಾ ಮತ್ತು ಪಾಕೀಸ್ತಾನಗಳು ಈಗ ವಿಶ್ವದ ಅಗ್ರಮಾನ್ಯ ತಂಡಗಳು.

ಭಾರತ ಕ್ರಿಕೆಟ್ ತಂಡದಲ್ಲಿ ವೇಗದ ಬೌಲಿಂಗ್‌ಗೆ ಸ್ಥಾನ ಗಳಿಸಿಕೊಟ್ಟವರು ಕಪಿಲ್‌ದೇವ್. ಆಸ್ಟ್ರೇಲಿಯಾದ ದಿಗ್ಗಜರ ಶಿಷ್ಯತ್ವ ಪಡೆದುಕೊಂಡು, ಹಂತಹಂತವಾಗಿ ಮೇಲೇರಿದ ಕಪಿಲ್ ಭಾರತೀಯ ತಂಡದ ನಾಯಕರೂ ಆದರು.

ಒಂದು ದಿನದ ಪಂದ್ಯವನ್ನು ಟೆಸ್ಟ್‌ನಂತೆ ಆಡುತ್ತಿದ್ದ ಸುನೀಲ್ ಗವಾಸ್ಕರ್ ಎದುರು, ರವಿಶಾಸ್ತ್ರಿ ಶ್ರೀಕಾಂತ್, ರೋಜರ್ ಬಿನ್ನಿ, ಮೋಹಿಂದರ್ ಅಮರ್‌ನಾಥ್ ಮುಂತಾದ ವಿಶ್ವಾಸಾರ್ಹ ಆಟಗಾರರನ್ನು ನೆಚ್ಚಿಕೊಂಡು ಪ್ರಬಲ ತಂಡ ಕಟ್ಟಿದವರು ಕಪಿಲ್‌ದೇವ್. ಅದರ ಫಲವಾಗಿಯೇ ಭಾರತದ ಕ್ರಿಕೆಟ್ ಇತಿಹಾಸದ ದಿಕ್ಕು ಬದಲಾಯಿತು. ಮಹತ್ವದ ಮೈಲುಗಳನ್ನು ದಾಟಿ ಬಂದಿತು.

ಕಪಿಲ್ ನಾಯಕತ್ವದಿಂದ, ಆನಂತರ ಕ್ರಿಕೆಟ್ ಆಟದಿಂದ ನಿವೃತ್ತರಾದರು. ಆನಂತರ ತಂಡದ ನಾಯಕತ್ವ ವಹಿಸಿಕೊಂಡ ಅಝರುದ್ದೀನ್, ಸಚಿನ್ ತೆಂಡೂಲ್ಕರ್ ಎಷ್ಟೇ ಪ್ರತಿಭಾವಂತರಾದರೂ, ಹಿಂದಿನ ಸಾಧನೆಗಳು ಇತಿಹಾಸದ ಸಂಗತಿಗಳಾಗಿ ಉಳಿದವು. ಆಟಗಾರರಿಗೆ ನಾನೇನೂ ಹೇಳಬೇಕಿಲ್ಲ. ಅವರವರಿಗೆ ತಾವೇನು ಮಾಡಬೇಕು ಎಂಬುದು ಗೊತ್ತಿರುತ್ತದೆ ಎಂದ ಅಝರುದ್ದೀನ್ ತಂಡವನ್ನು ಹದವಾಗಿ ಮೇಳವಿಸಲು ವಿಫಲರಾದರು. ಸಚಿನ್ ಇತರ ಆಟಗಾರರ ಜೊತೆ ಒಳ್ಳೆಯ ಸಂಪರ್ಕ ಸಾಧಿಸಿದರಾದರೂ, ನಾಯಕತ್ವದ ಹೊಣೆಯಿಂದಾಗಿ ಅವರ ಆಟದ ಮೇಲೆ ದುಷ್ಪರಿಣಾಮವಾಯಿತು.

ಈಗ ಇಂಥ ದೋಷಗಳನ್ನು ಸರಿಪಡಿಸಿ ಭಾರತೀಯ ಕ್ರಿಕೆಟ್ ತಂಡವನ್ನು ವಿಜಯದ ಹಾದಿಯಲ್ಲಿ ನಡೆಸುವ ಹೊಣೆ ಕಪಿಲ್ ಪಾಲಿಗೆ ಬಂದಿದೆ. ಅವರೀಗ ತಂಡದ ಕೋಚ್.

ಪ್ರವಾಸದಲ್ಲಿರುವ ಭಾರತ ತಂಡ ಹಲವು ಮಹತ್ವದ ಪಂದ್ಯಗಳನ್ನು ಆಡಲಿದೆ. ಆಸ್ಟ್ರೇಲಿಯಾ ವಿರುದ್ಧ ಟೆಸ್ಟ್, ಏಕ ದಿನದ ಪಂದ್ಯ, ಅಲ್ಲಿಯೇ ತ್ರಿಕೋಣ ಸರಣಿ, ಅದಾದ ಮೇಲೆ ವೆಸ್ಟ್ ಇಂಡೀಸ್ ಪ್ರವಾಸ ಹೀಗೆ ಹೊಸ ವರ್ಷವಿಡೀ ಒಂದಲ್ಲ ಒಂದು ಪಂದ್ಯದಲ್ಲಿ, ಪ್ರವಾಸದಲ್ಲಿ ಭಾರತ ತಂಡ ತೊಡಗಿರುತ್ತದೆ.

99ರ ವಿಶ್ವಕಪ್‌ನಲ್ಲಿ ಭಾರತದ ಸಾಧನೆ ಹೀನಾಯವಾಗಿತ್ತು. ಅದಕ್ಕೆ ಕಾರಣಗಳು ಹಲವು. ಎಲ್ಲ ರೀತಿಯಿಂದಲೂ ಅತ್ಯುತ್ತಮ ಎನಿಸಿದ ಭಾರತದ ತಂಡ, ಎಲ್ಲಿಯೋ ತಪ್ಪುತ್ತಿಧೆ. ಆ ತಪ್ಪು ಹುಡುಕಿ ಸರಿ ಮಾಡುವುದು ಕೋಚ್ ಆಗಿರುವ ಕಪಿಲ್‌ದೇವ್ ಅವರ ಹೊಣೆ. ಈಗಿನ ಪ್ರವಾಸದಲ್ಲಿ ಭಾರತ ಯಶಸ್ಸು ಸಾಧಿಸದೇ ಹೋದಲ್ಲಿ ಅದರ ಜವಾಬ್ದಾರಿಯನ್ನು ನಾಯಕ ಸಚಿನ್‌ಗಿಂತಲೂ ಕೋಚ್ ಆಗಿರುವ ಕಪಿಲ್‌ದೇವ್ ಹೊರಬೇಕಾಗುತ್ತದೆ.

ಕಪಿಲ್ ಆಯ್ಕೆ ಸಲೀಸಾಗಿ ಏನೂ ಆಗಲಿಲ್ಲ. ಭಾರತ ಕ್ರಿಕೆಟ್ ಮಂಡಳಿಯಲ್ಲಿ ಆಗದವರೂ ಸಾಕಷ್ಟು ಇದ್ದಾರೆ. ಕಪಿಲ್ ಬರುತ್ತಿದ್ದ ಹಾಗೆ ನ್ಯೂಜಿಲೆಂಡ್ ವಿರುದ್ಧ ಅಹಮದಾಬಾದ್‌ನಲ್ಲಿ ನಡೆಯುತ್ತಿದ್ದ ಒಂದು ದಿನದ ಪಂದ್ಯಕ್ಕೆ ಅಗರ್ಕರ್ ಅವರನ್ನು ಕರೆಸಿಕೊಂಡರೆಂಬುದು ಬಹು ದೊಡ್ಡ ವಿವಾದ ಆಯಿತು. ಕ್ರಿಕೆಟ್ ಮಂಡಳಿ ಕಾರ್ಯದರ್ಶಿ ಜಯವಂತ್ ಲೇಲೇ 'ಆಸ್ಟ್ರೇಲಿಯಾದಲ್ಲಿ ಭಾರತ ಮೂರು ಟೆಸ್ಟ್‌ಗಳನ್ನು ಸೋತು ಬರುತ್ತದೆ' ಎಂದು ಅಪದ್ಧ ನುಡಿಯ ಆರಂಭ ಹಾಡಿದ್ದಾರೆ.

ಕ್ರಿಕೆಟ್ ಮಂಡಳಿ ಮತ್ತು ಆಯ್ಕೆ ಮಂಡಳಿಯ ಕೋಡಂಗಿಗಳನ್ನು ಕಂಡರೆ ಕಪಿಲ್‌ಗೆ ಅಷ್ಟಕ್ಕಷ್ಟೇ. ಆಟ ಗೊತ್ತಿರದೇ, ಆರಾಮ ಖುರ್ಚಿಯಲ್ಲಿ

ಎ.ಸಿ.ರೂಮಲ್ಲಿ ಕುಳಿತು ಬಾಯಿಗೆ ಬಂದಂತೆ ಮಾತಾಡುತ್ತಾ, ಕ್ರಿಕೆಟ್ ಆಟಗಾರರ ಬದುಕಿನ ಜೊತೆ ಹುಡುಗಾಟವಾಡುತ್ತಾರೆ ಎಂದು ಕಪಿಲ್‌ಗೆ ಸ್ಪಷ್ಟವಾಗಿ ಗೊತ್ತು. ಆಟದ ಮೈದಾನಕ್ಕೆ ಒಮ್ಮೆ ಇಳಿದಾಗ, ಅಲ್ಲಿನ ಸಮಸ್ಯೆ, ಸವಾಲುಗಳನ್ನು ಎದುರಿಸುವುದು ಸೈಡ್‌ವಿಂಗ್‌ನಲ್ಲಿ ಕುಳಿತು ಮಾತಾಡಿದ ಹಾಗೆ ಸುಲಭವಲ್ಲ.



ತೀವ್ರ ಒತ್ತಡದಲ್ಲಿ, ಬೇರೊಂದು ದೇಶದ ನೆಲದಲ್ಲಿ ಕಾಲೂರಿ ನಿಂತು ಹೋರಾಡಬೇಕಾದ ಆಟಗಾರರಿಗೆ ಒಂದಿಷ್ಟು ಆತ್ಮವಿಶ್ವಾಸ, ಎದುರಾಳಿಯ ದೈತ್ಯ ಶಕ್ತಿಗೆ ಹೆದರಬೇಕಿಲ್ಲ ಎಂಬ ನಂಬಿಕೆ ಬೆಳೆಸಬೇಕಾದ್ದು ಮುಖ್ಯ. ಆ ಕೆಲಸವನ್ನು ಅಧಿಕಾರಯುತ ವಾಣಿ ಮಾಡಲಾರದು. ಹೀಗಾಗಿಯೇ ಕಪಿಲ್‌ದೇವ್ ಒಬ್ಬ ಹಿರಿಯಣ್ಣನ ಹಾಗೆ ನಿಂತು ಈ ಕೆಲಸ ಮಾಡುವ ವಿಶ್ವಾಸ ವ್ಯಕ್ತಪಡಿಸಿದ್ದಾರೆ.

ವಿಶಾಲ ಭಾರತದ ಬೇರೆ ಬೇರೆ ಕಡೆಗಳಿಂದ ಬಂದಿರುವ ಪ್ರತಿಭಾವಂತ ಆಟಗಾರರ ಜೀವನ ಶೈಲಿ, ಯೋಚನಾ ಕ್ರಮ, ಆಟದ ರೀತಿ ಭಿನ್ನ. ಇವರಲ್ಲಿ ಯಾರಿಗೂ ತಮ್ಮನ್ನು ಅಲಕ್ಷಿಸಲಾಗಿದೆ ಎಂದು ಅನಿಸದಂತೆ ನೋಡುವುದು ಮುಖ್ಯ. ಆನಂತರ ಅವರಲ್ಲಿನ ಅತ್ಯುತ್ತಮ ಪ್ರತಿಭೆಯನ್ನು ಪ್ರದರ್ಶಿಸಲು ಅನುವು ಮಾಡಿಕೊಡುವುದೇ ಕೋಚ್ ಆದವನ ಕರ್ತವ್ಯ ಎಂದು ಸ್ಪಷ್ಟಪಡಿಸುತ್ತಾರೆ ಕಪಿಲ್.

ಕ್ರಿಕೆಟ್ ಆಡುವುದೆಂದರೆ, ಆಟಗಾರರಿಗೆ ಅದೊಂದು ಖುಷಿಯ ಸಂಗತಿ ಆಗಬೇಕು. ತಾವೇನೊ ಕಡಿದು ಕಟ್ಟೆ ಹಾಕುತ್ತಿದ್ದೇವೆ ಎನಿಸಬಾರದು. ಹಾಗಾದಾಗ ಮಾತ್ರ ಆಟಗಾರನ ಮೇಲಿನ ಒತ್ತಡ ಇರದು. ಆತನ ಸಾಮರ್ಥ್ಯ ಕೂಡ ಪೂರ್ಣರೂಪದಲ್ಲಿ ಬಯಲಾಗುತ್ತದೆ ಎನ್ನುವ ಕಪಿಲ್‌ಗೆ, ಸದಾ ಬಿಡುವಿಲ್ಲದೇ ಆಟವಾಡುವುದೇ ಇಷ್ಟ. ಹೆಚ್ಚು ಆಟಗಳನ್ನಾಡುವುದರಿಂದ ಶ್ರಮ ಎಂಬ ಮಾತು ಒಪ್ಪುವುದಿಲ್ಲ. ಹೆಚ್ಚು ಆಡಿದಷ್ಟೂ ಹೆಚ್ಚು ಕುಶಲತೆ, ನಿರಾತಂಕ ಸ್ಥಿತಿ ಮೂಡುತ್ತದೆ ಎಂದು ವಾದ ಮಂಡಿಸುವ ಅವರು, ನಿವೃತ್ತರಾದ ಮೇಲೂ ಒಂದಿಲ್ಲ ಒಂದು ಚಟುವಟಿಕೆಯಲ್ಲಿ ನಿರತರಾಗಿದ್ದವರು.

ಈಗಿನ ಭಾರತ ತಂಡದಲ್ಲಿ ಆಲ್‌ರೌಂಡರ್ ಒಬ್ಬರೂ ಇಲ್ಲದಿರುವುದೇ ಬಹುದೊಡ್ಡ ಕೊರತೆ ಎಂದು ವ್ಯಾಖ್ಯಾನಿಸುವ ಕಪಿಲ್ ಎಂಟು, ಒಂಬತ್ತನೇ ಆಟಗಾರರೂ ಕೂಡ ಸಶಕ್ತ ಬ್ಯಾಟುಗಾರರಾಗಿರಬೇಕು ಇದು ಈಗಿಲ್ಲ. ಹೀಗಾಗಿ ಯಶಸ್ಸು ಪಡೆಯಲು ಬಹುಮುಖ್ಯ ಅಡ್ಡಿಯಾಗಿದೆ ಎನ್ನುತ್ತಾರೆ.

ಅದೇ ಈಗಿನ ಆಟಗಾರರು ಕ್ರಿಕೆಟನ್ನು ಬಹಳ ಗಂಭೀರ ವೃತ್ತಿಯಾಗಿ ಪರಿಗಣಿಸಿರುವ ಬಗ್ಗೆ ಅವರಿಗೆ ತೃಪ್ತಿ ಇದೆ. ಪ್ರತಿ ಆಟಗಾರ ಏಳೆಂಟು ಬ್ಯಾಟುಗಳನ್ನು ನಾನಾ ರೀತಿಯ ಉಪಕರಣಗಳನ್ನು ಜೊತೆಗೇ ಒಯ್ಯುತ್ತಾನೆ. ಮೊದಲೆಲ್ಲ ಹೀಗಿರಲಿಲ್ಲ. ಹೆಲ್ಮೆಟ್, ನಾನಾ ರೀತಿಯ ಪ್ಯಾಡ್, ಗ್ಲೋವ್ಸ್, ಬೂಟುಗಳು ಹೀಗೆ ಇಡೀ ಕ್ರಿಕೆಟ್ ಉಪಕರಣಗಳ ಸರಣಿಯೇ ಇವತ್ತು ದೊರೆಯುತ್ತದೆ. ತನ್ನ ಆಟ ಚೆನ್ನಾಗಿ ಆಗಬೇಕು ಎಂಬ ಹಾಗೆಯೇ ಗಾಯಗೊಳ್ಳದಂತೆ ಎಚ್ಚರವಹಿಸುವುದೂ ಈಗ ಮುಖ್ಯವಾಗಿದೆ ಎಂದೂ ಕಪಿಲ್ ಹೇಳುತ್ತಾರೆ.

ತಾವೇನು ಮಾಡಬೇಕು? ಎಂಥ ಸ್ಥಿತಿಯಲ್ಲಿ ಜವಾಬ್ದಾರಿ ಹೆಗಲಿಗೆ ಬಿದ್ದಿದೆ! ಎಂಬ ಅರಿವಿರುವ ಕಪಿಲ್, ನಿಜಕ್ಕೂ ತಮ್ಮ ಹೊಣೆ ನಿರ್ವಹಿಸುವುದಾದರೆ ಭಾರತ ಕ್ರಿಕೆಟ್ ಇನ್ನೊಂದು ಮಹತ್ವದ ಮಜಲಿಗೆ ಹೊರಳಿಕೊಳ್ಳುವುದು ಸಾಧ್ಯ.

ಆದರೆ ಯಾವ ದೃಷ್ಟಿಯಿಂದಲೂ ಕಪಿಲ್‌ಗೆ ಹೊಸ ಪಾತ್ರದಿಂದ ಲಾಭವಿಲ್ಲ. ವಿಶ್ವಚಾಂಪಿಯನ್ ಆಸ್ಟ್ರೇಲಿಯನ್ನರನ್ನು ಭಾರತ ಅಕಸ್ಮಾತ್ ಮಣಿಸಿದರೆ ಅದರ ಕೀರ್ತಿ ಸಚಿನ್‌ಗೆ ಸಲ್ಲುತ್ತದೆ. ಸೋತರೆ ಅದರ ಅಪಕೀರ್ತಿ ಕಪಿಲ್‌ಗೆ ಅಂಟಿಕೊಳ್ಳುತ್ತದೆ.

■ ಸುಹಾಸ

# ಬೇರೆ ನೆಲದಲ್ಲಿ ಎದುರಿಸುವ ತೊಡಕು

ಪಾಕಿಸ್ತಾನ ತಂಡದಲ್ಲಿ ಹನ್ನೆರಡು ಜನ ಆಟಗಾರರಿರುತ್ತಾರೆ ಎಂದು ತಮಾಷೆಯಾಗಿ ಹೇಳುವ ಕಾಲ ಒಂದಿತ್ತು! ಕಣ್ಣಿಗೆ ಕಾಣುವ ಹನ್ನೊಂದು ಆಟಗಾರರಿಗೆ ನೆರವಾಗಲು ಅಂಪೈರುಗಳೂ ಅವರ ಪಕ್ಷ ವಹಿಸುತ್ತಾ ಇದ್ದರೆಂಬುದು ಬಹುದಡ್ಡೊ ಅಪಾದನೆ.

ಈಗ ಆಸ್ಟ್ರೇಲಿಯಾ ಕೂಡ ಅದೇ ಹಾದಿ ಹಿಡಿದ ಹಾಗೆ ಕಾಣುತ್ತದೆ. ಇತ್ತೀಚಿನ ವಿಶ್ವಕಪ್ ಫೈನಲ್‌ನಲ್ಲಿ ಎದುರಾಳಿಗಳಾಗಿದ್ದ ಆಸ್ಟ್ರೇಲಿಯಾ ಪಾಕಿಸ್ತಾನಗಳು ಇತ್ತೀಚೆಗೆ ಟೆಸ್ಟ್ ರಂಗದಲ್ಲಿ ಎದುರಿಸಿದಾಗ ಅದೊಂದು ಭಯಂಕರ ಯುದ್ಧದ ಆವೇಶದಿಂದ ಪ್ರೇರಿತವಾಗಿತ್ತು. ಈ ಮಧ್ಯೆ ಪಾಕಿಸ್ತಾನದ ವೇಗದ ಬೌಲರ್ ಶೋಯಬ್ ಅಖ್ತರ್ ಚೆಂಡು ಎಸೆಯುತ್ತಾನೆ ಎಂಬ ಆರೋಪ ಕೂಡ ಕೇಳಿಬಂತು. ಇಂಥ ಆಪಾದನೆ ಆಸ್ಟ್ರೇಲಿಯಾದಿಂದ ಎರಡನೇ ಬಾರಿಗೆ ಕೇಳಿ ಬರುತ್ತಿದೆ. ಹಿಂದೆ ಶ್ರೀಲಂಕಾದ ಮುತ್ತಯ್ಯ ಮುರಳೀಧರನ್ ವಿರುದ್ಧವೂ ಕೇಳಿಬಂದದ್ದು ಆಸ್ಟ್ರೇಲಿಯನರಿಂದಲೇ.

ಮೊದಲ ಭಾರತ ಆಸ್ಟ್ರೇಲಿಯಾ ಟೆಸ್ಟ್‌ನಲ್ಲಿ ಸಚಿನ್ ತೋಳಿಗೆ ಬಿದ್ದು ಮೇಲೆರಗುತ್ತಿದ್ದ ಚೆಂಡನ್ನು ಗಮನಿಸಿಯೂ ಅಲ್ಲಿನ ಅಂಪೈರ್ ಎಲ್‌ಬಿಡಬ್ಲ್ಯು ಘೋಷಿಸಿದಾಗ, ಭಾರತವನ್ನು ಬಗ್ಗು ಬಡಿಯಲು ಉತ್ತಮ ಬೌಲಿಂಗ್ ಆಗಲಿ, ಫೀಲ್ಡಿಂಗ್ ಆಗಲಿ ಬೇಕಿಲ್ಲ ಅನ್ನಿಸಿಬಿಟ್ಟಿತು.

ಮೊದಲೇ ಭಾರತ ತಂಡ ಮಂಕು ಬಡಿದು ಕೂತಿದೆ. ಅಟ್ಟದಿಂದ ಬಿದ್ದವನನ್ನು ದೊಣ್ಣೆಯಿಂದ ಚಚ್ಚಿದರು ಎಂಬಂತೆ ಅಲ್ಲಿ ಪ್ರತಿಕ್ರಿಯಿಸುತ್ತಾ ಇದ್ದಾರೆ.

ಇವೆಲ್ಲ ಇದ್ದದ್ದೇ ಹೋಗಲಿ ಅಂದುಕೊಂಡರೆ, ಸುಶಿಕ್ಷಿತರು ಎನಿಸಿಕೊಂಡಿರುವ ಆಸ್ಟ್ರೇಲಿಯಾದ ಆಟಗಾರರು ಭಾರತದ ಬ್ಯಾಟುಗಾರರ ಮೇಲೆ ನಡೆಸುವ ವಾಗ್ದಾಳಿಯಂತೂ, ಬೀದಿಜಗಳದ ಶೈಲಿಯಲ್ಲಿ ಇರುತ್ತದೆ. ಸೌರವ್ ಗಂಗೂಲಿಯಂತಹ ಸಭ್ಯ ಕೂಡ ಇಂಥ ವಾಗ್ದಾಳಿಯಿಂದ ನೊಂದು ಅಲ್ಲಿನ ಕ್ರಿಕೆಟ್ ಮಂಡಳಿಗೆ ದೂರು ಸಲ್ಲಿಸಬೇಕಾಯಿತು. ಕೊನೆಗೆ ಮನಸಿಲ್ಲದ ಮನಸ್ಸಿಂದ ಅಲ್ಲಿನ ಮಂಡಳಿ ಕ್ಷಮೆ ಯಾಚಿಸಿದೆ.

ಕ್ರಿಕೆಟ್ ಎಂಬ ಸಜ್ಜನರ ಕ್ರೀಡೆಯಲ್ಲಿ ಇದೇ ರೀತಿಯ ಅಸಹ್ಯ ಅಂಶಗಳು ಸೇರುತ್ತಾ ಹೋದರೆ, ಅದು ತನ್ನ ಘನತೆ ಉಳಿಸಿಕೊಳ್ಳಲಾಗದು.

ಇಡೀ ವಿಶ್ವವೇ ಇವತ್ತು ಸಚಿನ್ ಮತ್ತು ಗವಾಸ್ಕರ್ ಅತ್ಯುತ್ತಮ ಬ್ಯಾಟುಗಾರರು ಎಂದು ಒಪ್ಪಿಕೊಂಡಿದೆ. ಆಸ್ಟ್ರೇಲಿಯಾದ ಮಹಾನ್ ಸಾಧಕ ಬ್ರಾಡ್‌ಮನ್ ಕೂಡ ಸಾಧನೆಯ ಪಟ್ಟಿಯಲ್ಲಿ ಕೆಳಗಿಳಿದಿದ್ದಾರೆ. ಇಂಥ ಸಂದರ್ಭದಲ್ಲಿ ಭಾರತೀಯ ಪ್ರತಿಭೆ ನೋಡಿ ನಲಿಯುವ ಅವಕಾಶಕ್ಕಿಂತ, ಇವರನ್ನು ಹೇಗಾದರೂಸರಿ ಬಗ್ಗು ಬಡಿಯಬೇಕು ಎಂಬ ಧೋರಣೆ ತಳೆಯುವುದು, ಅದಕ್ಕಾಗಿ ಕೀಳು ತಂತ್ರಗಳನ್ನು ಬಳಸುವುದು ಯಾರಿಗೂ ಹೆಸರು ತರುವಂಥದ್ದಲ್ಲ. ■

# ಹೀಗೆ ಈ ಬದುಕು....



ಲಾಜವಂತಿಯ ಮನೆಯವರೆಲ್ಲ ಅವಳನ್ನೂ ಸೇರಿಸಿ, ಪುಟ್ಟಪರ್ತಿ ಭಕ್ತರು. ಯಾವ ಕೆಲಸ ಮಾಡಲೂ ಬಾಬಾನ ಒಪ್ಪಿಗೆ ಆಶೀರ್ವಾದ ಬೇಕು. ಲಾಜವಂತಿಯ ಕೊನೆಯ ತಂಗಿ 'ಮನೀಷಾ' ಸಹ ಬಾಬಾ ಭಕ್ತೆ. ಪರಿಚಯದ ಕುಟುಂಬ ಮಿತ್ರರ ಮನೆಯ ಹುಡುಗನ ಜೊತೆ ಅವಳ ಸ್ನೇಹ ಪ್ರೇಮವಾಯಿತು. ಆತ ಮದುವೆಗೆ ಅವಸರಿಸಿದ.

ಒಂದು ಸಂಗತಿ ಅಡ್ಡ ಬಂತು. ಬಾಬಾನ ಒಪ್ಪಿಗೆಯಿಲ್ಲದೆ ಮನೀಷಾ ಮದುವೆಯಾಗುವಂತೆಯೇ ಇರಲಿಲ್ಲ. ಹುಡುಗ ಪಾಪ, ಪೆಚ್ಚಾದ. ಕಾದ. ಕಾದೂ ಕಾದೂ; ಒಂದೆರಡು ವರ್ಷಗಳ ಮೇಲೆ ಮದುವೆಗೆ ಬಾಬಾನ ಆಶೀರ್ವಾದ ಸಿಕ್ಕಿತು. ಮದುವೆ ದಿನಾಂಕವನ್ನೂ ಬಾಬಾ ಗೊತ್ತುಪಡಿಸಿದರು. ಅದೇ ದಿನ ಅದೇ ಮುಹೂರ್ತಕ್ಕೆ ಗಂಡು - ಹೆಣ್ಣು ಹೂಹಾರ ಬದಲಾಯಿಸಿ ಗಂಡ ಹೆಂಡಿರಾದರು.

ಅದೇ ದಿನ ಅವರು ಗಂಡಿನ ಮನೆಗೆ ಹೋಗಬೇಕಾಗಿತ್ತು. ಆ ಊರಿನ ರಿಜಿಸ್ಟ್ರಾರ್ ಕಚೇರಿಗೆ ಮದುವೆ ನೋಂದಾವಣಿಗೆ ಹೋದರು. ಅಲ್ಲಿ, ತಕರಾರು ತೆಗೆದರು. ಥೇ ಬಾಬಾ ಒಪ್ಪಿ ಮಾಡಿಸಿದ ಮದುವೆಗೂ ಕಾನೂನಿನ ತೊಡಕೇ? ಏನಾಯ್ತಪ್ಪ ಎಂದರೆ, ಮದುವೆಯ ದಿನದಂದು ನೋಂದಾವಣಿ ಮಾಡುವುದಿಲ್ಲವಂತೆ. ಮರುದಿನವಷ್ಟೇ ಮಾಡಿಕೊಡುವುದಂತೆ. ಕೊನೆಗೆ ಹತ್ತಿರ ಬಂಧುವೊಬ್ಬರು ಒಂದು ಸಲಹೆ ಇತ್ತರು. 'ನಿನ್ನೆ ಮದುವೆಯಾಯಿತೆಂದು ನೋಂದಣಿ ಮಾಡಿಕೊಟ್ಟು ಬಿಡಿ' ಒಂದಿಷ್ಟು ಹಿಂದೆ ಮುಂದೆ ನೋಡಿದಾತ, ಹಾಗೆಯೇ ನೋಂದಾವಣಿ ಮಾಡಿಕೊಟ್ಟ. ಬಾಬಾ ಹೇಳಿದ ಸಮಯಕ್ಕೆ ಹಾರ ಬದಲಾಯಿಸಿದರೂ, ಸರ್ಕಾರಿ ದಾಖಲೆಗಳಲ್ಲಿ ಅದರ ಹಿಂದಿನ ದಿನವೇ ಮದುವೆಯಾಗಿದ್ದಂತಾಯಿತು. ಪ್ರಜಾಪ್ರಭುತ್ವದ ಕಛೇರಿಗಳ ಕಾರ್ಯವೈಖರಿಯೋ, ಬಾಬಾನ ಪವಾಡವೋ ಗೊತ್ತಿಲ್ಲ.

(ವೈಯಕ್ತಿಕ ಕಾರಣಕ್ಕೆ ಹೆಸರು ಬದಲಾಯಿಸಿದೆ)

■ ಆರ್. ನಿರ್ಮಲ, ಮೈಸೂರು

ಬಿ.ಟಿ.ಎಸ್.ಬಸ್‌ನಲ್ಲಿ ತುಂಬಿದ ಜನಜಂಗುಳಿಯಲ್ಲಿ 5-6 ವರ್ಷದ ಪುಟ್ಟ ಬಾಲಕನೊಬ್ಬ ಯಾವುದೋ ತಮಿಳುಹಾಡನ್ನು ಹಾಡುತ್ತಿದ್ದ. ಪ್ರಯಾಣಿಕರಲ್ಲಿ ಕೆಲವರು ತಮಗೆ ತೋಚಿದಷ್ಟು ಭಿಕ್ಷೆ ಹಾಕುತ್ತಿದ್ದರು. ಆ ಹುಡುಗ ಹಾಗೇ ಹಾಡುತ್ತಾ ಮುಂದೆ ನಡೆದು ಹಿಂದಿನ ಡೋರಲ್ಲಿ ಇಳಿಯುತ್ತಿದ್ದಂತೆಯೇ ಬಾಗಿಲ ಬಳಿ ನಿಂತಿದ್ದ ಮಧ್ಯವಯಸ್ಸಿನ ವ್ಯಕ್ತಿಯೊಬ್ಬ ಹುಡುಗನ ಕೈಯಲಿದ್ದ ಚಿಲ್ಲರೆ ನಾಣ್ಯಗಳನ್ನೆಲ್ಲ ಜೇಬಿಗಿಳಿಸಿ, ಆ ಹುಡುಗನನ್ನು ಮತ್ತೊಂದು ಬಸ್‌ನಲ್ಲಿ ಭಿಕ್ಷೆಗಾಗಿ ಕಳಿಸಿದ. ಇದೇ ರೀತಿ ಬಸ್ಸಿನಿಂದ ಬಸ್ಸಿಗೆ ಆ ಹುಡುಗ ಹಾಡುತ್ತಾ ಹಾಡುತ್ತಾ ಭಿಕ್ಷೆ ಕೇಳುವುದು, ಹಿಂದಿನ ಬಾಗಿಲಲ್ಲಿ ನಿಂತಿದ್ದ ಆ ವ್ಯಕ್ತಿ (ಬಹುಶಃ ಹುಡುಗನ ತಂದೆ ಇರಬಹುದು) ಚಿಲ್ಲರೆಯನ್ನು ಜೇಬಿಗಿಳಿಸುವುದು ನಡೆದೇ ಇತ್ತು.

ಏನೂ ಅರಿಯದ ಆ ಮುಗ್ಧ ಹಸುಳೆಯನ್ನು ಹೆತ್ತವರು ಇಂಥ ಕೆಲಸಕ್ಕೆ ಕಳಿಸಿ, ತಾವು ಆ ಹಣ ಬಳಸುವುದು ನೋಡಿದಾಗ ನನಗೆ ಖೇದವೆನಿಸಿತು. ನಾವು ಕರುಣೆಯಿಂದ ದಾನ ಮಾಡುತ್ತೇವೆ ನಿಜ. ಆದರೆ ಮಾಡಿದ್ದು ಸತ್ಪಾತ್ರದಾನವೇ ಎಂದು ಯೋಚಿಸುವುದು ಮುಖ್ಯ ಅನ್ನಿಸಿತು.

■ ಎಚ್ಚಾರ್ ವಸ್ತ್ರದ, ಬೆಂಗಳೂರು.

ಧಾರವಾಡದ ಸಿಟಿಬಸ್‌ನಲ್ಲಿ ನಡೆದ ಘಟನೆ. ಒಮ್ಮೆ ಸಿಟಿಬಸ್‌ನಲ್ಲಿ ಕೃಷಿ ವಿಶ್ವವಿದ್ಯಾಲಯಕ್ಕೆ ಪ್ರಯಾಣ ಮಾಡುತ್ತಿದ್ದೆ. ಆ ಬಸ್‌ನ ಕಂಡಕ್ಟರ್ ತುಂಬಾ ತಮಾಷೆ ಸ್ವಭಾವದ ವ್ಯಕ್ತಿ. ಪ್ರಯಾಣಿಕರೊಂದಿಗೆ ತುಂಬಾ ತಮಾಷೆಯಾಗಿ ಮಾತಾಡುತ್ತಾ ನಗುವಂತೆ ಮಾಡುತ್ತಿದ್ದ. ಮಾರ್ಗಮಧ್ಯೆ ಕಿತ್ತೂರಚೆನ್ನಮ್ಮ ಪಾರ್ಕ್ ಎಂಬ ಸ್ಟಾಪ್ ಬರುತ್ತದೆ. ಅದರ ನಂತರದ್ದು ಮೆಂಟಲ್ ಹಾಸ್ಪಿಟಲ್ ಸ್ಟಾಪ್. ಚೆನ್ನಮ್ಮ ಪಾರ್ಕ್ ಬಂದಾಗ ಕಂಡಕ್ಟರ್ ಜೋರಾಗಿ 'ಯಾರ್‍ರೀ, ಚೆನ್ನಮ್ಮ?' ಎಂದು ಕೂಗಿದ. ತಕ್ಷಣವೇ ಹುಡುಗಿಯೊಬ್ಬಳು ಎದ್ದು ನಿಂತು 'ನಾನೇರೀ' ಎಂದಳು. 'ಹಾಗಾದ್ರೆ ಜಲ್ದಿ ಇಳಿಯಮ್ಮ' ಎಂದ ಕಂಡಕ್ಟರ್. 'ನಾನು ಇಳಿಯೂದು ಇಲ್ಲಿ ಅಲ್ರೀ, ಕೊನೇ ಸ್ಟಾಪು' ಎಂದಳು. 'ಹಂಗಾದ್ರ ಯಾರ್‍ರೀ ಚೆನ್ನಮ್ಮ ಅಂದ್ರ ನೀನ್ಯಾಕಮ್ಮ ಎದ್ದು ನಿಂತೆ?' ಎಂದು ಕಂಡಕ್ಟರ್ ಕೇಳಿದಾಗ, ಅವಳು 'ಯಾಕಂದ್ರಾ.. ... ನನ್ ಹೆಸರು ಚೆನ್ನಮ್ಮಾರೀ' ಎಂದಳು. ಬಸ್‌ನಲ್ಲಿ ನಗೆಯ ಅಲೆ ಎದ್ದಿತು.



ಹಾಗೇ ಮುಂದಿನ ಸ್ಟಾಪ್ ಮೆಂಟಲ್ ಹಾಸ್ಪಿಟಲ್. ಎಂದಿನಂತೆ ಕಂಡಕ್ಟರ್ ಜೋರಾಗಿ 'ಯಾರ್‍ರೀ.... ಮೆಂಟಲ್..' ಎಂದು ಕೂಗಿದ. ಅಲ್ಲಿ ಇಳಿಯಬೇಕಾದ ಪ್ರಯಾಣಿಕರಿಬ್ಬರು ಇನ್ನೇನು 'ನಾನು' ಎಂದು ಕೂಗಬೇಕೆನ್ನು ಕೊಳ್ಳುತ್ತಿದ್ದಾಗಲೇ ಹಿಂದಿನ ಸ್ಟಾಪ್‌ನಲ್ಲಾದ ಘಟನೆಯ ನೆನಪಾಗಿ ಮಾತಾಡದೇ ತಲೆ ತಗ್ಗಿಸಿಕೊಂಡೇ ಇಳಿದು ಹೋದರು.

■ ಸರೋಜಾ ಎಂ. ಹಿರೇಮಠ, ಸಿರುಗುಪ್ಪ

# ಮಕ್ಕಳಿಲ್ಲದ ಊರು



ಮಧ್ಯಪ್ರದೇಶದ ಸಿಧಿ ಜಿಲ್ಲೆಯ ಆ ಊರಿನ ಹೆಸರು ಹರಾಯಿ. ಅಲ್ಲಿಗೆ ಹೋಗಬೇಕಾದರೆ ಕನಿಷ್ಠ ಏಳು ಕಿಲೋಮೀಟರ್ ನಡೆಯಬೇಕು. ಇಲ್ಲವೇ ದೋಣಿಯೊಂದರಲ್ಲಿ ಕುಳಿತು ನದಿ ದಾಟಬೇಕು. ಅಲ್ಲಿರುವ ಬಹುಪಾಲು ಜನ ಖೈರ್‌ವಾರ್ ಆದಿವಾಸಿ ಜನಾಂಗದವರು.

ಹಲವಾರು ವರ್ಷಗಳಿಂದ ಆ ಊರಲ್ಲಿ ಮಕ್ಕಳೇ ಹುಟ್ಟಿಲ್ಲ. ಬಸಿರಾದ ಹೆಂಗಸರು ಗರ್ಭಪಾತಕ್ಕೆ ಈಡಾಗುತ್ತಾರೆ. ಹಾಗಾಗದಿದ್ದಲ್ಲಿ, ಮಕ್ಕಳು ಸತ್ತು ಹುಟ್ಟುತ್ತವೆ. ಇಡೀ ಭಾರತದಲ್ಲಿ ಮಕ್ಕಳು ಸಾಕಪ್ಪ ಎಂದು ಜನ ಬಯಸುತ್ತಾ ಇದ್ದರೆ, ಇಲ್ಲಿ ಮಕ್ಕಳಾದರೆ ಸಾಕಪ್ಪ ಎನ್ನುತ್ತಾರೆ.

ಈ ಸಮಸ್ಯೆ ಎಷ್ಟು ಗಂಭೀರವಾಗಿದೆ ಎಂದರೆ ಕಳೆದ ಮೂವತ್ತು ವರ್ಷಗಳಲ್ಲಿ ಹರಾಯಿಯ ಜನಸಂಖ್ಯೆ ಅರ್ಧಕ್ಕೆ ಇಳಿದಿದೆ. 1952ರಲ್ಲಿ ಹಳ್ಳಿಯಲ್ಲಿ ತೆರೆದ ಶಾಲೆ ಈಗ ಮುಚ್ಚಿದೆ. ಏಕೆಂದರೆ ಶಾಲೆಗೆ ಹೋಗಲು ಹಳ್ಳಿಯಲ್ಲಿ ಮಕ್ಕಳೇ ಇಲ್ಲ.

ಈ ಹಳ್ಳಿಯ ವಿಚಿತ್ರ ಸಮಸ್ಯೆ 1986ರಲ್ಲಿ ಬಯಲಾದ ನಂತರ ಹಲವಾರು ವೈದ್ಯಕೀಯ ತಂಡಗಳು ಅಲ್ಲಿಗೆ ಬಂದು ಹೋಗಿವೆ. ಆದರೆ ಸಮಸ್ಯೆ ಮಾತ್ರ ಹಾಗೇ ಉಳಿದಿದೆ.

ಜಬಲ್‌ಪುರದ ಐಸಿಎಂಆರ್ ಪ್ರಾದೇಶಿಕ ಕೇಂದ್ರದ ವೈದ್ಯರ ತಂಡ ಬಂದಿತ್ತು. ಹಳ್ಳಿಯ ಮುಖ್ಯಸ್ಥ ಹರಭಜನ್ ಸಿಂಗ್‌ಗೆ ಮಕ್ಕಳಾಗುವಂತೆ ಚಿಕಿತ್ಸೆ ನೀಡಲೂ ಅವರು ಮುಂದಾಗಿದ್ದರು. ಅದಕ್ಕಾಗಿ ಆತ ಜಬಲ್‌ಪುರಕ್ಕೆ ಹೋಗಬೇಕಿತ್ತು. ಅಷ್ಟೇ ಅಲ್ಲ ಚಿಕಿತ್ಸೆಗಾಗಿ ಹದಿನೈದು ಸಾವಿರ ಖರ್ಚಾಗುತ್ತದೆ ಎಂದಿದ್ದರು. ಜೇಬಲ್ಲಿ ಹದಿನೈದು ರೂಪಾಯಿ ಕೂಡ ಇಲ್ಲದ ಆತ, ಹದಿನೈದು ಸಾವಿರದ ಮಾತು ಕೇಳಿಯೇ ಕೈಚೆಲ್ಲಿ ಕುಳಿತುಬಿಟ್ಟ.

ಹಳ್ಳಿಯ ಹಳೆ ತಲೆಮಾರಿನ ಜನಕ್ಕೆ ಹತ್ತುಹತ್ತು ಮಕ್ಕಳಾಗಿದ್ದವು. ಈಗಿನವರು ಕುಡಿಯುವುದು ಅದೇ ನೀರು, ಸೇವಿಸುವುದು ಅದೇ ಗಾಳಿ. ನಮಗೇಕೆ ಮಕ್ಕಳಾಗುತ್ತಿಲ್ಲ! ಎಂಬುದು ಹಳ್ಳಿಗರು ಕೇಳುವ ಪ್ರಶ್ನೆ.

ಇನ್ನೊಂದು ಸಲ 1992ರಲ್ಲಿ ಸಮಸ್ಯೆ ಅರಿಯಲು ಬಂದ ವೈದ್ಯರ ಸಂಶೋಧನಾ ತಂಡ ಎಷ್ಟು ಕೆಟ್ಟದಾಗಿ ನಡೆದುಕೊಂಡಿತ್ತು ಎಂದರೆ, ಅಲ್ಲಿನ ಹೆಂಗಸರೇ "ಬಾಯಿ ಮುಚ್ಚಿಕೊಂಡು ಜಾಗ ಖಾಲಿ ಮಾಡದೇ ಇದ್ದರೆ ನೆಟ್ಟಗಾಗುವುದಿಲ್ಲ" ಎಂದು ಎಚ್ಚರಿಸಬೇಕಾಯಿತು. ಆ ತಂಡಕ್ಕೆ ಹಳ್ಳಿಗರ ಸಮಸ್ಯೆ ಗಂಭೀರ ಎನ್ನಿಸಿರಲೇ ಇಲ್ಲ. ಕೇವಲ ಹೆಣ್ಣು ಮಕ್ಕಳಿಗೆ ಮುಜುಗರದ ಪ್ರಶ್ನೆಗಳನ್ನು ಕೇಳಿ ಮಜಾ ತೆಗೆದುಕೊಳ್ಳಲು ಅವರು ಉದ್ದೇಶಿಸಿದಂತಿತ್ತು.

ಕೆಲವರು ಮಕ್ಕಳಿಲ್ಲದ ಸಮಸ್ಯೆ ನಿವಾರಣೆಗೆ ಸುಲಭ ಉಪಾಯ ಎಂದು ಒಂದಕ್ಕಿಂತ ಹೆಚ್ಚು ಜನರನ್ನು ಮದುವೆ ಆಗಿದ್ದಾರೆ. ಆದರೆ ಪರಿಣಾಮ ಮಾತ್ರ ಶೂನ್ಯ. ರತಿಭಾನ್ ಎಂಬಾತ ಮೂವರನ್ನು ಮದುವೆ ಆಗಿದ್ದಾನೆ. ಇಂಥವರು ಸಾಕಷ್ಟು ಜನ ಹರಾಯಿಯಲ್ಲಿ ಇದ್ದಾರೆ. ಮುಖ್ಯಸ್ಥ ಹರಿಭಜನ್‌ನ ಐದನೇ ಹೆಂಡತಿ ಬೇರೊಂದು ಊರಲ್ಲಿ ಮಗು ಹೆತ್ತಿದ್ದು ಬಿಟ್ಟರೆ, ಅಂಥ ಆಶಾದಾಯಕ ಫಲಿತಾಂಶ ಕಂಡು ಬಂದಿಲ್ಲ.

**ಇಡೀ ಹಳ್ಳಿಯಲ್ಲಿ ಮಕ್ಕಳೇ ಇಲ್ಲ. ಮಕ್ಕಳು ಹುಟ್ಟುತ್ತಲೂ ಇಲ್ಲ. ನವರಾತ್ರಿ ಸಮಯದಲ್ಲಿ ಆಕಾಶಕ್ಕೆ ಗುಂಡು ಹಾರಿಸುವ ಸಂಪ್ರದಾಯ ಇತ್ತು. ಅದು ನಿಂತು ದೇವರು ಮುನಿಸಿಕೊಂಡಿದ್ದಾನೆ. ಹಾಗಾಗಿಯೇ ಇಲ್ಲಿ ಮಕ್ಕಳು ಹುಟ್ಟುತ್ತಿಲ್ಲ ಎನ್ನುತ್ತಾರೆ ಅಲ್ಲಿನ ಜನ.**

ಹಳ್ಳಿಗರು ತಮಗೆ ಮಕ್ಕಳಾಗದೇ ಇರಲು ದೇವರ ಶಾಪವೇ ಕಾರಣ ಎಂದು ನಂಬುತ್ತಾರೆ. ಹಳ್ಳಿಗರು ದಸರಾ ಸಮಯದಲ್ಲಿ ಒಂಬತ್ತು ದಿನಗಳ ಕಾಲ ಚಂದ್ರನತ್ತ ಗುರಿ ಮಾಡಿ ಗಾಳಿಯಲ್ಲಿ ಬಂದೂಕಿನಿಂದ ಗುಂಡು ಹಾರಿಸುತ್ತಾ ಇದ್ದರು. ಇದರಿಂದ ಸುಪ್ರೀತನಾಗಿ ದೇವರು ಹತ್ತು ಹತ್ತು ಮಕ್ಕಳನ್ನು ಕರುಣಿಸುತ್ತಾ ಇದ್ದ., 1962ರಲ್ಲಿ ಸರ್ಕಾರ ಜನರಲ್ಲಿ ಇದ್ದ ಬಂದೂಕಗಳನ್ನು ಜಪ್ತು ಮಾಡಿಕೊಂಡಿತು. ಆಗಿನಿಂದ ನವದುರ್ಗಾ ಹಬ್ಬದಲ್ಲಿ ಗುಂಡು ಹಾರಿಸುವ ಕ್ರಮ ನಿಂತು, ದೇವರು ಮುನಿದಿದ್ದಾನೆ. ಹಾಗಾಗಿಯೇ ಮಕ್ಕಳಾಗುತ್ತಿಲ್ಲ. ಏನೇನೋ ಪ್ರಯೋಗ ಮಾಡಿ ತಲೆ ಕೆಡಿಸಿಕೊಳ್ಳುವ ಬದಲು ಸರ್ಕಾರ ಹರಾಯಿಯ ಹಳ್ಳಿಗರಿಗೆ ಮರಳಿ ಬಂದೂಕ ಕೊಟ್ಟು ಏಕೆ ಪರೀಕ್ಷಿಸಬಾರದು? ಎನ್ನುತ್ತಾರೆ ಹಳ್ಳಿಗರು.

ಸರ್ಕಾರದ ತಂಡಗಳಿರಲಿ, ಸಮಾಜ ಸೇವಾ ಸಂಸ್ಥೆಗಳು ಎಷ್ಟೋ ಸಲ ಹಳ್ಳಿಗರ ಸಮಸ್ಯೆ ಅಧ್ಯಯನಕ್ಕೆ ಬಂದುಹೋಗಿವೆ. ಜಬಲ್‌ಪುರದ ಐಸಿಎಂಆರ್ ಈವರೆಗೂ ತನ್ನ ಅಧ್ಯಯನದ ವರದಿ ಪ್ರಕಟಪಡಿಸಿಲ್ಲ.

ಹರಾಯಿಯಲ್ಲಿ ಯಾವ ತಂಡವೂ ಗಂಭೀರವಾಗಿ ಅಧ್ಯಯನ ನಡೆಸಿ, ಸಮಸ್ಯೆ ಪರಿಹಾರಕ್ಕೆ ಯತ್ನಿಸಿಲ್ಲ ಎಂದು ಪತ್ರಿಕೆಗಳು ಹೇಳುತ್ತವೆ.

ದೆಹಲಿಯಿಂದ ಬಂದಿದ್ದ ತಂಡವೊಂದು ಹಳ್ಳಿಗೆ ಹೋಗಬೇಕಾದರೆ ಏಳು ಕಿ.ಮೀ. ನಡೆಯಬೇಕು ಎಂದು ತಿಳಿಯುತ್ತಲೇ ಜಿಲ್ಲಾ ಕೇಂದ್ರವಾದ ಸಿಧಿಯಿಂದಲೇ ಕಾಲ್ತೆಗೆದು ದೆಹಲಿಗೆ ಹಿಂದಿರುಗಿತು.

ಕಳೆದ ವರ್ಷ ರಾಜ್ಯ ಸರ್ಕಾರದ ಸೂಚನೆಯಂತೆ ರೇವಾ ವೈದ್ಯಕೀಯ ಕಾಲೇಜಿನ ಸಮುದಾಯ ಚಿಕಿತ್ಸೆ ವಿಭಾಗದ ಮುಖ್ಯಸ್ಥ ಡಾ. ಎಸ್.ಎಸ್.ಖುಷ್‌ವಾಹ ಹಳ್ಳಿಯಲ್ಲಿ ಅಧ್ಯಯನ ನಡೆಸಿದರು.

ಹಳ್ಳಿಯಲ್ಲಿ ಅರ್ಧದಷ್ಟು ಜನಕ್ಕೆ ಗೊನೇರಿಯಾ, ಸಿಫಿಲಿಸ್‌ನಂಥ ಲೈಂಗಿಕ ರೋಗಗಳಿವೆ. ಅಪೌಷ್ಟಿಕತೆಯಿಂದ ಅನಾರೋಗ್ಯ ಹಾಗೂ ಲೈಂಗಿಕ ಆಸಕ್ತಿ ಕುಗ್ಗಿದೆ ಎಂದು ಅವರು ಹೇಳುತ್ತಾರೆ.

ಹರಾಯಿಯ ಜನಕ್ಕೆ ಈ ಬಗ್ಗೆ ತಿಳುವಳಿಕೆ ನೀಡಬೇಕು. ವಿಟಮಿನ್ ಮಾತ್ರೆಗಳ ಮೂಲಕ ಅವರಲ್ಲಿ ಪೌಷ್ಟಿಕತೆ ತುಂಬಬೇಕು ಎನ್ನುತ್ತಾರೆ.

ಇದೆಲ್ಲ ಕೇವಲ ಬಾಯಿ ಮಾತಿನ ವಿಚಾರಣೆಯ ನಂತರ ಕಂಡುಕೊಂಡ ಅಂಶಗಳು. ಯಾರನ್ನೂ ವೈದ್ಯಕೀಯ ಪರೀಕ್ಷೆಗೆ ಗುರಿಮಾಡಲಿಲ್ಲ. ಆ ಜನ ಪರೀಕ್ಷೆಗಾಗಿ ವೀರ್ಯ ಒದಗಿಸಲು ನಿರಾಕರಿಸಿದರು. ಹೀಗಾಗಿ ಮಕ್ಕಳೇ ಆಗದ ಹರಾಯಿಯ ಸಮಸ್ಯೆಯ ಕಾರಣ ಇನ್ನೂ ನಿಗೂಢವಾಗಿಯೇ ಉಳಿದಿದೆ.

ಪ್ರೊ. ಖುಷ್‌ವಾಹ ಹೇಳುವ ಇನ್ನೊಂದು ಅಭಿಪ್ರಾಯವೆಂದರೆ, ಇದು ವೈದ್ಯಕೀಯ ಸಮಸ್ಯೆಯೇ ಅಲ್ಲ. ಸಾಮಾಜಿಕ ಕಾರಣಗಳೇ ಇಂಥ ಬಂಜೆತನಕ್ಕೆ ಕಾರಣ ಇರಬೇಕು. ಆ ಬಗ್ಗೆ ಸಮಗ್ರವಾಗಿ ಅಧ್ಯಯನ ನಡೆಸಿದರೆ ಒಳ್ಳೆಯದು ಎಂದೂ ಅವರು ಸೂಚಿಸುತ್ತಾರೆ. ■

# ಉತ್ತಮ ಕೆಲಸಕ್ಕೆ ಮದ್ಯಪಾನ !



**ಸಾರಾಯಿ ಅಥವಾ ಕಳ್ಳಭಟ್ಟಿ ಹೊಟ್ಟೆ ಸೇರಿದರೇ ಅವರು ಕೆಲಸ ಮಾಡುವುದು. ಇಲ್ಲದೇ ಇದ್ದರೆ ಸಾಧ್ಯವೇ ಇಲ್ಲ ಎಂಬಂಥ ಪರಿಸ್ಥಿತಿ. ಅವರು ಎಂಥೆಂಥದೋ ಕಳ್ಳಭಟ್ಟಿ ಕುಡಿದು ಆರೋಗ್ಯ ಕೆಡಿಸಿಕೊಳ್ಳುತ್ತಾರೆ. ಅದರ ಬದಲು ಸರ್ಕಾರವೇ ಒಳ್ಳೆಯ ಸರಕು ಒದಗಿಸಲಿ ಎಂದು ಅಧಿಕಾರಿಗಳೇ ಹೇಳುತ್ತಾರೆ.**

ಅವರೆಲ್ಲ ಬೆಳಿಗ್ಗೆ ಕೆಲಸಕ್ಕೆ ಹೊರಡುವ ಮುನ್ನ ತಿಂಡಿ ತಿನ್ನುವುದಿಲ್ಲ. ಹತ್ತಿರದ ಕೊಳಗೇರಿಯಲ್ಲಿ ಹುಡುಕಿಕೊಂಡು ಹೋಗಿ, ಎರಡು ಗ್ಲಾಸು ಏರಿಸಿದ ಮೇಲೇ ಏನಿದ್ದರೂ ಕೆಲಸ.

ಅವರ ಕೆಲಸವೂ ಅಂಥದ್ದೇ. ಕಟ್ಟಿಕೊಂಡ ಮ್ಯಾನ್‌ಹೋಲ್‌ಗಳನ್ನು ಸರಿಪಡಿಸುವುದು. ಅಹಮದಾಬಾದ್ ಮುನಿಸಿಪಲ್ ಕಾರ್ಪೊರೇಷನ್‌ನಲ್ಲಿ ಇಂಥ 900 ಜನ ಕೆಲಸಗಾರರಿದ್ದಾರೆ. ಇವರೆಲ್ಲರ ನಿತ್ಯಯಾತ್ರೆ ಆರಂಭ ಆಗುವುದೇ ಕೊಳೆಗೇರಿಗಳ ಕಳ್ಳಭಟ್ಟಿ ಅಡ್ಡೆಗಳಲ್ಲಿ ಎರಡು ಗ್ಲಾಸು ಏರಿಸಿದ ನಂತರವೇ.

ಕೆಲವರು ಹೀಗೆ ಕುಡಿದು ಬಸ್ ಏರಿ ತಾವು ಕೆಲಸ ಮಾಡುವ ಜಾಗೆಗಳಿಗೆ ಹೋಗುತ್ತಾರೆ. ಕಟ್ಟಿಕೊಂಡ ಚರಂಡಿಗಳನ್ನು, ಮ್ಯಾನ್‌ಹೋಲ್‌ಗಳನ್ನು ದಿನವಿಡೀ ಸರಿಪಡಿಪಡಿಸುತ್ತಾರೆ.

ಬಹಳಷ್ಟು ಸಲ ಕಟ್ಟಿಗೆ, ಬಿದಿರು ಗಳುಗಳಿಂದ, ಕಬ್ಬಿಣದ ಸಲಾಕೆಗಳಿಂದ ಕೆಲಸವಾಗುವುದಿಲ್ಲ. ಆಗ ಒಂದಿಷ್ಟು ಹಿಂದುಮುಂದೆ ನೋಡದೇ ಆ ಗಲೀಜಿಗೆ ಇಳಿಯುತ್ತಾರೆ. ಕೈಹಾಕಿ ಗಲೀಜು ಹರಿಯಲು ಅಡ್ಡವಾಗಿರುವ ವಸ್ತುಗಳನ್ನು ತೆಗೆದು ಹಾಕುತ್ತಾರೆ.

ಹತ್ತಿರ ನಿಂತರೂ ವಾಕರಿಕೆ ಬರುವಂಥ ಅಂಥ ಮ್ಯಾನ್‌ಹೋಲ್‌ಗಳಲ್ಲಿ ಸಲೀಸಾಗಿ ಇಳಿಯಲು, ಕೈ ಹಾಕಿ ಗಲೀಜು ತೆಗೆಯಲು ಅವರಿಗೆ ಕಳ್ಳಭಟ್ಟಿ ಬೇಕೇ ಬೇಕು. ಅಪರೂಪಕ್ಕೆ ಎಂಬಂತೆ ಸಾರಾಯಿ ಸಿಗುವುದೂ ಉಂಟು. ನಿತ್ಯವೂ ಇಂಥ ಗಲೀಜಲ್ಲಿ ಮುಳುಗಿ ಎದ್ದು ಅವರು ಎಷ್ಟು ಜಡ್ಡುಗಟ್ಟಿದ್ದಾರೆ ಎಂದರೆ, ಕೆಲಸಕ್ಕೆ ಮುಂಚೆ ಕುಡಿದ ಹಾಗೆ, ಸಂಜೆಯಾದರೆ ಮತ್ತದೇ ಅಗ್ಗದ ಕಳ್ಳಭಟ್ಟಿ ಕುಡಿದು ಬೀಳುತ್ತಾರೆ.

ಕೆಲಸಗಾರರಿರಲಿ, ಮುನಿಸಿಪಲ್ ಅಧಿಕಾರಿಗಳೇ ಅವರು ಹಾಗೆ ಕುಡಿಯದೇ ಇದ್ದರೆ ಕೆಲಸ ಮಾಡುವುದು ಸಾಧ್ಯವೇ ಇಲ್ಲ ಎನ್ನುತ್ತಾರೆ. ಇಂಥ ಮನುಷ್ಯ ಸಂವೇದನೆಗಳೇ ಇಲ್ಲವಾಗಿಸಿಕೊಂಡು, ಕುಡಿದು ಕುಡಿದು ಅಹಮದಾಬಾದ್ ಜನಕ್ಕೆ ಸಲೀಸು ಹರಿಯುವ ಚರಂಡಿಗಳನ್ನು ಒದಗಿಸುವ ಈ ಜನರ ಬದುಕು ಅಸಹ್ಯವೆಂದರೆ ಅಸಹ್ಯ. ಬಹುಪಾಲು ಜನಕ್ಕೆ ಸಾಂಸಾರಿಕ ಸುಖವೂ ಇಲ್ಲ. ಬೆಳಗಾದರೆ ಕುಡಿದು ಕೆಲಸಕ್ಕೆ ಹೋಗಿ, ಸಂಜೆಯಾಗುತ್ತಿದ್ದಂತೆ ಇನ್ನಷ್ಟು ಸುರಿದುಕೊಂಡು ಬಂದುಬೀಳುವ ಇಂಥ ಜನಕ್ಕೆ ತಮ್ಮದೇ ಜೀವನ ಎಂಬುದೂ ಇಲ್ಲ.

ಕಾಮಗಾರ ಸ್ವಾಸ್ಥ್ಯ ಸುರಕ್ಷಾ ಮಂಡಳಿ ಎಂಬ ಸಂಸ್ಥೆ ಇಂಥ ಕೆಲಸಗಾರರ ನೆರವಿಗೆ ಬರಲು ಯತ್ನ ನಡೆಸುತ್ತಿದೆ. ಅವರಲ್ಲಿನ ಕುಡಿಯುವ ಚಟ ಬಿಡಿಸಲು ಯತ್ನಿಸುತ್ತಿದೆ. ಆದರೆ ಬಹುಪಾಲು ಮುನಿಸಿಪಲ್ ಕೆಲಸಗಾರರು ಮರಳಿ ಬಾರದ ಹಂತಕ್ಕೆ ಹೋಗಿಬಿಟ್ಟಿದ್ದಾರೆ.

ಇಂಥ ಸಂದರ್ಭದಲ್ಲಿ ಈ ಕೆಲಸಗಾರರ ದಂಡಿನ ಉಸ್ತುವಾರಿ ನೋಡಿಕೊಳ್ಳುವ ಉಪ ಮುನಿಸಿಪಲ್ ಕಮೀಷನರ್ ಕೆ.ಎಸ್.ಸರೈಯಾ ''ಕೆಲಸಗಾರರಿಗೆ ಕುಡಿತದಿಂದ ದುಡಿಯುವ ಶಕ್ತಿ ಬರುತ್ತದೆ'' ಎಂಬಂಥ ಹೇಳಿಕೆಗಳನ್ನು ನೀಡಿ ಕೈ ತೊಳೆದುಕೊಂಡಿದ್ದಾರೆ. ಕುಡಿಯುವುದೇ ಅನಿವಾರ್ಯ ಆದಲ್ಲಿ ಒಳ್ಳೆಯ ಸರಕು ಸರ್ಕಾರವೇ ಒದಗಿಸಲಿ. ಅದರಿಂದ ಎಂಥೆಂಥದೋ ಕಳ್ಳಭಟ್ಟಿಯ ಮಾಲು ಕುಡಿದು ಕರುಳು ತೂತು ಬೀಳಿಸಿಕೊಂಡು, ಅವರು ನಿರುಪಯುಕ್ತ ಆಗುವುದಾದರೂ ಸ್ವಲ್ಪ ಹತೋಟಿಗೆ ಬರುತ್ತದೆ. ಎಂದು ಇನ್ನು ಕೆಲವು ಮುನಿಸಿಪಲ್ ಅಧಿಕಾರಿಗಳು ಹೇಳುತ್ತಾರೆ. ■

---

**ಫಾಸ್ಟ್‌ಫುಡ್ ಇಂದಿನ ಫ್ಯಾಷನ್. ಆದರೆ ಅದು ಆರೋಗ್ಯಕರವಂತೂ ಅಲ್ಲ. ಹಾಗೆಂದು ತಜ್ಞರು, ವೈದ್ಯರು, ಅಷ್ಟೇಕೆ ನ್ಯಾಯಾಲಯವೇ ಹೇಳಿದೆ. ಜಗತ್ತಿನಾದ್ಯಂತ ಇರುವ ಮ್ಯಾಕ್‌ಡೋನಾಲ್ಡ್ ಫಾಸ್ಟ್‌ಫುಡ್ ಮಳಿಗೆಗಳು ವ್ಯಾಪಕವಾಗಿ ಪ್ರಚಾರ ಮಾಡುತ್ತಿದ್ದು, ತಾವು ಉಣಬಡಿಸುವ ಆಹಾರ ಪುಷ್ಟಿಕಾರಕ ಎಂದು ಹೇಳಿದ್ದಕ್ಕಾಗಿ ಬ್ರಿಟನ್ನಿನ ನ್ಯಾಯಾಲಯಗಳು ಕಂಪೆನಿಯನ್ನು ತರಾಟೆಗೆ ತೆಗೆದುಕೊಂಡಿವೆ.**

**ವಾರಕ್ಕೆ ಹಲವು ಸಲ ಮ್ಯಾಕ್‌ಡೊನಾಲ್ಡ್ ಮಳಿಗೆಗಳ ಆಹಾರ ಸೇವಿಸುವವರು ಹೃದ್ರೋಗಕ್ಕೆ ತುತ್ತಾಗುತ್ತಾರೆ ಎಂದಿದೆ ನ್ಯಾಯಾಲಯ. ಕಂಪೆನಿಯು ತನ್ನ ಜಾಹೀರಾತುಗಳಿಂದ ಮಕ್ಕಳನ್ನು ಮರುಳು ಮಾಡಿ ಸುಲಿಗೆ ಎಂದೂ ನ್ಯಾಯಾಲಯ ಆಕ್ಷೇಪ ಎತ್ತಿದೆ. ಫುಡ್ ಕಮೀಷನ್ ಎಂಬ ಲಂಡನ್‌ನ ಗ್ರಾಹಕ ವೇದಿಕೆ ಬ್ರಿಟನ್ನಿನ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿ, ಮ್ಯಾಕ್‌ಡೊನಾಲ್ಡ್ ಆಹಾರದಲ್ಲಿ ಅತಿ ಹೆಚ್ಚು ಕೊಬ್ಬು ಮತ್ತು ಲವಣಗಳಿರುತ್ತವೆ ಎಂದು ವಾದಿಸಿತ್ತು.**

# ಕಳುವು ಮಾಡುವುದೂ ಒಂದು ಮಾನಸಿಕ ರೋಗ !

'ಕ್ಲೆಪ್ಟೋಮೇನಿಯಾ' ಎಂದು ಅದನ್ನು ಕರೆಯುತ್ತಾರೆ. ಅಂಥ ವ್ಯಕ್ತಿಗಳಿಗೆ ಏನಾದರೊಂದು ವಸ್ತು ಕದಿಯದೇ ಹೋದರೆ ಸಮಾಧಾನವೇ ಇರುವುದಿಲ್ಲ. ಅದು ದೊಡ್ಡ ಗೀಳಾಗಿ, ಮನಸ್ಸಿನ ಕಾಯಿಲೆಯಾಗಿ ಬೆಳೆಯುತ್ತದಂತೆ. ಅದಕ್ಕೆ ಸೂಕ್ತ ಚಿಕಿತ್ಸೆ ಸಾಧ್ಯ. ಮನೋವಿಜ್ಞಾನಿಗಳು ಅದಕ್ಕೆ ಪ್ರೇರಕವಾದ ಸಂಗತಿಗಳನ್ನು ಗಮನಿಸಿ ಚಿಕಿತ್ಸೆ ನೀಡುತ್ತಾರಂತೆ.

ಒಂದು ಕಾಲಕ್ಕೆ 'ಸ್ಟೀಲ್ ಲೋಟಾ ಕದಿಯುವವರನ್ನು ಹಿಡಿದುಕೊಟ್ಟರೆ ಬಹುಮಾನ' ಎಂಬ ಬೋರ್ಡು ಎಲ್ಲಾ ಹೋಟೆಲುಗಳಲ್ಲಿ ಇರುತ್ತಿತ್ತು. ಅದನ್ನು ನೋಡಿದಾಗೆಲ್ಲಾ 'ಇಂಥ ಲೋಟಾ ಕದಿಯುವವರು ಇದರಿಂದೇನು ಸಾಧಿಸುತ್ತಾರಪ್ಪ!' ಎಂದು ಯೋಚಿಸುತ್ತಿದ್ದೆ. ಇಂಥ ಸಣ್ಣ ಪುಟ್ಟ ವಸ್ತುಗಳನ್ನು ವೃತ್ತಿಯಿಂದ ಕಳ್ಳರಾದವರು ಕದಿಯುವುದಿಲ್ಲ. ಏನೋ ಒಂದು ಬಗೆಯ ರೋಮಾಂಚನಕ್ಕಾಗಿ ಸಭ್ಯರೆನಿಸಿದ ಜನರೇ ಇಂಥ ಕೆಲಸ ಮಾಡುತ್ತಾರೆ ಎಂಬುದು ನನ್ನ ಗಮನಕ್ಕೆ ಬಂದಿತ್ತು. ಕಾಲೇಜಲ್ಲಿ ಇರುವಾಗ ನಮ್ಮ ಪರಿಚಯದ ವ್ಯಕ್ತಿಯೊಬ್ಬ, ಹೋಟೆಲಿಗೆ ಹೋದರೆ ಏನಾದರೊಂದು ತಕರಾರು ಮಾಡುತ್ತಿದ್ದ. ಮಾಣಿಗಳ ಮೇಲೆ ಜೋರು ಮಾಡುತ್ತಿದ್ದ. ಅವರು ತಿರುಗಿಬಿದ್ದರೆ, ಹೇಗಾದರೂ ಮಾಡಿ ಸಣ್ಣ ಚಮಚೆ, ತಟ್ಟೆಗಳನ್ನು ಕದ್ದು ತಂದು ''ಸರಿಯಾಗಿ ಪಾಠ ಕಲಿಸಿದೆ'' ಎಂಬಂತೆ ಬೀಗುತ್ತಿದ್ದ. ಅವನ ರೂಮಿನಲ್ಲಿ ಸಾಕಷ್ಟು ಚಮಚೆಗಳು, ಸಣ್ಣ ಬಟ್ಟಲು, ಪ್ಲೇಟುಗಳು ಇದ್ದವು. ಅವನ್ನೆಲ್ಲ ಕದ್ದು ತಂದ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದ. ಅದೂ ಒಂದು ರೀತಿಯ ಹುಡುಗಾಟಿಕೆ ಎಂದೇ ನಮಗೆ ತೋರುತ್ತಿತ್ತು. ನಾವು ಬೆಂಗಳೂರಲ್ಲಿ ಮನೆ ಮಾಡಿದಾಗ ಇಂಥ ಕಳುವಿನ ಚಟದ ಬೇರೊಂದು ಸ್ವರೂಪ ನೋಡಿದೆವು. ನಾವಿದ್ದ ಮನೆಯ ಮಾಲೀಕರು ಶ್ರೀಮಂತರು. ಕೇಂದ್ರ ಸರ್ಕಾರದಲ್ಲಿ ನೌಕರಿ. ಅವರಿಗೆ ನಾವಿದ್ದ ಮನೆಯಲ್ಲದೆ ನಗರದ ಬೇರೆ ಎರಡು ಕಡೆ ಒಳ್ಳೆಯ ಮನೆಗಳಿದ್ದವು. ಅವುಗಳಿಂದ ಸಾಕಷ್ಟು ಬಾಡಿಗೆ ಬರುತ್ತಿತ್ತು. ಸ್ಕೂಟರು, ಕಾರು ಎಲ್ಲ ಇತ್ತು. ನೋಡಲು ಚಂದವಿದ್ದ ಹೆಂಡತಿ, ಎರಡು ಗಂಡು ಮಕ್ಕಳು. ಇನ್ನೇನು ಬೇಕು?

ಈ ಹುಡುಗರು ಔಟ್‌ಹೌಸ್‌ನಲ್ಲಿದ್ದ ನಮ್ಮಲ್ಲಿಗೆ ಬರುತ್ತಾ ಇದ್ದರು. ಆಡಿಕೊಳ್ಳುತ್ತಾ ಇದ್ದರು. ಅವರಲ್ಲಿ ಚಿಕ್ಕವನು ಕಾರ್ತಿಕ್. ಆಗಷ್ಟೇ ಶಾಲೆಗೆ ಹೋಗುತ್ತಿದ್ದ. ದೊಡ್ಡವನು ಕೃಷ್ಣ. ಅವನಿಗೆ ಹನ್ನೆರಡೋ, ಹದಿಮೂರೋ ವರ್ಷ.

ಕೆಲವು ದಿನಗಳಲ್ಲಿ ಸಣ್ಣ ಹುಡುಗ ನಮ್ಮ ಮನೆಯಿಂದ ಸಣ್ಣ ಪುಟ್ಟ ವಸ್ತುಗಳನ್ನು ಕದ್ದೊಯ್ಯುತ್ತಾನೆ ಎಂಬುದು ನಮಗೆ ಗೊತ್ತಾಗತೊಡಗಿತು. ಪೆನ್ಸಿಲು, ಪೆನ್ನು, ಪೇಪರ್ ವೈಟ್, ಸಣ್ಣ ಕತ್ತರಿ, ಹೀಗೇ. ಬಹುಶಃ ಅವನ ಕಣ್ಣಿಗೆ ಚಂದ ಕಾಣುತ್ತಿದ್ದ ವಸ್ತುಗಳನ್ನು ಎತ್ತಿಕೊಂಡು ಹೋಗುತ್ತಿದ್ದ. ಅವನೇ ಈ ಕೆಲಸ ಮಾಡುತ್ತಿದ್ದಾನೆ ಎಂದು ಹೇಳುವಂತಿಲ್ಲ. ನಾವ್ಯಾರೂ ಅದನ್ನು ನೋಡಿರಲಿಲ್ಲ.

ಒಂದು ಸಲ ನನ್ನ ಮನೆಯಾಕೆ ಅವರ ಮನೆಗೆ ಹೋದಾಗ ಕಾರ್ತಿಕ್ ಏನೇನೋ ವಸ್ತು ಚೆಲ್ಲಿಕೊಂಡು ಆಡುತ್ತಿದ್ದ. ಅದರಲ್ಲಿ ನಮ್ಮ ಮನೆಯ ಕೆಲವು ವಸ್ತು ಕಂಡಿವೆ. ಅದರಲ್ಲೂ ಬೆಲೆಬಾಳುವ ಪೇಪರ್‌ವೈಟ್ ಒಂದಿತ್ತು.

''ಇದೆಲ್ಲಿ ಸಿಕ್ಕಿತಪ್ಪಾ ನಿನಗೆ? ನಮ್ಮದಲ್ಲವೆ?'' ಎಂದು ಕೇಳಿದ್ದಾಳೆ.

''ಇಲ್ಲ ಇದು ನನ್ನದು....'' ಎಂದು ಅದನ್ನವನು ಗಬಕ್ಕನೆ ಎತ್ತಿಕೊಂಡಿದ್ದಾನೆ. ಇದೆಲ್ಲ ನೋಡುತ್ತಿದ್ದ ಅವನ ತಾಯಿ ಗಿರಿಜಾ,

''ಆಂಟಿ ಮನೆಯಿಂದ ತಗೊಂಡು ಬಂದೆಯಾ? ತುಂಟ....'' ಎಂದು ಮುದ್ದು ಮಾಡುತ್ತಾ, ಮಗನ ಇಂಥ ಹಲವಾರು ಸಾಹಸಗಳನ್ನು ಬಣ್ಣಿಸುತ್ತಾ ಕುಳಿತಿದ್ದಾರೆ. ನಮ್ಮ ಮನೆಯವಳಿಗೆ ಇದು ಆಶ್ಚರ್ಯವಾಗಿ ಕಂಡಿತು. ಹುಡುಗ ತಪ್ಪು ಮಾಡಿದ್ದಾನೆ. ಅವನಿಗೆ ತಿಳುವಳಿಕೆ ಸಾಲದು. ಆದರೆ ತಾಯಿಯಾದವಳು ಇದು ಸರಿಯಲ್ಲ, ಹಾಗೆಲ್ಲ ತಪ್ಪು ಮಾಡಬಾರದು ಎಂದು ತಿಳಿಸಿ ಹೇಳುವ ಬದಲು, ಮಗನ ಕೆಲಸ ಒಂದು ಸಾಹಸವೆಂಬಂತೆ, ರೋಮಾಂಚಕ ಘಟನೆ ಎಂಬಂತೆ, ಅವನೆದುರೇ ಬಣ್ಣಿಸುತ್ತಾ ಕುಳಿತಿದ್ದಾಳೆ. ಅದೆಲ್ಲ ಆಕೆಗೆ ನೇರವಾಗಿ ಹೇಳುವುದೂ ಕಷ್ಟ. ಶ್ರೀಮಂತರ ಅಹಮಿಕೆಗಳು ನಾನಾರೂಪದಲ್ಲಿ ಪ್ರಕಟವಾಗುತ್ತವೆ. ಅದಕ್ಕೆ ಧಕ್ಕೆ ಆಗುವಂಥ ಯಾವುದೇ ಸತ್ಯವೂ ಅವರಿಗೆ ಕಹಿಯಾಗಿ ಕಾಣುತ್ತದೆ. ಹೀಗಾಗಿ ನಮ್ಮ ಮನೆಯಾಕೆ ಇವೆಲ್ಲ ವಿಚಾರ ತಿಳಿಸಿದಾಗ ''ನಮ್ಮ ಎಚ್ಚರದಲ್ಲಿ ನಾವು ಇದ್ದರೆ ಆಯಿತು. ಅವರು ತಪ್ಪು ತಿಳಿದು ತಿದ್ದಿಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಏನಾದರೂ ಹೇಳಿದರೆ ಮನಸ್ಸುಗಳು ಕಹಿಯಾಗುತ್ತವೆ ಅಷ್ಟೇ'' ಎಂದು ಹೇಳಿದ್ದೆ.

ಚಿಕ್ಕ ಹುಡುಗ ಹೀಗೆ. ದೊಡ್ಡವನು ಕೊಂಚ ಮೃದುವಾಗಿ ಕಾಣುತ್ತಿದ್ದ. ಅವನು ಬೇರೆ ರೀತಿ ಅಂದುಕೊಡಿದ್ದೆವು. ಅವನ ಶಾಲೆಯವರು ನಿತ್ಯ ಏನಾದರೊಂದು ದೂರು ಕಳುಹಿಸುತ್ತಾ ಇದ್ದರು. ಆದರೂ ಯಾರೂ ಆ ಬಗ್ಗೆ ತಲೆ ಕೆಡಿಸಿಕೊಂಡ ಹಾಗೆ ಕಾಣೆ. ಈ ನಡುವೆ ಕೃಷ್ಣನ ಹುಟ್ಟುಹಬ್ಬ, ಅವರ ಮನೇಲಿ ಅದಕ್ಕಾಗಿ ಸಡಗರದ ಸಿದ್ಧತೆಗಳು ನಡೆದಿದ್ದವು. ನಮ್ಮವಳು ಆ ಸಂದರ್ಭದಲ್ಲಿ ಉಡುಗೊರೆ ಏನಾದರೂ ಕೊಡಲು ನಿರ್ಧರಿಸಿದ್ದಳು. ಇವಳು ಹೊರಗೆ ಹೋಗುವುದು, ಓಡಾಡುವುದು ಕಡಿಮೆ. ಅಂಥ ಸಂದರ್ಭದಲ್ಲಿ ನಾನು ಜೊತೆ ಇರಬೇಕು. ನನಗಾಗ ಕೆಲಸದ ಒತ್ತಡ. ಬಿಡುವು ಇರಲಿಲ್ಲ. ಕೃಷ್ಣನ ಹುಟ್ಟು ಹಬ್ಬಕ್ಕೆ ಸ್ವಲ್ಪ ದಿನ ಮುಂಚೆ, ಅವನ ತಂದೆ, ತಾಯಿ ಹುಡುಗನನ್ನೂ ಕರೆದುಕೊಂಡು ಅವನಿಗೆ ಬೇಕಾದ ಬಟ್ಟೆ ಬರೆ ಕೊಳ್ಳಲು ಪೇಟೆಗೆ ಹೋಗುವವರಿದ್ದರು. ಇವಳನ್ನೂ ಜೊತೆಗೆ ಬರಲು ಹೇಳಿದ್ದರಂತೆ. ಅಲ್ಲಿಯೇ ಹುಡುಗನಿಗೆ ಏನಾದರೊಂದು ಉಡುಗೊರೆ ಖರೀದಿಸುವುದು ಸಾಧ್ಯವಾದೀತು ಎಂದು ಇವಳೂ ಹೊರಟಿದ್ದಳು.

ಮನೆ ಮಾಲೀಕರು ಕಾರು ಹೊರತೆಗೆದು, ಅದರಲ್ಲಿಯೇ ಕಮರ್ಷಿಯಲ್ ಸ್ಟ್ರೀಟ್‌ನ ಪ್ರಸಿದ್ಧ ಮಕ್ಕಳ ಅಂಗಡಿಗೆ ಹೋಗಿದ್ದಾರೆ. ಅಲ್ಲಿ ಖರೀದಿ ಮುಗಿಸಿ ಬರುವಾಗ ಕೊಂಚ ತಡವಾಯಿತು. ಅವಸರದಿಂದ ಅಡುಗೆ ಮಾಡಿ ಊಟ ಬಡಿಸುತ್ತಾ, ಅಂಗಡೀಲಿ ನಡೆದ ಘಟನೆ ಆತಂಕದಿಂದ ವಿವರಿಸುತ್ತಾ ಹೋದಳು.

ಅದು ದೊಡ್ಡ ಅಂಗಡಿ. ಮೃದು ಮಾತಿನ ಸೇಲ್ಸ್ ಗರ್ಲ್‌ಗಳು. ತೀರಾ ಶ್ರೀಮಂತರಷ್ಟೇ ಆ ಅಂಗಡಿಗೆ ಹೋಗುವುದು. ಹೀಗಾಗಿ ಅಲ್ಲಿನ ಸೇಲ್ಸ್ ಗರ್ಲ್‌ಗಳದ್ದು ನಯವಾದ, ಮೆಚ್ಚಾಗುವ ರೀತಿಯ ಮಾತು, ವರ್ತನೆ. ಖರೀದಿ ಎಲ್ಲ ಮುಗಿಸಿ ಆ ಹುಡುಗಿ ಬಿಲ್ ಮುಂದಿಟ್ಟಿದ್ದಾಳೆ. ಮಾಲೀಕರು ಬಿಲ್ ನೋಡುತ್ತಾ ಹೋದಂತೆ ರೇಗಿದ್ದಾರೆ. ಅವರು ಖರೀದಿಸದ ಕೆಲವು ವಸ್ತುಗಳೂ ಆ ಬಿಲ್‌ನಲ್ಲಿ ಸೇರಿದ್ದು ಅವರ ಗಮನಕ್ಕೆ ಬಂದಿದೆ. ಸ್ವಲ್ಪ ಮುಂಗೋಪಿಯಾದ ಅವರು ಆ ಬಡಪಾಯಿ ಸೇಲ್ಸ್‌ಗರ್ಲ್‌ನ ಕೊಂಚ ತರಾಟೆಗೆ ತೆಗೆದುಕೊಂಡಿದ್ದಾರೆ. ಆಗಲೂ ಆಕೆ ಸ್ಥಿಮಿತ ಕಳೆದುಕೊಳ್ಳದೇ, ನಯವಾದ

ಮಾತಿಂದ "ಇಲ್ಲ, ನಿಮ್ಮವರು ಏನೇನು ತೆಗೆದುಕೊಂಡಿದ್ದಾರೋ. ಅದಕ್ಕೆ ಮಾತ್ರ ಬಿಲ್ ಮಾಡಲಾಗಿದೆ. ನೀವೇ ಪರಿಶೀಲಿಸಿ" ಎಂದೆಲ್ಲ ಹೇಳಿದರೂ, ಇವರು ಕೇಳುತ್ತಿಲ್ಲ. ಅಂಗಡಿಯವರು ಮೋಸಗಾರರು, ಸುಲಿಗೆ ಮಾಡುವವರು ಎಂದೆಲ್ಲ ಚೀರಾಡಿದ್ದಾರೆ. ಸಹಜವಾಗಿ ಉಳಿದ ಗ್ರಾಹಕರೂ ಗುಂಪು ಸೇರಿದ್ದಾರೆ. ಗಲಾಟೆ ಆಗುತ್ತಾ ಇದ್ದುದರಿಂದ ಅಂಗಡಿಯ ಮ್ಯಾನೇಜರ್ ಕೂಡ ಎದ್ದು ಬಂದಿದ್ದಾನೆ. ಅವನ ಬಳಿ ದೂರು, ಒಂದಿಷ್ಟು ಆಪಾದನೆ ಎಲ್ಲ ಆಗಿದೆ. ಹುಡುಗಿಗೆ ಕೊಂಚ ಆತಂಕ. ಇಷ್ಟೆಲ್ಲ ಜನರ ಎದುರು ತಾನು ಕಾರಣವಿಲ್ಲದೆ ತಪ್ಪುಗಾರಳಾಗುತ್ತಿದ್ದೇನೆ ಎಂಬ ಚಡಪಡಿಕೆ. ಮ್ಯಾನೇಜರ್‌ನ ವಿಚಾರಣೆಗೆ ಮತ್ತೆ ಅವಳು, ಅವರು ಏನೇನು ತೆಗೆದುಕೊಂಡಿದ್ದಾರೋ ಅದಕ್ಕಷ್ಟೇ ಬಿಲ್ ಮಾಡಲಾಗಿದೆ ಎಂದು ವಿವರಿಸಿದ್ದಾಳೆ. 'ಸರಿ' ಎಂದ ಮ್ಯಾನೇಜರ್ ಆಗಲೇ ಮುಂದುಗಡೆಯ ಕೌಂಟರ್‌ಗೆ ಕಳಿಸಲಾಗಿದ್ದ ಸಾಮಗ್ರಿಗಳನ್ನು ತರಲು ಹೇಳಿದ್ದಾನೆ. ಬಿಲ್‌ನಲ್ಲಿ ಇದ್ದ ಪಟ್ಟಿಯಂತೆ, ಒಂದೊಂದು ವಸ್ತು ತೆಗೆದಿಡುತ್ತಾ ತಾಳೆ ಮಾಡಿದ್ದಾನೆ. ನೋಡಿದರೆ ಅಲ್ಲಿ ಇಲ್ಲದ ಕೆಲವು ವಸ್ತುಗಳನ್ನೆ ಬಿಲ್‌ನಲ್ಲಿ ಸೇರಿಸಿದ್ದಾಳೆ.

ಮ್ಯಾನೇಜರ್ ರೇಗಾಡಲು ಆರಂಭಿಸಿದ. ಆಗ ಆ ಹುಡುಗಿ 'ಕೊಂಚ ಇರಿ' ಎಂದು ಹುಡುಗನನ್ನು ಕರೆದು, ಅವನ ಜೇಬಿನಲ್ಲಿದ್ದ ಒಂದೊಂದೇ ವಸ್ತು ಹೊರ ತೆಗೆದು ಟೇಬಲ್ ಮೇಲೆ ಇಡುತ್ತಾ ಹೋಗಿದ್ದಾಳೆ. ರಬ್ಬರು, ಪೆನ್ಸಿಲು, ಪೆನ್ನು, ಮೆಂಡರ್, ಸಣ್ಣ ಲಾಟಿಗೆ...... ಇಂಥವೇ

"ಅವನ ತಾಯಿ ಹುಡುಗ ಇದೆಲ್ಲ ಜೇಬೊಳಗೆ ಇಟ್ಟುಕೊಳ್ಳುವುದು ನೋಡಿಯೂ ನಗುತ್ತಾ ಇದ್ದರು. ಹಾಗಾಗಿ ಅವರು ಖರೀದಿಗೆ ಸಮ್ಮತಿಸಿದ್ದಾರೆ ಅಂದುಕೊಂಡೆ" ಎಂದು ವಿವರಣೆ ಕೂಡ ನೀಡಿದಳು. ಅದೆಲ್ಲದರ ಮೌಲ್ಯ ಹೆಚ್ಚೇನೂ ಅಲ್ಲ. ಬಿಲ್ ಬಂದಾಗ, ಗಂಡ ರೇಗುತ್ತಾ ಇದ್ದಾಗ ಹೆಂಡತಿಯಾದವಳು ತಿಳಿದು ಸಮಾಧಾನಿಸಬಹುದಿತ್ತು. ಆಕೆ ಹಾಗೆ ಮಾಡಿಲ್ಲ. ಅಂಗಡಿಗೆ ಬಂದಿದ್ದ ನೂರಾರು ಜನರ ಎದುರು ಅಪಮಾನಿತನಾಗಿ ಕುದಿಯುತ್ತಾ ಆತ ಕಾರು ಬಿಟ್ಟುಕೊಂಡು ಬಂದಿದ್ದಾನೆ.

ಸ್ವಲ್ಪ ಹೊತ್ತಿನಲ್ಲಿ ಮುಂದಿನ ಮನೇಲಿ ಗಲಾಟೆ. ಮನೆ ಮಾಲೀಕನ ಹೆಂಡತಿ ಗಿರಿಜಾ ಓಡೋಡಿ ಬಂದು "ಬೇಗ ಬನ್ನಿ. ನಮ್ಮ ಮನೆಯವರು ಹುಡುಗನ್ನ ಕೊಂದು ಹಾಕಿ ಬಿಡ್ತಾರೆ...." ಎಂದು ಧಾವಂತದಿಂದ ಹೇಳಿದಳು. ಊಟ ಅರ್ಧಕ್ಕೆ ಬಿಟ್ಟು ಹೋಗಿ ನೋಡಿದರೆ ಮನೆ ಮಾಲೀಕ ರೌದ್ರಾವತಾರ ತಾಳಿ ನಿಂತಿದ್ದಾನೆ. ಕೈಯಲ್ಲೊಂದು ಏರ್‌ಗನ್.

"ಇಂಥ ಮಕ್ಕಳು ಇದ್ದರೆಷ್ಟು! ಸತ್ತರೆಷ್ಟು!" ಎಂದು ಕೂಗಾಡುತ್ತಾ ಇದ್ದಾನೆ. ಆತನನನ್ನು ಸಮಾಧಾನಿಸಿ, ಹುಡುಗನನ್ನು ಮನೆಗೆ ಕರೆದು ತಂದು ಅವತ್ತು ರಾತ್ರಿ ನಮ್ಮಲ್ಲಿಯೇ ಉಳಿಸಿಕೊಂಡೆವು.

ಸ್ವಲ್ಪ ದಿನದಲ್ಲಿ ಆ ಮನೆ ಬಿಟ್ಟು ಬೇರೆ ಮನೆಗೆ ಬಂದೆವು. ಆ ಮಾಲೀಕ ಮತ್ತು ಅವರ ಮನೆ ವಿಚಾರ ಮರೆತೇ ಹೋಗಿತ್ತು. ಅಂಥದರಲ್ಲಿ ಒಂದು ದಿನ ಮನೆ ಮಾಲೀಕನ ದಾಯಾದಿಯೊಬ್ಬ ಸಿಕ್ಕು ಕೆಲವು ಸಂಗತಿ ಹೇಳಿದ. ಮಾಲೀಕನ ಮಗ ಕೃಷ್ಣನಿಗೆ ಕಳವಿನ ರೋಗ ಅಂಟಿಕೊಂಡಿತ್ತು. ಅದನ್ನು ಬಿಡಿಸಲು ಈಗ ಸೈಕಾಲಜಿಸ್ಟ್ ಒಬ್ಬರಿಂದ ಚಿಕಿತ್ಸೆ ಕೊಡಿಸುತ್ತಿದ್ದಾರೆ ಎಂದ.

ಇದು ಕೊಂಚ ಆಶ್ಚರ್ಯವಾಗಿ ಕಂಡಿತು. ಕಳವು ಮಾಡುವುದು ಕೆಲವರಿಗೆ ಚಟ. ಕೆಲವರಿಗೆ ಹೊಟ್ಟೆ ಹೊರೆಯುವ ದಾರಿ. ಇದನ್ನು ಚಿಕಿತ್ಸೆಯಿಂದ ಸರಿಪಡಿಸಲು ಸಾಧ್ಯವೇ! ಅನ್ನಿಸಿತು. ಆಮೇಲೆ ಅವರೇ ಹೇಳಿದರು.

'ಕ್ಲೆಪ್ಟೋಮೇನಿಯಾ' ಎಂದು ಅದನ್ನು ಕರೆಯುತ್ತಾರೆ. ಅಂಥ ವ್ಯಕ್ತಿಗಳಿಗೆ ಏನಾದರೊಂದು ವಸ್ತು ಕದಿಯದೇ ಹೋದರೆ ಸಮಾಧಾನವೇ ಇರುವುದಿಲ್ಲ. ಅದು ದೊಡ್ಡ ಗೀಳಾಗಿ, ಮನಸ್ಸಿನ ಕಾಯಿಲೆಯಾಗಿ ಬೆಳೆಯುತ್ತದಂತೆ. ಅದಕ್ಕೆ ಸೂಕ್ತ ಚಿಕಿತ್ಸೆ ಸಾಧ್ಯ. ಮನೋವಿಜ್ಞಾನಿಗಳು ಅದಕ್ಕೆ ಪ್ರೇರಕವಾದ ಸಂಗತಿಗಳನ್ನು ಗಮನಿಸಿ ಚಿಕಿತ್ಸೆ ನೀಡುತ್ತಾರಂತೆ. ಅಂಥದೊಂದು ಚಿಕಿತ್ಸೆ ಕೃಷ್ಣನನ್ನು ಸರಿಗೊಳಿಸಲಿ ಎಂದು ಆಶಿಸುತ್ತಾ, ಹೆಂಡತಿಗೂ ಈ ವಿಷಯ ತಿಳಿಸಿದೆ. "ಈಗಲಾದರೂ ಮನೆಯವರಿಗೆ ಬುದ್ಧಿ ಬಂತಲ್ಲ ಬಿಡಿ" ಎಂದು ಆಕೆ ಹೇಳಿದಳು.

■ ಜಿ. ಪುರುಷೋತ್ತಮ

---

# ಸಿಹಿ ಹಂಚುವ ಲಲನೆಯರು

**ಚೆ**ನ್ನೈನ ಗಾಂಧಿನಗರ್‌ಗೆ ಹೋದವರು ಅಲ್ಲಿನ ಪ್ರಸಿದ್ಧ 'ಗ್ರ್ಯಾಂಡ್ ಸ್ವೀಟ್ಸ್ ಅಂಡ್ ಸ್ನ್ಯಾಕ್ಸ್' ಅಂಗಡಿ ಖಂಡಿತ ನೋಡಿರುತ್ತಾರೆ. ಬೆಳಿಗ್ಗೆ, ಸಂಜೆಗಳಲ್ಲಿ ಇರಲಿ, ಮಧ್ಯಾಹ್ನದ ಊಟದ ವೇಳೆಯಲ್ಲೂ ಅಲ್ಲಿ ಜನ ಮುಕುರಿರುತ್ತಾರೆ.

ಸಾಸಿವೆ ಬಣ್ಣದ ಸೀರೆಯುಟ್ಟ ಹೆಣ್ಣು ಮಕ್ಕಳು ಗಡಿಬಿಡಿಯಿಂದ ಕೆಲಸ ಮಾಡುತ್ತಾ ಓಡಾಡುತ್ತಾ ಇರುತ್ತಾರೆ. ಗಿರಾಕಿಗಳು ಹೇಳುವ ತಿಂಡಿಗಳ ಹೆಸರು ಹಳದಿ ಕೂಪನ್‌ನಲ್ಲಿ ಸರಸರನೆ ಬರೆಯುತ್ತಾ, ದುಡ್ಡು ತೆಗೆದುಕೊಂಡು ಕೂಪನ್ ನೀಡುವ ಹಾಗೂ ಅಂಥ ಕೂಪನ್ ಹಿಡಿದು ಬಂದವರಿಗೆ ಬೇಕಾದ ಪಾರ್ಸೆಲ್ ಮಾಡಿಕೊಡುವುದು ಎಲ್ಲ ಹೆಣ್ಣು ಮಕ್ಕಳು ಕೆಲಸ.

ಸುಮಾರು 186 ಬಗೆಯ ಸಿಹಿ ಮತ್ತು ಖಾರದ ತಿಂಡಿಗಳನ್ನು ಮಾಡಿ ಗ್ರಾಹಕರಿಗೆ ಒದಗಿಸುವ ಅಂಗಡಿ ಈಗ ಅತ್ಯಂತ ಜನಪ್ರಿಯ. ಅಲ್ಲಿ ಕೆಲಸ ಮಾಡುವ ಹೆಣ್ಣು ಮಕ್ಕಳನ್ನು ಕೇಳಿದರೆ "ಇಲ್ಲಿ ಕೆಲಸ ಚೆನ್ನಾಗಿದೆ. ಇಂಥ ವಾತಾವರಣ ಬಿಟ್ಟು ಹೋಗಲು ಮನಸಿಲ್ಲ" ಎಂದು ನೇರವಾಗಿಯೇ ಹೇಳುತ್ತಾರೆ.

ಇಲ್ಲಿನ ಇನ್ನೂರು ಕೆಲಸಗಾರರಲ್ಲಿ ಕೇವಲ ಇಪ್ಪತ್ತೈದು ಜನ ಪುರುಷರು. ಮಹಿಳಾ ಕೆಲಸಗಾರರು ಕೆಲಸ ಮುಗಿಸಿದ ಮೇಲೆ ಅವರವರ ದೂರದ ಮನೆಗಳಿಗೆ ತಲುಪಿಸಲು ಕಾರಿನ ವ್ಯವಸ್ಥೆಯೂ ಇದೆ.

ಒಮ್ಮೆ ಇಲ್ಲಿ ಕೆಲಸಕ್ಕೆ ಬಂದವರು ಬಿಟ್ಟು ಹೋಗುವುದು ಅಪರೂಪ. ಊಟ, ತಿಂಡಿ, ಕೆಲಸ ಮಾಡುವಾಗ ಧರಿಸುವ ಸಾಸಿವೆ ಬಣ್ಣದ ಸಮವಸ್ತ್ರ ಅಂಗಡಿ ಮಾಲೀಕ ನಂಜರಾಂ ರೆಡ್ಡಿಯಾರ್ ಒದಗಿಸುತ್ತಾರೆ.

ಇಲ್ಲಿನ ಕೆಲಸಗಾರರಿಗೆ ದೀಪಾವಳಿಗೆ ಬೋನಸ್, ಸಂಕ್ರಾಂತಿಗೆ ಸೀರೆ, ಸರಸ್ವತಿ ಪೂಜೆ ಸಮಯಕ್ಕೆ ಚಿನ್ನದ ಉಡುಗೊರೆ ನೀಡಲಾಗುತ್ತದೆ. ಕೇವಲ ಇಷ್ಟಕ್ಕಾಗಿ ಹೆಣ್ಣು ಮಕ್ಕಳು ಇಲ್ಲಿ ಬಂದು ದುಡಿಯುತ್ತಾರೆ ಎಂದಲ್ಲ. ಅಂಗಡಿ ಮಾಲೀಕ ಸಾಮಾನ್ಯವಾಗಿ ಕೆಲಸಕ್ಕೆ ತೆಗೆದುಕೊಳ್ಳುವುದು ಬಡ ಕುಟುಂಬದಿಂದ ಬಂದ ಹೆಣ್ಣು ಮಕ್ಕಳನ್ನು. ಅವರಿಗೊಂದು ಬದುಕು, ಸಾಕಷ್ಟು ಹಣ ದೊರೆಯುತ್ತದೆ. ಅಲ್ಲದೇ ನಿಷ್ಠೆ, ಪ್ರಾಮಾಣಿಕತೆಯಿಂದ ಕೆಲಸ ಮಾಡುತ್ತಾರೆ.

ಈಗಾಗಲೇ ಎಪ್ಪತ್ತಾರು ವರ್ಷ ದಾಟುತ್ತಿರುವ ಮಾಲೀಕ ನಂಜರಾಜ ರೆಡ್ಡಿಯಾರ್‌ನನ್ನು ಮಹಿಳಾ ಕಾರ್ಮಿಕರ ಬಗ್ಗೆ ಕೇಳಿದರೆ, ತಾನೊಬ್ಬನೇ ಪುರುಷ ಕಾರ್ಮಿಕರ ಮೇಲೆ ಹತೋಟಿ ಇಟ್ಟುಕೊಳ್ಳುವುದು ಕಷ್ಟ, ಅದಕ್ಕೇ ಮಹಿಳೆಯರನ್ನು ತೆಗೆದುಕೊಳ್ಳಲಾಗುತ್ತಿದೆ ಎನ್ನುತ್ತಾನೆ.

1982ರಲ್ಲಿ ಕೈಯಲ್ಲಿದ್ದ ಹಣ, ಹೆಂಡತಿಯ ಒಡವೆ, ಜಮೀನು ಎಲ್ಲ ಕಳೆದುಕೊಂಡು ಕೈಚೆಲ್ಲಿ ಕುಳಿತಿದ್ದ ಈತ, ಇದನ್ನು ಪ್ರಯತ್ನಿಸಿ ನೋಡೋಣ, ಇದು ಕಡೆಯತ್ನ ಎಂದುಕೊಂಡೇ ಸ್ವೀಟ್‌ಶಾಪ್ ಶುರು ಮಾಡಿದ. ಆಗ ಕೆಲವೇ ಕೆ.ಜಿ. ತಿನಿಸು ಮಾರಾಟವಾಗುತ್ತಾ ಇತ್ತು. ನಿಧಾನಕ್ಕೆ ವ್ಯಾಪಾರ ಬೆಳೆಯಿತು. ಹತ್ತು ಜನ ಕೆಲಸಗಾರರು ಬಂದರು. ಈಗ ಕಾರ್ಮಿಕರ ಸಂಖ್ಯೆ ಇನ್ನೂರಕ್ಕೆ ಬೆಳೆದಿದೆ.

ಇಷ್ಟಾದರೂ ಲಾಭದ ಆಸೆಯಿಂದ ಕಲಬೆರಕೆ ಮಾಡುವುದಿಲ್ಲ. ಕೃತಕ ಬಣ್ಣಗಳನ್ನು ಹಾಕುವುದಿಲ್ಲ. ಶುದ್ಧವಾಗಿರುವ ಇಲ್ಲಿನ ತಿನಿಸು ಆರಿ ತಣ್ಣಗಾಗುವ ಮೊದಲೇ ಬಿಕರಿಯಾಗುತ್ತದೆ.

ನಾಟ್ಯವಾಡುವ ಶೈಲಿಯಲ್ಲಿ ಇಲ್ಲಿನ ಮಹಿಳಾ ಕಾರ್ಮಿಕರು ತುರುಸಿನಿಂದ ಓಡಾಡುತ್ತಾ ಗ್ರಾಹಕರಿಗೆ ತಿಂಡಿ, ತಿನಿಸು ಒದಗಿಸುತ್ತಾರೆ. ■

# ವಿಚಿತ್ರ ಜಗತ್ತು





**ಕ**ಳೆದ ಸಲ ಪಿರೆಲಿ ಕ್ಯಾಲೆಂಡರ್‌ಗಾಗಿ ಬೆತ್ತಲೆ ಲಲನೆಯರು ಸಾಲುಗಟ್ಟಿ ನಿಂತಿದ್ದು ಓದಿದ್ದೀರಿ. ಈ ಬಾರಿ ಅಂಥದ್ದೇ ಸುದ್ದಿ ಆಸ್ಟ್ರೇಲಿಯಾದಿಂದ ಬಂದಿದೆ. ಅಲ್ಲಿನ ಮಹಿಳಾ ಫುಟ್‌ಬಾಲ್ ತಂಡ 'ಮ್ಯಾಟಿಲ್ಡಾ'ದ ಎಲ್ಲ ಲಲನೆಯರೂ ಹುಟ್ಟುಡುಗೆಯಲ್ಲಿ ನಿಂತು ಪೋಸ್ ನೀಡಿದ್ದಾರೆ. ಮಹಿಳಾ ಫುಟ್‌ಬಾಲ್ ಜನಪ್ರಿಯ ಗೊಳಿಸಲು ಇದೊಂದು ಯತ್ನ ಎಂದು ವಿನಮ್ರತೆಯಿಂದ ಅವರೆಲ್ಲ ಹೇಳಿಕೊಳ್ಳುತ್ತಿದ್ದಾರೆ.

ನಿವೃತ್ತ ಜೀವನ ಸುಖವಾಗಿರಲೆಂದು ಜನ ಏನೆಲ್ಲ ಮಾಡುತ್ತಾರೆ. ಕೆನ್ಯಾದ ಮಹಾನುಭಾವನೊಬ್ಬ ಬಂದ ಪೆನ್ಷನ್ ಹಣವೆಲ್ಲ ಒಂದೇ ರಾತ್ರಿಯಲ್ಲಿ ಉಡಾಯಿಸಿ ನಿರಾಳವಾಗಿದ್ದಾನೆ.

ಸಕ್ಕರೆ ಕಾರ್ಖಾನೆ ನೌಕರನಾಗಿದ್ದ ಈತ, ವಯಸ್ಸಾಗುವ ಮುಂಚೆ ನಿವೃತ್ತಿ ಪಡೆದ. ಅದರಿಂದ ಬಂದ 3600 ಡಾಲರ್ ಹಣ ಹಿಡಿದು ಬಾರ್ ಒಂದಕ್ಕೆ ನುಗ್ಗಿದ ಆತ ಬಿಯರ್, ಹುಡುಗಿಯರು, ನೃತ್ಯ ಎಂದು ಬೆಳಗಾಗುವುದರಲ್ಲಿ ಖರ್ಚು ಮಾಡಿ ಬರಿಗೈ ಆದ.

★

ಹನ್ನೊಂದು ವರ್ಷದ ತುಳಸಿ ಎಂ.ಎಸ್‌ಸಿ ಡಿಗ್ರಿ ಪಡೆದ ಹಾಗೆ ಮತ್ತೊಂದು ಡಿಗ್ರಿಯೂ ಬಿಹಾರದಲ್ಲಿ ಸುದ್ದಿಯಾಗಿದೆ. ಬಿಹಾರದ ಮುಖ್ಯಮಂತ್ರಿ ರಾಬಡಿದೇವಿಯ ಮಗಳು ಮೀಸ್ ಭಾರತಿ ಎಂಬಿಬಿಎಸ್ ಅಂತಿಮ ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕ ಗಳಿಸಿರುವುದೇ ಇಲ್ಲಿ ವಿವಾದಕ್ಕೆ ಕಾರಣ. ಮಾಜಿ ಮುಖ್ಯಮಂತ್ರಿ ಲಾಲೂ ಪ್ರಸಾದ್ ಯಾದವ್ ಹಾಗೂ ಹಾಲಿ ಮುಖ್ಯಮಂತ್ರಿ ರಾಬಡಿದೇವಿಯ ಪುತ್ರಿಯಾದ ಈಕೆಗೆ ಬೇಕೆಂದೇ ಅತಿ ಹೆಚ್ಚು ಅಂಕ ನೀಡಲಾಗಿದೆ ಎಂದು ವಿವಾದ ಎದ್ದಿದ್ದು ಪ್ರತಿಭಟನೆಗಳು ನಡೆಯುತ್ತಿವೆ. ಇದಕ್ಕೆಲ್ಲ ತಲೆಕೆಡಿಸಿಕೊಳ್ಳದ ಮೀಸ್ ಬೆಂಗಳೂರಿನ ಶೈಲೇಶ್‌ಕುಮಾರ್‌ನ ಮದುವೆಯಾಗಿ ಹಾಯಾಗಿದ್ದಾಳೆ.

★

ಅತಿ ಚಿಕ್ಕವರ, ಅತಿ ಹೆಚ್ಚು ಸ್ಕೋರು ಮಾಡಿದವರ ಸಾಧನೆ ಓದಿದಿರಿ. ಕೇರಳದ ಕೊಟ್ಟಾಯಂನಲ್ಲಿ ಹಲ್ಲಿನ ಡಾಕ್ಟರ್ ಒಬ್ಬರಿದ್ದಾರೆ. ಅವರಿಗೀಗ 89 ವರ್ಷ. ಅದೇನು ವಿಶೇಷ ಅನ್ನುತ್ತೀರ!

ಅವರು ಈಗಲೂ ವೈದ್ಯವೃತ್ತಿ ನಡೆಸುತ್ತಿದ್ದಾರೆ. ಕಳೆದ 64 ವರ್ಷಗಳಿಂದಲೂ ಸತತವಾಗಿ ತಮ್ಮ ವೃತ್ತಿ ನಡೆಸುತ್ತಿರುವ ಇವರೂ ಇತ್ತೀಚೆಗೆ ಗಿನ್ನೆಸ್ ವಿಶ್ವ ದಾಖಲೆಗೆ ಸೇರಿದ್ದಾರೆ. ಕೊಟ್ಟಾಯಂನ ಕೆ.ಕೆ.ರಸ್ತೆಯಲ್ಲಿ 1935ರ ಮಾರ್ಚ್ 28ರಂದು ಕ್ಲಿನಿಕ್ ಆರಂಭಿಸಿದರು ಡಾ. ಎಲಂಜತಿಲ್ ಕುರುವಿಲ್ಲ ಮಣಿ. ಅಂದಿನಿಂದಲೂ ಅವರು ಸತತವಾಗಿ ತಮ್ಮ ಕಾಯಕ ಮುಂದುವರಿಸಿ, ಈಗಲೂ ಠಾಕು ಠೀಕಾಗಿ ಕ್ಲಿನಿಕ್‌ಗೆ ಹೋಗಿ ಪ್ರ್ಯಾಕ್ಟೀಸ್ ಮುಂದುವರಿಸಿರುವ ಅವರನ್ನು ಗಿನ್ನೆಸ್ ಗುರುತಿಸಿದೆ.

★

ಮಿಲೆನಿಯಂ ಹುಚ್ಚು ಎಲ್ಲೆಡೆ ವ್ಯಾಪಕವಾಗುತ್ತಿದೆ. ಹೊಸ ಸಹಸ್ರಮಾನದ ಮುನ್ನಾ ದಿನ ಏನೆಲ್ಲ ಮಾಡುವ ಉತ್ಸಾಹ ಹಲವರಿಗೆ ಇನ್ನು ಕೆಲವರಿಗೆ ಜನರ ಹುಚ್ಚು ಬಳಸಿಕೊಂಡು ದುಡ್ಡು ಮಾಡುವ ಆಸೆ.

ಅಂಥದರಲ್ಲಿ ಅವತ್ತು ಅಮೇರಿಕಾದಲ್ಲಿ ಹಾಡಿದರೆ ಹತ್ತು ಲಕ್ಷ ಡಾಲರ್ ನೀಡುತ್ತೇವೆ ಎಂದರೆ ಬೇಡ ಎಂದ ಭೂಪ ಇದ್ದಾನೆ. ಆತನ ಹೆಸರು ಜೇ.ಕೇ. ಜಾಮಿರೊ ಕ್ವಾಯ್ ವಾದ್ಯವೃಂದದ ಹಾಡುಗಾರನಾದ ಆತ ''ಅವತ್ತು ಹಾಡುಗೀಡು ಏನೂ ಬೇಡ. ಆರಾಮಾಗಿ ನನ್ನ ಆಪ್ತ ಗೆಳತಿ ಜೊತೆ ಕಾಲ ಕಳೆಯುತ್ತೇನೆ'' ಎಂದಿದ್ದಾನೆ.

ದುಡ್ಡಿಗಿಂತ ಹುಡುಗಿ ಹೆಚ್ಚಾದಳೇ! ಹಾಗೇನಿಲ್ಲ. ಅವನ ಬಳಿ ಮಿಲಿಯಾಂತರ ಹಣ ಈಗಾಗಲೇ ಇದೆ. ಆದರೂ ಹತ್ತು ಲಕ್ಷ ಡಾಲರ್ ಒಂದು ಹುಡುಗಿಗಾಗಿ ನಿರಾಕರಿಸಿದ್ದು ದೊಡ್ಡದೇ.

★



ಹದಿನಾರು ವರ್ಷದ ಹುಡುಗರು ಎಸ್‌ಎಸ್‌ಎಲ್‌ಸಿ ಪರೀಕ್ಷೆ ಬಂದರೇ ಕಣ್ಣುಕಣ್ಣು ಬಿಡುತ್ತಾರೆ. ಅಂಥದರಲ್ಲಿ ಬಿಹಾರದ ಹನ್ನೊಂದು ವರ್ಷ ಎಂಟುತಿಂಗಳ ಹುಡುಗ ಫಿಸಿಕ್ಸ್‌ನಲ್ಲಿ ಎಂ.ಎಸ್‌ಸಿ ಮಾಡಿ ವಿಶ್ವದಾಖಲೆ ಮಾಡಿದ್ದಾನೆ. ಆತನ ಹೆಸರು ತಥಾಗತ ಅವತಾರ್ ತುಳಸಿ.

ಈತ ಒಂಬತ್ತು ವರ್ಷದವನಿದ್ದಾಗ ನ್ಯಾಯಾಲಯದ ಮೊರೆಹೊಕ್ಕು ಕೇಂದ್ರೀಯ ವಿದ್ಯಾಲಯ ನಡೆಸುವ ಹತ್ತನೇ ತರಗತಿ ಪರೀಕ್ಷೆ ತೆಗೆದುಕೊಂಡು, ಅತ್ಯುತ್ತಮ ದರ್ಜೆಯಲ್ಲಿ ತೇರ್ಗಡೆಯಾಗಿದ್ದ.

★

ಈ ಹುಡುಗನ ಹೆಚ್ಚುಗಾರಿಕೆ ಮೀರಿಸಿ ಮೀಸಾ ಭಾರತಿ ಬಿಹಾರದ ರಾಜಧಾನಿ ಪಾಟ್ನಾದಲ್ಲಿ ಸುದ್ದಿಯಲ್ಲಿದ್ದಾರೆ. ಮೆಡಿಕಲ್‌ನ ಅಂತಿಮ ಪರೀಕ್ಷೆಯಲ್ಲಿ ಆಕೆಗೆ ಅತಿ ಹೆಚ್ಚು ಮಾರ್ಕು ಅದಕ್ಕೇ ಉಳಿದವರಿಗೆ ಸಿಟ್ಟು, ಪ್ರತಿಭಟನೆ, ಮೀಸಾ ಎಂಬ ಈ ಲಲನೆ ಆ ರಾಜ್ಯದ ಮುಖ್ಯಮಂತ್ರಿ ರಾಬರಿ ದೇವಿ ಮತ್ತು ಮಾಜಿ ಮುಖ್ಯಮಂತ್ರಿ ಲಾಲೂ ಪ್ರಸಾದ್ ಯಾದವ್ ಅವರ ಮಗಳು ಎಂಬುದು ಕೇವಲ ಕಾಕತಾಳೀಯ ಆಗಿರಬಾರದು. ■

# ಹೊಸ ಪುಸ್ತಕ




## ಟಿಂ.ಟಿಂ.ಚುಟುಕು

ಲೇ: ಚಂದ್ರಗೌಡ ಕುಲಕರ್ಣಿ
ಪ್ರ: ನವಕರ್ನಾಟಕ ಪ್ರಕಾಶನ
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ,
ಬೆಂಗಳೂರು-560 001.
ಪುಟ: 40, ಬೆಲೆ: 12/-



## ಸಾಹಸದ ಸಮುದ್ರಯಾತ್ರೆ

ಲೇ: ಜಂಬುನಾಥ ಕಂಚ್ಯಾಣಿ
ಪ್ರ: ನವಕರ್ನಾಟಕ ಪ್ರಕಾಶನ
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ,
ಬೆಂಗಳೂರು-560 001.
ಪುಟ: 40, ಬೆಲೆ: 12/-




## ಸಮಯ ಪ್ರಜ್ಞೆ

ಲೇ: ಮತ್ತೂರು ಸುಬ್ಬಣ್ಣ
ಪ್ರ: ನವಕರ್ನಾಟಕ ಪ್ರಕಾಶನ
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ,
ಬೆಂಗಳೂರು-560 001.
ಪುಟ: 40, ಬೆಲೆ: 12/-



## ಗಜಲ್

ಲೇ: ಡಾ.ಸರಜೂ ಕಾಟ್ಕರ್
ಪ್ರ: ವೈಶಾಖ ಪ್ರಕಾಶನ
395, 1ನೇ ಮಹಡಿ, 9ನೇ ಮುಖ್ಯ ರಸ್ತೆ,
ಹನುಮಂತ ನಗರ, ಬೆಂಗಳೂರು-19.
ಪುಟ: 60, ಬೆಲೆ: 35/-



## ಪುಟ್ಟನ ಪ್ರಶ್ನೆ

ಲೇ: ಪ.ಗು.ಸಿದ್ದಾಪುರ
ಪ್ರ: ನವಕರ್ನಾಟಕ ಪ್ರಕಾಶನ
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ,
ಬೆಂಗಳೂರು-560 001.
ಪುಟ: 40, ಬೆಲೆ: 12/-



## ಸಂಕಟಪುರದ ನಾಟಕ ಪ್ರಸಂಗ

ಲೇ: ಆರ್.ಮೋಹನ ನಾಗಮ್ಮನವರ
ಪ್ರ: ಮಹಾಮನೆ ಪ್ರಕಾಶನ
ನವೋದಯ ನಗರ,
ಧಾರವಾಡ-580 003.
ಪುಟ: 124, ಬೆಲೆ: 50/-



## ಅಲಕಾಗೆ ಅಜ್ಜಿಯ ಪತ್ರಗಳು

ಲೇ: ಡಾ.ಕೆ.ಪೂರ್ಣಿಮಾ ಭಟ್
ಪ್ರ: ನವಕರ್ನಾಟಕ ಪ್ರಕಾಶನ
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ,
ಬೆಂಗಳೂರು-560 001.
ಪುಟ: 40, ಬೆಲೆ: 12/-




## ನುಡಿ ನಮನ

ಸಂ: ಭಂಟನೂರು ಗುರುಶಾಂತಯ್ಯ
ಪ್ರ: ಶ್ರೀ ಕೊತ್ತಲ ಬಸವೇಶ್ವರ ಭಾರತೀಯ
ಶಿಕ್ಷಣ ಸಮಿತಿ ಸೇಡಂ
ಗುಲಬರ್ಗಾ
ಪುಟ: 140, ಬೆಲೆ: 35/-

# ರೋಗ ಹರಡುವ ಹೇನು



ಕೆಲವು ರೋಗಗಳು ಸಾಂಕ್ರಾಮಿಕವಾಗಿ ಒಮ್ಮೆಗೇ ಹರಡಿಕೊಳ್ಳುತ್ತವೆ. ರೋಗ ಹರಡುವಿಕೆಗೂ ಹಿಂದೆ ಸಂಭವಿಸಿದ ನೆರೆ, ಬರಗಾಲ, ಯುದ್ಧ ಮೊದಲಾದ ದುರ್ಘಟನೆಗಳಿಗೂ ಸಂಬಂಧವಿದೆ. ಇಂತಹ ರೋಗಗಳಲ್ಲಿ 'ಟ್ರ್ಯಾಫಸ್ ಜ್ವರ' (Epedemic typhus) ಎಂಬ ರೋಗ ಒಂದಾಗಿದೆ. ಟ್ರ್ಯಾಫಸ್ ಜ್ವರ ಪೆಡಿಕ್ಯುಲಸ್ ಹ್ಯುಮೇನಸ್ (Pediculus humanus) ಎಂಬ ದೇಹದ ಮೇಲಿರುವ ಹೇನುಗಳಿಂದ ಹರಡುತ್ತದೆ.

ತಲೆಕೆರೆಯಿಸುವ ತಲೆಹೇನುಗಳು ಸಾಕಷ್ಟು ಮಂದಿಗೆ ಪರಿಚಯ ಉಂಟು. ಇದೇ ಗುಂಪಿಗೆ ಸೇರಿದ ದೇಹದ ಹೇನು (Body Lice)ಗಳು ಅಷ್ಟೊಂದು ಪರಿಚಿತ ಕೀಟಗಳಲ್ಲ. ಇವುಗಳಿಂದ ಮನುಷ್ಯರಿಗೇನು ಅಪಾಯವಿದೆಯೆಂದು ತಿಳಿದುಕೊಳ್ಳೋಣ.

ಕೆಲವು ರೋಗಗಳು ಸಾಂಕ್ರಾಮಿಕವಾಗಿ ಒಮ್ಮೆಗೇ ಹರಡಿಕೊಳ್ಳುತ್ತವೆ. ರೋಗ ಹರಡುವಿಕೆಗೂ ಹಿಂದೆ ಸಂಭವಿಸಿದ ನೆರೆ, ಬರಗಾಲ, ಯುದ್ಧ ಮೊದಲಾದ ದುರ್ಘಟನೆಗಳಿಗೂ ಸಂಬಂಧವಿದೆ. ಇಂತಹ ರೋಗಗಳಲ್ಲಿ 'ಟ್ರ್ಯಾಫಸ್ ಜ್ವರ' (Epedemic typhus) ಎಂಬ ರೋಗ ಒಂದಾಗಿದೆ. ಟ್ರ್ಯಾಫಸ್ ಜ್ವರ ಪೆಡಿಕ್ಯುಲಸ್ ಹ್ಯುಮೇನಸ್ (Pediculus humanus) ಎಂಬ ದೇಹದ ಮೇಲಿರುವ ಹೇನುಗಳಿಂದ ಹರಡುತ್ತದೆ.

ಮನುಷ್ಯನ ದೇಹವನ್ನು ಆಶ್ರಯಿಸುವ ಈ ಹೇನುಗಳ ಗಾತ್ರ 1.5 ರಿಂದ 2.0 ಮಿ.ಮೀ.ಗಳಷ್ಟು, ಇವುಗಳ ದೇಹ ನರೆ ಬಣ್ಣವಿರುತ್ತದೆ. ರೆಕ್ಕೆಗಳಿರುವುದಿಲ್ಲ. ಕಾಲುಗಳ ತುದಿಯಲ್ಲಿ ರೋಮವನ್ನು ಹಿಡಿದುಕೊಳ್ಳಲು ಬಲಿಷ್ಠವಾದ ಕೊಂಡಿಗಳಿರುತ್ತವೆ. ಬಟ್ಟೆಬರೆಗಳಲ್ಲಿ ಇವು 200-300 ಮೊಟ್ಟೆಗಳನ್ನಿಡುತ್ತವೆ. ಒಂದು ವಾರದ ನಂತರ ಮೊಟ್ಟೆಯಿಂದ ಹೊರಬಂದ ಮರಿಗಳು ರಕ್ತಹೀರಿ ನಾಲ್ಕು ವಾರಗಳಲ್ಲಿ ಪ್ರೌಢಾವಸ್ಥೆ ಹೊಂದುತ್ತವೆ. ಒಂದು ತಿಂಗಳ ಕಾಲ ಜೀವಿಸುತ್ತವೆ. ಇವುಗಳ ಕಡಿತದಿಂದ ತುರಿಕೆಯುಂಟಾಗುತ್ತದೆ. ಚರ್ಮ ದಪ್ಪವಾಗಿ ಕಂದುಬಣ್ಣದ ಉಬ್ಬುಗಳು ಕಾಣಿಸಿಕೊಳ್ಳುತ್ತವೆ.

ಈ ಹೇನುಗಳ ದೇಹದಲ್ಲಿ 'ಟ್ರ್ಯಾಫಸ್' ಜ್ವರಕ್ಕೆ ಕಾರಣವಾಗಿರುವ 'ರಿಕೆಟ್ಸಿಯಾ' (Reckettsia) ಎಂಬ ರೋಗಾಣುಗಳಿರುತ್ತವೆ. ಹೇನಿನ ಹೊಟ್ಟೆಯಲ್ಲಿ ವಂಶಾಭಿವೃದ್ಧಿಯಾದ ರೋಗಾಣುಗಳು ಕರುಳಿಗೆ ಚಲಿಸುತ್ತವೆ. ಹೇನಿನ ವಿಸರ್ಜಿತ ಪದಾರ್ಥದೊಂದಿಗೆ, ತುರಿಕೆಯ ಗಾಯದ ಮೂಲಕ ಮನುಷ್ಯರ ದೇಹವನ್ನು ಸೇರಿಕೊಳ್ಳುತ್ತವೆ. ಟ್ರ್ಯಾಫಸ್ ಜ್ವರ ಎಡೆಬಿಡದೆ ಬರುತ್ತದೆ. ಚರ್ಮದ ಮೇಲೆ ಚಿಕ್ಕ ಗುಳ್ಳೆಗಳು ಕಾಣಿಸಿಕೊಳ್ಳುತ್ತವೆ.

ಟ್ರ್ಯಾಫಸ್ ಜ್ವರದ ಚರಿತ್ರೆ ಮಾನವನ ದುರದೃಷ್ಟದ ಚರಿತ್ರೆಯೆಂದೇ ಹೇಳಾಗುತ್ತಿತ್ತು. ಪ್ರಥಮ ಜಾಗತಿಕ ಯುದ್ಧದ ಸಮಯದಲ್ಲಿ 25,00,000 ರಷ್ಯನ್ನರು ಟ್ರ್ಯಾಫಸ್ ಜ್ವರದಿಂದ ಮರಣಹೊಂದಿದರೆಂದು ಹೇಳಲಾಗಿದೆ. ಸೆರೆಮನೆ ಮತ್ತು ಪುನರ್ವಸತಿ ಕೇಂದ್ರಗಳಲ್ಲಿಯು ಈ ರೋಗ ಕಾಣಿಸಿಕೊಳ್ಳುತ್ತಿತ್ತು. ಕೊಳಕು ಪರಿಸರದಲ್ಲಿ ವಾಸಿಸುವ ಜನರಲ್ಲಿ ಈ ರೋಗ ಸಾಮಾನ್ಯವಾಗಿ ಕಾಣಿಸಿಕೊಳ್ಳುತ್ತಿದ್ದರೂ ಅದಕ್ಕೆ ಕಾರಣವೇನೆಂದು ತಿಳಿದಿರಲಿಲ್ಲ. ಉತ್ತರ ಆಫ್ರಿಕದ ಟ್ಯೂನಿಸ್‌ನಲ್ಲಿ ಟ್ರ್ಯಾಫಸ್ ಜ್ವರ ಶತಮಾನಗಳ ಹಿಂದೆಯೇ ಒಂದು ರಾಷ್ಟ್ರೀಯ ವಿಪತ್ತಾಗಿತ್ತು.

ಚಾರ್ಲ್ಸ್ ನಿಕೋಲೆ ಎಂಬ ಫ್ರೆಂಚ್ ಡಾಕ್ಟರರ ಅವಿರತ ಶ್ರಮದಿಂದಾಗಿ ಈ ಕಾಯಿಲೆ ಹರಡುವ ರಹಸ್ಯ ಬಯಲಾಯಿತು. ನಿಕೋಲೆಯನ್ನು ಟ್ಯೂನಿಸ್‌ನಲ್ಲಿರುವ ಪ್ಯಾಶ್ಚರ್ ಸಂಸ್ಥೆಯ ನಿರ್ದೇಶಕರನ್ನಾಗಿ ನೇಮಿಸಲಾಗಿತ್ತು. ಟ್ರ್ಯಾಫಸ್ ಜ್ವರ ಪೀಡಿತ ರೋಗಿಗಳ ಶುಶ್ರೂಷೆಯಲ್ಲಿ ನಿರತನಾಗಿದ್ದ ನಿಕೋಲೆ ಜ್ವರಪೀಡಿತ ರೋಗಿಗಳು ಆಸ್ಪತ್ರೆಗೆ ದಾಖಲಾಗುವ ಮೊದಲು ರೋಗ ಹರಡುವಿಕೆಗೆ ಕಾರಣರಾಗಿದ್ದರೂ ಆಸ್ಪತ್ರೆ ಸೇರಿದ ನಂತರ ಅವರಿಂದ ರೋಗ ಇತರ ರೋಗಿಗಳಿಗೆ ಹರಡದಿರುವುದನ್ನು ಆತ ಗಮನಿಸಿದ. ಆಸ್ಪತ್ರೆಗೆ ದಾಖಲಾದ ಕೂಡಲೇ ರೋಗಿಗಳಿಗೆ ಸ್ನಾನ ಮಾಡಿಸಿ ಆಸ್ಪತ್ರೆಯ ಉಡುಪನ್ನು ತೊಡಿಸಲಾಗುತ್ತಿತ್ತು. ರೋಗಕ್ಕೆ ಕಾರಣವಾದ ಜೀವಿಗೆ ರೋಗಿಯೇ ವಾಹಕವಾಗಿರಬೇಕೆಂದು ನಿಕೋಲೆ ತೀರ್ಮಾನಿಸಿದ. ಈ ಜೀವಿ ಒಂದು ಪರಾವಲಂಬಿ ಜೀವಿ (Parasite) ಆಗಿದ್ದು ಅದು ದೇಹದ ಹೇನೇ ಆಗಿತ್ತು.

ಈ ಕುರಿತು ಚಿಂಪಾಂಜಿ ಮತ್ತು ಮಂಗಗಳ ಮೇಲೆ ನಡೆಸಿದ ಸಂಶೋಧನೆಗಳಿಂದ ಟ್ರ್ಯಾಫಸ್ ಜ್ವರ ದೇಹದ ಹೇನುಗಳಿಂದಲೇ ಹರಡುತ್ತದೆಂದು ನಿಕೋಲೆ ದೃಢಪಡಿಸಿದ. 1909ನೇ ಇಸವಿಯಲ್ಲಿ ನಿಕೋಲೆ ಮತ್ತು ಅವನ ಸಂಗಡಿಗರು ರೋಗಪೀಡಿತ ಮಂಗಗಳ ರಕ್ತ ಹೀರಿದ ಹೇನುಗಳು ಆರೋಗ್ಯದಿಂದಿದ್ದ ಮಂಗಗಳ ರಕ್ತ ಹೀರಿದಾಗ ಅವುಗಳಲ್ಲಿ ರೋಗ ಕಾಣಿಸಿಕೊಳ್ಳುವುದನ್ನು ಖಚಿತಪಡಿಸಿದರು. ರೋಗಾಣುಗಳು ಹೇನುಗಳ ದೇಹದಲ್ಲಿ ವೃದ್ಧಿಯಾಗಲು ಒಂದು ವಾರದ ಅವಧಿ ಬೇಕಾಗಿತ್ತು. ಚರ್ಮ ಮತ್ತು ಬಟ್ಟೆ ಬರೆಗಳಲ್ಲಿದ್ದ ವಿಸರ್ಜಕ ಪದಾರ್ಥ, ತುರಿಕೆಯ ಗಾಯ ಮತ್ತು ಹೇನುಗಳ ಜಜ್ಜಿದ ದೇಹದಿಂದಲೂ ರೋಗಾಣುಗಳು ಇತರರ ದೇಹವನ್ನು ಪ್ರವೇಶಿಸುತ್ತಿದ್ದುವು.

ಈ ಫಲಿತಾಂಶವನ್ನು ಹೊರಗೆಡವಿದ ಎರಡೇ ವರ್ಷಗಳಲ್ಲಿ ನಿಕೋಲೆ ಮತ್ತು ಅವನ ಸಂಗಡಿಗರು ಟ್ರ್ಯಾಫಸ್ ಜ್ವರವನ್ನು ಟ್ಯೂನಿಸ್‌ನಿಂದ ಹೊರಗಟ್ಟಲು ಸಮರ್ಥರಾದರು. ಒಂದು ಭಯಾನಕ ರೋಗವನ್ನು ಸ್ವಚ್ಛತೆ ಮತ್ತು ಆರೋಗ್ಯದಿಂದ ತಡೆಟ್ಟಬಹುದೆಂಬ ತರ್ಕಸಮ್ಮತವಾದ ದಾರಿಯನ್ನು ತೋರಿಸಿಕೊಟ್ಟದ್ದು ನಿಕೋಲೆಯ ಸಂಶೋಧನೆಗಳ ಮಹತ್ವ. ಈ ಸಂಶೋಧನೆಗಳಿಗಾಗಿ ಚಾರ್ಲ್ಸ್ ನಿಕೋಲೆಗೆ 1925ರಲ್ಲಿ ನೋಬೆಲ್ ಪಾರಿತೋಷಕ ನೀಡಿ ಗೌರವಿಸಲಾಯಿತು.

■ ಪಿ.ಎಸ್.ರೈ

# ಕೃಷ್ಣಾ : ರೈತರನ್ನು ವಂಚಿಸಿದ ರಾಜಕಾರಣಿಗಳು

ನಿಮಗೆ ನೆನಪಿದೆಯೋ ಇಲ್ಲವೋ! ನಾಗಾರ್ಜುನ ಸಾಗರ ಕಟ್ಟಿದ್ದೇ ಒಂದು ಸಾಹಸಗಾಥೆ. ಅದು ಇತಿಹಾಸ ಪ್ರಸಿದ್ಧ ಭೂಮಿ. ಅಲ್ಲಿನ ಅವಶೇಷಗಳ ಸ್ವರೂಪವೇ ಮಹತ್ವದ್ದು. ಅಂಥ ಕಡೆ ಅಣೆಕಟ್ಟು ಕಟ್ಟುವುದಿರಲಿ, ಭೂಮಿಗೆ ಗುದ್ದಲಿ ಹಾಕುವಂತಿಲ್ಲ.



ನನಸಾಗದ ಕನಸು : ಆಲಮಟ್ಟಿ ಅಣೆಕಟ್ಟು

"ಅಲ್ಲಿನ ಸಣ್ಣದೊಂದು ಕಲ್ಲು ಹರಳೂ ಕೆಡದಂತೆ ಅಚ್ಚುಕಟ್ಟಾಗಿ ಇಡುತ್ತೇವೆ." ಎಂದಿತು ಆಂಧ್ರ. ಪದರು ಪದರಾಗಿ ಮಣ್ಣನ್ನು ಬ್ರಷ್‌ನಿಂದ ಕೆರೆದು, ಅಲ್ಲಿ ಸಿಕ್ಕಿದ ಪ್ರತಿಯೊಂದು ಅವಶೇಷವನ್ನೂ ಅಲ್ಲಿನ ಸರ್ಕಾರ ಅಚ್ಚುಕಟ್ಟಾಗಿ ಎತ್ತಿಟ್ಟು ಮ್ಯೂಸಿಯಂ ಕಟ್ಟಿತು. ಅದೂ ದಾಖಲೆ ಅವಧಿಯಲ್ಲಿ. ಬುದ್ಧಧರ್ಮದ ಪ್ರಸರಣದ ಮುಖ್ಯ ಹರಿಕಾರನಾಗಿದ್ದ ಆಂಧ್ರದವನೇ ಆದ ನಾಗಾರ್ಜುನನ ಹೆಸರನ್ನೇ ಆ ಜಲಾಶಯಕ್ಕೂ ಇಟ್ಟಿತು.

ಆಗಿನ ಮುಖ್ಯಮಂತ್ರಿ ಸಂಜೀವರೆಡ್ಡಿ ಅವರು ಬರಗಾಲದ ಮಡಿಲಿನ ಅನಂತಪುರದವರು. ನಾಗಾರ್ಜುನ ಸಾಗರ ಕಟ್ಟುವುದರಿಂದ ಅವರೂರಿಗೇನೂ ಆಗಬೇಕಿರಲಿಲ್ಲ. ಆದರೆ, ಇಂಥದೊಂದು ಅಣೆಕಟ್ಟು ಕಟ್ಟಿದರೆ ಲಕ್ಷಾಂತರ ಎಕರೆ ಭೂಮಿ ಹಸನಾಗುತ್ತದೆ. ರಾಜ್ಯ ಶ್ರೀಮಂತವಾಗುತ್ತದೆ ಎಂದು ತಿಳಿದವರು. ನಿಗದಿತ ಅವಧಿಯಲ್ಲಿ ಕಟ್ಟಿ ಮುಗಿಸುವ ಹಟ. ರಾಜ್ಯದ ಉಳಿದೆಲ್ಲ ಅಭಿವೃದ್ಧಿ ಕಾರ್ಯ ನಿಲ್ಲಿಸಿದರು. ಇಡೀ ಒಂದು ವರ್ಷ ರಾಜ್ಯಕ್ಕೆ ಹೊಸ ರಸ್ತೆಗಳಿಲ್ಲ. ಹಾಳಾದ ರಸ್ತೆ ರಿಪೇರಿ ಇಲ್ಲ. ಸರ್ಕಾರದ ಕಚೇರಿಗಳಿಗೆ ಸುಣ್ಣ ಬಣ್ಣ ಇಲ್ಲ. ಎಲ್ಲಾ ದುಡ್ಡು ಕೊಂಡೊಯ್ದು ಅಲ್ಲಿ ಸುರಿದರು. ಸುಂದರ ಕನಸೊಂದು ಸಾಕಾರ ಆಗಲು ಕಾರಣವಾದರು.

ರೆಡ್ಡಿಯವರ ಉತ್ಸಾಹ ಮತ್ತು ಅಣೆಕಟ್ಟಿನ ಬಗ್ಗೆ ಇದ್ದ ಬದ್ಧತೆ ಎಂಥದಿದ್ದಿತೆಂದರೆ ಸರ್ಕಾರೀ ನೌಕರರು ರಾಜ್ಯಾದ್ಯಂತ ಒಂದು ದಿನದ ಸಂಬಳ ಸ್ವಯಂ ಪ್ರೇರಣೆಯಿಂದ ಅಣೆಕಟ್ಟು ನಿರ್ಮಾಣಕ್ಕೆ ನೀಡಿದರು.

ಒಂದು ಕನಸು ಕಟ್ಟುವುದು, ಸಾಕಾರಗೊಳ್ಳುವುದು ಹೀಗೆ ರಾಜಕೀಯ ಇಚ್ಛಾಶಕ್ತಿಯಿಂದ. ಆ ಪ್ರದೇಶದ ನಾಯಕನ ದಿಟ್ಟ ಮತ್ತು ಜನಸಮುದಾಯವನ್ನು ಒಂದಾಗಿ ಕೊಂಡೊಯ್ಯಬಲ್ಲ ಗುಣದಿಂದ.

ನಮ್ಮ ರಾಜಕೀಯ ನಾಯಕರಿಗೆ ಇಂಥ ಬದ್ಧತೆ ಹಾಗೂ ದಿಟ್ಟತನ ಇದೆಯೇ?

*__'ಕೇಳಿ ಕೃಷ್ಣೆಯ ಕೂಗು'__ ಎಂಬ ಕಿರು ಪುಸ್ತಕ ಬರೆದು ಬೊಬ್ಬೆ ಹಾಕಿದ್ದರು ಎಚ್.ಕೆ. ಪಾಟೀಲ್. ಆಗ ಅವರು ವಿಧಾನ ಪರಿಷತ್ತಿನಲ್ಲಿ ವಿರೋಧ ಪಕ್ಷದ ನಾಯಕರು.*

*ಕಾಂಗ್ರೆಸ್ ಸರ್ಕಾರ ಬರುತ್ತಿದ್ದಂತೆ ಅವರು ರಾಜ್ಯದ ಭಾರೀ ಮತ್ತು ಮಧ್ಯಮ ನೀರಾವರಿ ಖಾತೆ ಸಚಿವರಾದರು. ಈಗ ಕೃಷ್ಣೆಯ ಚಿಂತಾಜನಕ ಸ್ಥಿತಿಯ ಬಗ್ಗೆ ಕೇಳಿದರೆ ಅವರು ಹೇಳಿದ್ದೇನು ಗೊತ್ತೇ?*

*'ಆಗ ನಾನು ವಕೀಲನಾಗಿದ್ದೆ. ಈಗ ನಾನು ನ್ಯಾಯಾಧೀಶ. ಹೀಗಾಗಿ ನಾನೇನೂ ಮಾತಾಡುವಂತಿಲ್ಲ.' ರಾಜ್ಯ ರಾಜಕೀಯ ಬದಲಾಗುತ್ತಲೇ ರಾಜಕೀಯ ನಾಯಕರ ಬಣ್ಣವೂ ಬದಲಾಗುತ್ತದೆ. ಆದಕ್ಕೆ ಎಚ್.ಕೆ. ಪಾಟೀಲರ ಮೇಲಿನ ಮಾತು ಇತ್ತೀಚಿನ ಉದಾಹರಣೆ. ಇಂಥವರು ಅಧಿಕಾರಕ್ಕೆ ಬರುತ್ತಲೇ ದೊಡ್ಡ ದೊಡ್ಡ ಮಾತಾಡುತ್ತಾರೆ. ಆದರೆ ಚಾಪೆ ಹಾಸಿದಲ್ಲಿಯೇ ಬಿದ್ದಿರುತ್ತದೆ. ಅದೇ ನಮ್ಮ ನಾಡಿನ ದುರಂತ.*

# ನೀವೇನು ಹೇಳುವಿರಿ ?

ಕೃಷ್ಣಾ ಮೇಲ್ದಂಡೆ ಯೋಜನೆಯ ನೀರಿನ ಬಳಕೆ ಹಾಗೂ ಆಲಮಟ್ಟಿ ಅಣೆಕಟ್ಟೆಯ ಎತ್ತರದ ವಿಚಾರದಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ ಚಂದ್ರಬಾಬು ನಾಯ್ಡು ಸದ್ಯ ಮಾಡುತ್ತಿರುವುದೇನು?

ಕೇಂದ್ರ ಸರಕಾರದ ವಾಜಪೇಯಿ ಅವರ ಮೇಲೆ 'ಬ್ಲಾಕ್‌ಮೇಲ್' ಹಾಗಂತ ಆಲಮಟ್ಟಿ, ನಾರಾಯಣಪುರ ಸುತ್ತಮುತ್ತಲಿನ ಜನತೆಯ ನಿತ್ಯಮಾತಾಗಿದೆ.

ಕೇಂದ್ರ ಸರಕಾರವು ಅಂತರರಾಜ್ಯ ನೀರಿನ ಹಂಚಿಕೆಯನ್ನು ಗಣನೆಗೆ ತೆಗೆದುಕೊಳ್ಳದೇ ಸರ್ವೋಚ್ಚ ನ್ಯಾಯಾಲಯಕ್ಕೆ ಪ್ರಮಾಣಪತ್ರ ಸಲ್ಲಿಸಿರುವುದು ಬಚಾವತ್ ಆಯೋಗದ ತೀರ್ಪನ್ನು ಉಲ್ಲಂಘಿಸಿದಂತಾಗಿದೆ ಎಂದು ತಜ್ಞರು ಅಭಿಪ್ರಾಯ ಪಡುತ್ತಿದ್ದಾರೆ.

ಯುಕೆಪಿಯಲ್ಲಿ ಕರ್ನಾಟಕ 173 ಟಿ.ಎಂ.ಸಿ. ನೀರನ್ನು ಬಳಸಿಕೊಳ್ಳಲು ಬಚಾವತ್ ಆಯೋಗವು ತೀರ್ಪು ನೀಡಿದೆ. ಆದರೆ, ಕೇಂದ್ರ ಸರ್ಕಾರ ಯೋಜನಾ ಆಯೋಗದ ಒಪ್ಪಿಗೆಯಂತೆ ಮಾತ್ರ ನೀರು ಸಂಗ್ರಹಕ್ಕೆ ಅನುಮತಿ ನೀಡುವುದಾಗಿ ಪ್ರಮಾಣಪತ್ರ ಸಲ್ಲಿಸಿದ್ದರಿಂದ ಆಲಮಟ್ಟಿ ಅಣೆಕಟ್ಟೆಯ ಎತ್ತರವನ್ನು 512 ಮೀಟರಿಗೆ ಸೀಮಿತಗೊಂಡು 119 ಟಿ.ಎಂ.ಸಿ. ನೀರನ್ನು ಮಾತ್ರ ಬಳಸಿಕೊಳ್ಳಲು ಸಾಧ್ಯ! ಕೇಂದ್ರದ ಈ ನಿಲುವು ಬಚಾವತ್ ಆಯೋಗದ ತೀರ್ಪನ್ನು ಉಲ್ಲಂಘಿಸಿದಂತಾಗಿದೆ. ಅಷ್ಟೇ ಅಲ್ಲ, ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ಬಿಜೆಪಿ ಸರ್ಕಾರವು ತೆಲುಗು ದೇಶಂನ ನೆರವು ತೆಗೆದುಕೊಂಡಿದ್ದರಿಂದ ಆ ಪಕ್ಷದ ಒತ್ತಡಕ್ಕೆ ಮಣಿದು ಕರ್ನಾಟಕ 173 ಟಿ.ಎಂ.ಸಿ. ನೀರನ್ನು ಬಳಸಿಕೊಳ್ಳಲು ನಿರಾಕರಿಸಿದಂತಾಗಿದೆ.

ಕೃಷ್ಣಾ ಮೇಲ್ದಂಡೆ ಆಲಮಟ್ಟಿ ಅಣೆಕಟ್ಟೆಯ ಎತ್ತರ 512 ಮೀ ಹಾಗೂ 119 ಟಿ.ಎಂ.ಸಿ. ನೀರಿನ ಬಳಕೆಯ ಮೊದಲ ಹಂತದ ಯೋಜನೆಗೆ ಕೇಂದ್ರ ಯೋಜನಾ ಆಯೋಗ ಒಪ್ಪಿಗೆ ನೀಡಿದ್ದು 1973ರಲ್ಲಿ. ಇದು 1980ರಲ್ಲಿ ಸಂಪೂರ್ಣಗೊಳ್ಳಬೇಕಾಗಿತ್ತು. ರಾಜ್ಯ ಸರ್ಕಾರದ ಹೊಣೆಗೇಡಿತನದಿಂದಾಗಿ ಯೋಜನಾ ಕಾರ್ಯ ಕುಂಠಿತಗೊಂಡು, ಇದಕ್ಕಾಗಿ ಒದಗಿಸಿದ ಹಣವೆಲ್ಲ ಎಲ್ಲಿ ಹೋಯಿತು ಎಂಬುದು ಆಲಮಟ್ಟಿ ಅಣೆಕಟ್ಟೆಯೇ ಹೇಳಬೇಕು.

ನಂತರ ಎರಡನೇ ಹಂತದ ಯೋಜನೆ ಅಣೆಕಟ್ಟೆಯ ಎತ್ತರ 524 ಮೀ. ಹಾಗೂ ಇನ್ನುಳಿದ 54 ಟಿ.ಎಂ.ಸಿ. ನೀರಿನ ಬಳಕೆಗೆ ಯೋಜನಾ ಆಯೋಗಕ್ಕೆ ಕಳಿಸಿದ್ದರೂ ಅದಕ್ಕೆ ಒಪ್ಪಿಗೆ ಇವತ್ತಿಗೂ ಸಿಕ್ಕಿಲ್ಲ. ಸುಮಾರು 15 ವರ್ಷಗಳಿಂದ ಯೋಜನಾ ಆಯೋಗದ ಮುಂದೆ ಒಪ್ಪಿಗೆಗೆ ಕಾದು ಕುಳಿತಿರುವುದನ್ನೂ ಕಂಡರೆ, ಈ ಅವಧಿಯಲ್ಲಿ ಅಧಿಕಾರ ನಡೆಸಿರುವ ಎಲ್ಲಾ ಸರ್ಕಾರಗಳ ವಿಫಲತೆಯನ್ನು ತೋರಿಸುತ್ತದೆ.

ಇಂದು ಕರ್ನಾಟಕ ಇಕ್ಕಟ್ಟಿಗೆ ಸಿಲುಕಿದೆ.

ಕೇಂದ್ರ ಜಲ ಆಯೋಗವು ನೀರಾವರಿ ಯೋಜನೆಗೆ 173 ಟಿ.ಎಂ.ಸಿ. ನೀರನ್ನು ಬಳಸಿಕೊಳ್ಳಲು ಹೇಳಿತ್ತು. ಆಲಮಟ್ಟಿಯಲ್ಲಿ ಜಲ ವಿದ್ಯುತ್ ಉತ್ಪಾದನೆಗಾಗಿ ನೀರನ್ನು ಉಪಯೋಗಿಸಿಕೊಳ್ಳಲು ಅಣೆಕಟ್ಟೆಯ ಎತ್ತರವನ್ನು 528 ಮೀ.ವರೆಗೆ ಎತ್ತರಿಸಲು ಕೂಡ ತಿಳಿಸಿತ್ತು.

ಕೃಷ್ಣಾ ಯೋಜನೆಯಲ್ಲಿನ ರಾಜ್ಯದ ಪಾಲಿನ ನೀರನ್ನು ಉಳಿಸಿಕೊಳ್ಳಲು ಹಾಗೂ ಅಣೆಕಟ್ಟೆಯ ಎತ್ತರವನ್ನು ಹೆಚ್ಚಿಸಿಕೊಳ್ಳಲು ಕರ್ನಾಟಕದ ಪಾಲಿಗೆ ಅನೇಕ ಪ್ಲಸ್ ಪಾಯಿಂಟ್‌ಗಳಿವೆ. ಅದರಲ್ಲಿ ಪ್ರಮುಖವಾಗಿ ಬಚಾವತ್ ಆಯೋಗದ ತೀರ್ಪು ಹಾಗೂ ಜಲ ಆಯೋಗದ ಅನುಮತಿ. ಈ ಎಲ್ಲ ಇದ್ದರೂ ರಾಜ್ಯ ಇಂದು ದುರಂತದ ದಿನಗಳಲ್ಲಿ ಸಿಲುಕಿದೆ.

ರಾಜಕೀಯವಾಗಿ ಈ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬೇಕಾದರೆ, ತೆಲುಗು ದೇಶಂ ಶಾಸಕ ಹಾಗೂ ಸಂಸದರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು. ಕೃಷ್ಣಾ ಯೋಜನೆಯಲ್ಲಿ ಗುತ್ತಿಗೆದಾರರಾಗಿ ಕಾರ್ಯ ನಿರ್ವಹಿಸಿದ ಕೆ.ಪ್ರಭಾಕರರೆಡ್ಡಿ ಇಂದು ತೆಲುಗು ದೇಶಂನ ಶಾಸಕ ಹಾಗೂ ನಾಯ್ಡು ಸರ್ಕಾರದಲ್ಲಿ ವಸತಿ ಮಂತ್ರಿಗಳಾಗಿದ್ದಾರೆ. ಅವರ ಸಹೋದರ ಜಿ.ಎಚ್. ರೆಡ್ಡಿ ಅವರು ಇವತ್ತಿಗೂ ಇಲ್ಲಿ ಗುತ್ತಿಗೆ ಕೆಲಸ ಮಾಡುತ್ತಿದ್ದಾರೆ!

ಕಳೆದ 25 ವರ್ಷಗಳಿಂದ ಕೃಷ್ಣಾ ಯೋಜನೆಯಲ್ಲಿ ನೂರಾರು ಕೋಟಿ ರೂ.ಗಳ ಗುತ್ತಿಗೆ ಕೆಲಸ ಮಾಡಿ ರಾಜ್ಯದಿಂದ ಲಾಭ ಪಡೆದಿದ್ದಾರೆ. ಅವರ ನೆರವು ಸದ್ಯದ ಸ್ಥಿತಿಯಲ್ಲಿ ಅಗತ್ಯ. ಹಾಗೇನಾದರೂ ನೆರವು ನೀಡಲು ನಿರಾಕರಿಸಿದರೆ ಯುಕೆಪಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಆಂಧ್ರದ ಎಲ್ಲ ಗುತ್ತಿಗೆದಾರರಿಗೆ ಮನೆಗೆ ಕಳಿಸಬೇಕು ಎಂಬುದು ಅಲ್ಲಿಯ ಕೆಲ ಅಧಿಕಾರಿಗಳ ಪಿಸುಮಾತಾಗಿದೆ.

ಏಕೆಂದರೆ ಈ ಕನ್ನಡದ ಅಧಿಕಾರಿಗಳಲ್ಲಿ ಒಳಗೊಳಗೆ ನೆಲದ ಸ್ವಾಭಿಮಾನ ಇತ್ತೀಚೆಗೆ ಮೂಡುತ್ತಿದೆ. ಈ ನಿಟ್ಟಿನಲ್ಲಿ ರಾಜ್ಯ ಸರ್ಕಾರ ಕ್ರಮ ಕೈಗೊಂಡರೆ ಆಂಧ್ರ ಸರಕಾರವು ಆ ಗುತ್ತಿಗೆದಾರರನ್ನು ಕಾಪಾಡುವುದಕ್ಕಾಗಿ ತನ್ನ ನಿಲುವಿನಲ್ಲಿ ಸಡಿಲತೆ ತೋರಬಹುದು ಎಂದು ಅವರು ಹೇಳುತ್ತಿದ್ದಾರೆ.

★ ★ ★

ಆಲಮಟ್ಟಿ ಅಣೆಕಟ್ಟು ಎತ್ತರ ಹೆಚ್ಚಳ ವಿವಾದ ಕುರಿತಂತೆ ಕೇಂದ್ರ ಸರ್ಕಾರವು ಸುಪ್ರೀಂ ಕೋರ್ಟಿಗೆ ಸಲ್ಲಿಸಿದ ಅಫಿಡವಿಟ್ ವಿರುದ್ಧ ಗುಲಬರ್ಗಾದಲ್ಲಿ ರಚನೆಗೊಂಡಿರುವ ಕೃಷ್ಣಾ ನೀರಾವರಿ ಹೋರಾಟ ಸಮಿತಿಯು 'ಗುಲಬರ್ಗಾ ಬಂದ್' ಮಾಡಿತ್ತು. ಸಮಿತಿಯ ಅಧ್ಯಕ್ಷರಾಗಿರುವ ಮಾಜಿ ಸಚಿವ ವೈಜನಾಥ ಪಾಟೀಲರು ಕಾವೇರಿ ವಿವಾದಕ್ಕಿಂತಲೂ ಜಟಿಲ ಸಮಸ್ಯೆಯಾಗಿರುವ ಹಾಗೂ ಆಲಮಟ್ಟಿ ಅಣೆಕಟ್ಟೆಯ ನೀರನ್ನು ಬಳಸಿಕೊಳ್ಳುವಲ್ಲಿ ಆಂಧ್ರದ ಬ್ಲಾಕ್‌ಮೇಲ್ ಹಾಗೂ ಕೇಂದ್ರದ ನಿಲುವನ್ನು ಖಂಡಿಸಿ ಸಾವಿರಾರು ರೈತರ ಮೆರವಣಿಗೆಯನ್ನು ನಡೆಸಿದರು. ಸರ್ವ ಪಕ್ಷಗಳು ಇದರಲ್ಲಿ ಭಾಗಿಗಳಾಗಿದ್ದರೂ ಬಿಜೆಪಿ ಮಾತ್ರ ತಟಸ್ಥವಾಗಿತ್ತು. ಶಹಾಪೂರದಲ್ಲಿಯೂ ಬಂದ್ ಆಚರಣೆಯನ್ನು ಮಾಡಲಾಗಿದೆ.

ಈ ಭಾಗದ ಸಚಿವರಾಗಿರುವ ಮಲ್ಲಿಕಾರ್ಜುನ ಖರ್ಗೆ, ಧರಂಸಿಂಗ್ ಡಾ. ಮಲಕಾರೆಡ್ಡಿ ಅಲ್ಲದೆ ಉತ್ತರ ಕರ್ನಾಟಕದವರು ಹಾಗೂ ನೀರಾವರಿ ಮಂತ್ರಿಗಳಾದ ಎಚ್.ಕೆ. ಪಾಟೀಲರು ಈಗಲಾದರೂ ಕೃಷ್ಣಾ ಯೋಜನೆಗಳಿಗೆ ದಾರಿ ತೋರಿಸಬೇಕಾಗಿದೆ.

ಇಲ್ಲದಿದ್ದರೆ, ರೈತರ ಕಣ್ಣೀರು ಹಾಗೆಯೇ ಸುರಿಯುತ್ತಿರುತ್ತದೆ. 'ರೈತರು, ರೈತರು' ಎಂದು ಬೊಬ್ಬೆ ಹಾಕುವ ಎಲ್ಲಾ ಸರ್ಕಾರಗಳು, ರೈತರ ಕಣ್ಣೀರು ಒರೆಸಲು ಪ್ರಯತ್ನಿಸಿಲ್ಲ ಎಂಬುದು ಇಲ್ಲಿಯ ಸಾವಿರಾರು ರೈತರ ನೋವಿನ ಮಾತಾಗುತ್ತದೆ. ■



ಹೆಚ್.ಕೆ. ಪಾಟೀಲ್



ಧರ್ಮಸಿಂಗ್



ಮಲ್ಲಿಕಾರ್ಜುನ ಖರ್ಗೆ

# ಆಲಮಟ್ಟಿ : ಆಂಧ್ರಕ್ಕೆ ಕರ್ನಾಟಕ ತಲೆಬಾಗಬೇಕೆ ?

**ವೈಜನಾಥ ಪಾಟೀಲ**
*ಮಾಜಿ ಸಚಿವರು*



ಬಚಾವತ್ ತೀರ್ಪಿನಿಂದಾಗಿ ಕರ್ನಾಟಕ ಕೇವಲ 724 ಟಿ.ಎಂ.ಸಿ. ನೀರನ್ನು ಬಳಸಲು ಮಾತ್ರ ಸಾಧ್ಯವಾಗಲಿದೆ. ಈ ಪ್ರಮಾಣ ಅತ್ಯಂತ ಕಡಿಮೆಯಾಗಿದೆ. ಆದರೆ ಆಂಧ್ರಪ್ರದೇಶವು ಕಾನೂನಿನ ನಿಯಮಾವಳಿಗಳನ್ನು ಗಾಳಿಗೆ ತೂರಿ ತೆಲುಗು ಗಂಗಾ ಹಾಗೂ ನಾಗಾರ್ಜುನ ಮತ್ತು ಶ್ರೀಶೈಲಂ ಅಣೆಕಟ್ಟುಗಳನ್ನು ಅಕ್ರಮವಾಗಿ ಕಟ್ಟಿದೆ. ಈ ಬಗ್ಗೆ ಕೇಂದ್ರ ಸರ್ಕಾರ ಆಕ್ಷೇಪ ಏಕೆ ಎತ್ತಲಿಲ್ಲ?

ಬಚಾವತ್ ತೀರ್ಪಿನಂತೆ ನಮಗೆ ನಿಗದಿಪಡಿಸಿದ ನೀರನ್ನು ಬಳಸಿಕೊಳ್ಳಲು ಬೇಕಾದ ಉಪಯುಕ್ತ ವಿದ್ಯುತ್ತನ್ನು ಪಡೆಯಲು ಆಲಮಟ್ಟಿ ಅಣೆಕಟ್ಟೆಯ ಎತ್ತರ 5 ಮೀಟರ್ ಏರಿಸಲು ನಿರ್ಧರಿಸಲಾಗಿದೆ. ಸಂದರ್ಭವನ್ನು ಅರಿಯದೇ ಆಂಧ್ರದ ಒತ್ತಡಕ್ಕೆ ಮಣಿದು ಕೇಂದ್ರ ಸರಕಾರವು ಹೆಚ್ಚಳ ವಿರೋಧಿಸಿ ಸುಪ್ರೀಂ ಕೋರ್ಟ್‌ಗೆ ಅಫಿಡವಿಟ್‌ನ್ನು ಸಲ್ಲಿಸಿತು ಎಂದು ವೈಜನಾಥ ಪಾಟೀಲ ಆಪಾದಿಸಿದರು.

ನಿಗದಿಪಡಿಸಿದ ಕಾಲಾವಕಾಶದೊಳಗೆ ಕೇಂದ್ರ ಸರ್ಕಾರ ಸಲ್ಲಿಸಿದ ಅಫಿಡವಿಟ್‌ನ್ನು ಹಿಂದಕ್ಕೆ ತೆಗೆದುಕೊಳ್ಳಬೇಕು. ಇಲ್ಲದಿದ್ದರೆ ರಾಜ್ಯವ್ಯಾಪಿ ಚಳುವಳಿಗಾರರೇ ಆಲಮಟ್ಟಿಗೆ ತೆರಳಿ ಅಣೆಕಟ್ಟೆಗೆ ಕ್ರಸ್ಟ್‌ಗೇಟ್ ಕೂಡಿಸಬೇಕಾಗುತ್ತದೆ ಎಂದು ಎಚ್ಚರಿಸಿದರು.

ಕೃಷ್ಣಾ ನದಿ ನೀರಿನ ಬಗ್ಗೆ ಗ್ರಾಮೀಣ ಪ್ರದೇಶದ ಜನರಿಗೆ ಸರಿಯಾದ ಮಾಹಿತಿಯಿಲ್ಲ. ಅವರಲ್ಲಿ ಅರಿವು ಮೂಡಿಸಲು ಪ್ರತಿಭಟನಾ ರ್‍ಯಾಲಿಗಳನ್ನು ಗ್ರಾಮೀಣ ಮಟ್ಟದಲ್ಲಿಯೂ ಸಂಘಟಿಸುವಂತೆ ಕರೆ ನೀಡಿದರು.

★

**ಎಸ್.ಕೆ. ಕಾಂತಾ**
*ಮಾಜಿ ಸಚಿವರು, ಸಮತಾ ಪಕ್ಷದ ರಾಜ್ಯಾಧ್ಯಕ್ಷ*

ಕೃಷ್ಣಾ ನದಿ ನೀರಿನ ನಮ್ಮ ಪಾಲಿನ ಹಕ್ಕನ್ನು ದೊರಕಿಸಿಕೊಳ್ಳಲು ಎಲ್ಲರೂ ಸಂಘಟಿತರಾಗಿ ಹೋರಾಡಬೇಕು. 'ಮಾಡು ಇಲ್ಲವೇ ಮಡಿ' ಎಂಬ ನೀತಿಯನ್ನು ಅನುಸರಿಸಿದಾಗ ಮಾತ್ರ ನಮಗೆ ನ್ಯಾಯ ದೊರಕುವುದು.

ಸರ್ಕಾರಗಳು ಸರಿಯಾಗಿ ಉದ್ಯೋಗಗಳನ್ನು ಸೃಷ್ಟಿ ಮಾಡದೇ ಇರುವುದರಿಂದ ಅನೇಕ ಯುವಕರು ನಿರುದ್ಯೋಗಿಗಳಾಗಿ ಅಪರಾಧೀಕರಣದಂತಹ ಹೇಯ ಕೃತ್ಯದಲ್ಲಿ ತೊಡಗಿರುವರು. ಇದನ್ನು ತಪ್ಪಿಸಲು ಉದ್ಯೋಗ ನೀಡಿಕೆಗೆ ಹೆಚ್ಚಿನ ಆದ್ಯತೆ ನೀಡಲು ಸಲಹೆ ಮಾಡಿದರು.

★

**ಉಸ್ತಾದ್ ಸಾದತ್ ಹುಸೇನ್,**
*ಹಿರಿಯ ವಕೀಲ, ಕಾಂಗ್ರೆಸ್ ಮುಖಂಡ*

ಅಧಿಕಾರದ ಆಸೆಗಾಗಿ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ ಅವರು ಆಂಧ್ರದ ಮುಖ್ಯಮಂತ್ರಿ ಎನ್. ಚಂದ್ರಬಾಬು ನಾಯ್ಡು ಅವರ ಪ್ರಭಾವಕ್ಕೆ ಒಳಗಾಗಿ ಸುಪ್ರೀಂ ಕೋರ್ಟಿಗೆ ಅಫಿಡವಿಟ್ ಸಲ್ಲಿಸಿ ಕರ್ನಾಟಕದ ಜನತೆಗೆ ಅನ್ಯಾಯ ಮಾಡಿದ್ದಾರೆ.

★

**ಡಿ.ಜಿ. ಸಾಗರ್,**
*ದಲಿತ ಸಂಘರ್ಷ ಸಮಿತಿ, ರಾಜ್ಯದ ಸಂಘಟನಾ ಸಂಚಾಲಕ:*

ಕರ್ನಾಟಕಕ್ಕೆ ಅನ್ಯಾಯವಾದಾಗ ಅದರ ವಿರುದ್ಧ ಹೋರಾಡಲು ಪಕ್ಷ ಭೇದ ಮರೆತು ಮುಂದೆ ಬರುವುದಾಗಿ ಭರವಸೆ ನೀಡಿ ವಾಜಪೇಯಿಯವರ ನೀತಿಯನ್ನು ಖಂಡಿಸಿದರು.

**ಹಣಮಂತರಾವ ದೇಸಾಯಿ,**
*ಲೋಕಶಕ್ತಿ ಮುಖಂಡ, ಮಾಜಿ ಶಾಸಕ:*

ಕರ್ನಾಟಕ ಮತ್ತು ಆಂಧ್ರ ನಡುವೆ ಉಂಟಾದ ವಿವಾದಕ್ಕೆ ಕಾರಣವಾದ ಕೇಂದ್ರ ಸರಕಾರ ಸುಪ್ರೀಂ ಕೋರ್ಟ್‌ನಲ್ಲಿ ಸಲ್ಲಿಸಿರುವ ಅಫಿಡವಿಟ್‌ನ್ನು ಹಿಂದಕ್ಕೆ ಪಡೆಯಲು ರಾಷ್ಟ್ರಪತಿಗಳು ಮಧ್ಯ ಪ್ರವೇಶಿಸಬೇಕು.

ಆಲಮಟ್ಟಿ ಅಣೆಕಟ್ಟು ಕುರಿತು ಕೇಂದ್ರ ಸರಕಾರವು ಏಕಪಕ್ಷೀಯ ನಿಲುವನ್ನು ಹೊಂದಿದೆ. ಆಂಧ್ರಕ್ಕೆ ಬೆಂಬಲಿಸುತ್ತಿದೆ. ಇದರ ಪರಿಣಾಮ ಕೇಂದ್ರವು ಸುಪ್ರೀಂ ಕೋರ್ಟ್‌ಗೆ ಅಫಿಡವಿಟ್ ಸಲ್ಲಿಸಿದ್ದರಿಂದ ಬಚಾವತ್ ತೀರ್ಪಿನನ್ವಯ ಬರುವ 2000ದ ಮೇ 31 ರೊಳಗೆ ಕೃಷ್ಣಾ ನದಿಯಿಂದ ರಾಜ್ಯದ ಪಾಲಿನ 729 ಟಿ.ಎಂ.ಸಿ. ನೀರನ್ನು ಬಳಸಿಕೊಳ್ಳಲು ಸಾಧ್ಯವಾಗುವುದಿಲ್ಲ.

ಕೇಂದ್ರ ಸರಕಾರವು ಪ್ರಜಾತಂತ್ರ ವ್ಯವಸ್ಥೆಯಡಿ ಜವಾಬ್ದಾರಿಯುತವಾಗಿ ವರ್ತಿಸದೇ ಗೌರವವನ್ನು ಬಿಟ್ಟು ಕರ್ನಾಟಕದ ಜನರ ವಾಸ್ತವಿಕ ಸ್ಥಿತಿಯನ್ನು ಅವಲೋಕಿಸದೆ ಕೇವಲ ತಮ್ಮ ಸರಕಾರಕ್ಕೆ ಬೆಂಬಲ ನೀಡಿದ್ದರಿಂದ ಆಂಧ್ರದ ಒತ್ತಡಕ್ಕೆ ಮಣಿದಿದೆ. ಆದ್ದರಿಂದ ಆಂಧ್ರ ರಾಜ್ಯದ ರೈತರ ಹಿತಾಸಕ್ತಿಯನ್ನಷ್ಟೇ ಗಮನಿಸುತ್ತಿದೆ.

ಕೇಂದ್ರ ಸರಕಾರವು ವಾಸ್ತವಿಕ ವಿಷಯನ್ನರಿತು ಅಣೆಕಟ್ಟು ಎತ್ತರ ಹೆಚ್ಚಳಕ್ಕೆ ಸಹಕರಿಸಬೇಕು.

★

**ಕೆ. ನೀಲಾ,**
*ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆಯ ನಾಯಕಿ*



ಆಂಧ್ರಪ್ರದೇಶದ ಕುಟಿಲ ನೀತಿಯನ್ನು ಖಂಡಿಸುತ್ತೇನೆ. ಇದರಲ್ಲಿ ಎರಡು ಮಾತಿಲ್ಲ. ಇವತ್ತಿನ ಆಲಮಟ್ಟಿ ಸಮಸ್ಯೆಯು ಉಲ್ಬಣಗೊಳ್ಳಲು ಇಲ್ಲಿಯವರೆಗೆ ಆಳಿದ ಎಲ್ಲ ಸರ್ಕಾರಗಳು ಕಾರಣವಾಗಿವೆ. ಮೇ 31ರವರೆಗೆ ನೀರನ್ನು ಬಳಸಿಕೊಳ್ಳಲು ಬಚಾವತ್ ತೀರ್ಪು ನೀಡಿದೆ. ಅದನ್ನು ಸರಿಯಾಗಿ ಬಳಸಿಕೊಳ್ಳಲು ನಮ್ಮ ರಾಜ್ಯದ ಯಾವ ಸರ್ಕಾರಗಳೂ ಮನಸ್ಸು ಮಾಡಲಿಲ್ಲ. ಆದರೆ, ಆಂಧ್ರದ ಚಂದ್ರಬಾಬು ನಾಯ್ಡು ಶಾಣ್ಯಾ ಮನುಷ್ಯ, ತನ್ನ ಪಾಲಿನ ನೀರನ್ನು ಬಳಸಿಕೊಂಡಿದ್ದಲ್ಲದೇ, ನಮ್ಮ ಪಾಲಿನ ನೀರಿಗೂ ಕೈ ಹಾಕಿದ್ದಾರೆ.

'ಬಾಗಿಲುಗಳು ಖುಲ್ಲಾ ಇಟ್ಟಿದ್ದೇವೆ. ಪ್ರಾಣಿಗಳು ಬರುತ್ತಿವೆ.'' ಸರ್ಕಾರ ಸೀರಿಯಸ್ಸಾಗಿ ಯೋಜನೆಯನ್ನು ಮುಗಿಸಲು ಕಾರ್ಯತತ್ಪರರಾದರೆ, ಈ ಸಮಸ್ಯೆಯುಂಟಾಗುತ್ತಿರಲಿಲ್ಲ. ಇಂತಹ ಮೇಜರ್ ತಪ್ಪು ಆಗುತ್ತಿರಲಿಲ್ಲ. ಅದೆಲ್ಲ ಬಿಟ್ಟು ಈಗ ಮೊಸಳೆ ಕಣ್ಣೀರು ಹಾಕುತ್ತಿದ್ದಾರೆ.

ಕೇಂದ್ರ ಸರ್ಕಾರವು ನಿಚ್ಚಳವಾಗಿ ಕರ್ನಾಟಕಕ್ಕೆ ದ್ರೋಹ ಮಾಡುತ್ತಿದೆ. ನಾಯ್ಡು ಅವರ ಮರ್ಜಿ ಕಾಯಲು ಅಫಿಡವಿಟ್‌ನ್ನು ಸಲ್ಲಿಸಿದೆ. ಬಿಜೆಪಿ ನೇತೃತ್ವದ ಕೇಂದ್ರ ಸರ್ಕಾರ ಕರ್ನಾಟಕದ ಜನತೆಗೆ ಮಾಡುತ್ತಿರುವ ಈ ದ್ರೋಹ ಸರಿಯಾದುದಲ್ಲ. ಸಲ್ಲಿಸಿರುವ ಅಫಿಡವಿಟ್ ಹಿಂದಕ್ಕೆ ಪಡೆದುಕೊಳ್ಳಬೇಕು.

★

**ಶರಣ ಗೊಬ್ಬುರ**
*ಪತ್ರಕರ್ತ*

ಉತ್ತರ ಕರ್ನಾಟಕ ಜನತೆಯ ಜೀವನಾಡಿಯಾಗಿರುವ ಕೃಷ್ಣಾ ಮೇಲ್ದಂಡೆ ಯೋಜನೆ ಕಾಮಗಾರಿ ನಿಗದಿತ ವೇಳೆಯಲ್ಲಿ ಮುಗಿಯಲು ಕೆಲವೇ ಕೆಲವು ದಿನಗಳು ಉಳಿದಿವೆ. ಕಳೆದ ಸುಮಾರು 24 ವರ್ಷಗಳ ಹಿಂದೆ ಆಗಿನ ಕೇಂದ್ರ ಸರ್ಕಾರ ಕೃಷ್ಣಾ ನದಿ ನೀರಿನ ಹಂಚಿಕೆ ಮಾಡಿ, ಕೆಲವು ವರ್ಷಗಳ ಕಾಲ ಸಮಯ ನೀಡಿ ಯೋಜನೆಯ ಕಾಮಗಾರಿ ಮುಗಿಸಿಕೊಳ್ಳುವಂತೆ ಸೂಚಿಸಿ ಆದೇಶ

ಹೊರಡಿಸಿತ್ತು. ಅದರಂತೆ ನಮ್ಮ ನೆರೆಯ ರಾಜ್ಯಗಳಾದ ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶ ರಾಜ್ಯಗಳು ಕೇಂದ್ರ ಸರ್ಕಾರ ನೀಡಿದ ನಿಯಮವನ್ನು ಸದುಪಯೋಗಪಡಿಸಿಕೊಂಡು ನಿಗಿದತ ವೇಳೆಯೊಳಗಾಗಿ ನೀರಾವರಿ ಯೋಜನೆಗಳ ಕಾಮಗಾರಿ ಮುಗಿಸಿ ರಾಜ್ಯದ ಜನತೆಗೆ ನೆಮ್ಮದಿಯ ಉಸಿರು ಬಿಡುವಂತೆ ಮಾಡಿದವು.



ಆದರೆ 25 ವರ್ಷಗಳಲ್ಲಿ ನಮ್ಮ ರಾಜ್ಯದಲ್ಲಿ ಅಧಿಕಾರದ ಗದ್ದುಗೆ ಹಿಡಿದ ಬಹುತೇಕ ಎಲ್ಲ ಪಕ್ಷಗಳ (ಕೆಲವು ಹೊರತಾಗಿ) ನಾಯಕರು ಯುಕೆಪಿ ಕಾಮಗಾರಿ ಮುಗಿಸುವತ್ತ ಗಮನ ಹರಿಸಲಿಲ್ಲ. ಮುಗಿದಿರುವ ಅರ್ಧದಷ್ಟು ಕಾಮಗಾರಿಯಲ್ಲಿ ಎಡರು ತೊಡರುಗಳು ಕಾಣಿಸಿಕೊಂಡು ಆಗಾಗ ಕೆಲ ಕಾಲುವೆಗಳು ಬಿರುಕು ಬಿಟ್ಟಿವೆ. ಬರೀ ಭಾಷಣ ಮಾಡುವಲ್ಲಿ, ಹೇಳಿಕೆ ನೀಡುವಲ್ಲಿ, ಕಾಗದ ಪತ್ರಗಳಲ್ಲಿ ಕೆಲಸ ಮಾರುದ್ದ ಮುಗಿದಿದೆ ಎಂದು ಹೇಳುವುದರಲ್ಲಿಯೇ ಅಧಿಕಾರದ ರುಚಿ ಉಂಡ ನಮ್ಮ ರಾಜಕಾರಣಿಗಳು ಕಾಲ ಕಳೆದರು. ಈ ಸಂದರ್ಭದಲ್ಲಿ ಉನ್ನತ ಅಧಿಕಾರ ವರ್ಗದಲ್ಲಿ ಅನೇಕರು ಅವರ ತಾಳಕ್ಕೆ ತಕ್ಕಂತೆ ಕುಣಿದರು. ಇದೆಲ್ಲದರ ಪರಿಣಾಮ ಉತ್ತರ ಕರ್ನಾಟಕದ ಜನತೆ ನಲುಗುವಂತಾಗಿದೆ ಮಳೆಗಾಗಿ ಪಿಳಿ ಪಿಳಿ ಕಣ್ಣುಗಳು ಮುಗಿಲುಕಡೆಗೆ ಬಿಟ್ಟು ನೋಡಿ ಕಂಗಾಲಾಗುವಂತಾಗುತ್ತಿದೆ.

ಕರ್ನಾಟಕ ರಾಜ್ಯದ ಸುಮಾರು 15 ಜಿಲ್ಲೆಗಳಿಗೂ ಹೆಚ್ಚಿನ ರೈತರಿಗೆ ವರದಾನವಾಗಬೇಕಾಗಿದ್ದ ಕೃಷ್ಣಾ ಮೇಲ್ದಂಡೆ ಯೋಜನೆ ಕಳೆದ ಸುಮಾರು ಎರಡೂವರೇ ದಶಕಗಳಲ್ಲಿ ನಮ್ಮ ಜನಪ್ರತಿನಿಧಿಗಳು ಜನತೆಯೊಂದಿಗೆ ಆಡಿದ ಸುಳ್ಳಿನ ಚೆಲ್ಲಾಟದಿಂದಾಗಿ ಈಗಿನ ಮತ್ತು ಮುಂದಿನ ಪೀಳಿಗೆಗಳು ತೊಂದರೆ ಪಟ್ಟು, ಆಸ್ತಿ-ಪಾಸ್ತಿ ಮಾರಿ ದೂರದ ಮುಂಬಯಿ ಅಂತಹ ಪಟ್ಟಣಗಳಿಗೆ ವಲಸೆ ಹೋಗುವ ಪರಿಸ್ಥಿತಿ ಬಂದಿದೆ.

ಗಡ್ಡಕ್ಕೆ ಬೆಂಕಿ ಹತ್ತಿದಾಗ ಬಾವಿ ತೋಡಿದರಂತೆ ಎಂಬ ಗಾದೆಮಾತಿನಂತೆ 1975ರಲ್ಲಿ ಕೇಂದ್ರ ಸರ್ಕಾರದ ನೀರಾವರಿ ಮಂತ್ರಿ ಆಂಧ್ರಪ್ರದೇಶದ ಕೆ.ಎಲ್. ರಾವ್, ಅವರು ಜಾರಿಗೆ ತಂದ ನಿಯಮ ನೀತಿ ಪಾಲಿಸದ ನಮ್ಮವರೆ (ರಾಜ್ಯ ಆಳಿದವರು) ಕಾಮಗಾರಿ ಮುಗಿಸದೆ ವಿಳಂಬ ನೀತಿ ಅನುಸರಿಸಿ ಘೋರ ತಪ್ಪು ಮಾಡಿದ್ದಾರೆ.

ಈಗ ಆ ವಿಷಯಕ್ಕಾಗಿ ಒಬ್ಬರ ಮೇಲೊಬ್ಬರು ಗೂಬೆ ಕೂರಿಸಿ ಹೋರಾಟ, ಪ್ರತಿಭಟನೆ, ಬಂದ್, ಪತ್ರಿಕಾ ಹೇಳಿಕೆ ನೀಡಿ ನಾವು ತಪ್ಪಿತಸ್ಥರಲ್ಲವೆಂದು ವಾದಿಸಲು ಪ್ರಯತ್ನಿಸುತ್ತಿದ್ದಾರೆ.

ಒಂದು ಮಾತಂತೂ ನಿಜ. ಯುಕೆಪಿಯ ವಿಳಂದ ಕಾಮಗಾರಿಯಿಂದ ಲಕ್ಷ-ಲಕ್ಷ ರೈತರಿಗೆ ತೊಂದರೆಯಾಗುತ್ತಿದೆ ಮತ್ತು ಶಾಶ್ವತವಾಗಿ ಆಗುವ ಲಕ್ಷಣಗಳು ಕಾಣುತ್ತಿವೆ. ಇದಕ್ಕೆ ಪರಿಹಾರ ಯಾರಿಂದ? ■

---

# ಕಾವೇರಿಗಿಂತಲೂ ಕೃಷ್ಣಾ ಕಾವೇರಿದೆ !

ಕಾವೇರಿ ಸಮಸ್ಯೆಗಿಂತಲೂ ಕೃಷ್ಣಾ ನದಿಯ ಸಮಸ್ಯೆ ಕಾವೇರ ಬೇಕಾಗಿತ್ತು
ಆದರೆ ಹಾಗಾಗಲಿಲ್ಲ.

ಇಲ್ಲಿ ಮಲ್ಲಿಕಾರ್ಜುನ ಖರ್ಗೆ, ಧರಂಸಿಂಗ್ ಅವರಂತಹ ಗಟ್ಟಿ ರಾಜಕಾರಣಿಗಳಿದ್ದಾರೆ. ಡಾ. ಮಲಕಾರೆಡ್ಡಿ, ಬಾಬುರಾವ ಚವ್ಹಾಣರಂತಹ ನೈತಿಕತೆಯ ಮೇಲೆ ಹೋರಾಟ ಮಾಡುವ ನಾಯಕರಿದ್ದಾರೆ. ಹಣದ ಮೇಲೆಯೇ ಚದುರಂಗದಾಟವನ್ನಾಡುವ ಬಾಬುರಾವ ಚಿಂಚನಸೂರ ಹಾಗೂ 'ಆವಾಜ್' ಮಾಡಬಲ್ಲ ಖಮರಲ್ ಇಸ್ಲಾಂ ಅಲ್ಲದೇ, ದರ್ಶನಾಪೂರ ಶರಣಬಸಪ್ಪ ಅವರನ್ನು ಸೋಲಿಸಿದ ಶಿವಶೇಖರಪ್ಪಾ ಶಿರವಾಳ, ಬಸವಂತರೆಡ್ಡಿ ಮೋತಕಪಲ್ಲಿ, ಡಾ.ರಾಜಾವೆಂಕಟಪ್ಪ ನಾಯಕರಂತಹ ಶಾಸಕರಿದ್ದರೂ ಯುಕೆಪಿಯ ಸಮಸ್ಯೆಯನ್ನು ಆಂಧ್ರದ ನಾಯ್ಡು ಅವರ ಕೈಯಿಂದ ಕಸಿದುಕೊಂಡು ಬಗೆಹರಿಸಲಾಗುತ್ತಿಲ್ಲ.

ಇಲ್ಲಿನ ರೈತರ ತಾಳ್ಮೆಯನ್ನು ಪರೀಕ್ಷಿಸುವಂತಿದೆ. ಈ ಭಾಗದಲ್ಲಿ ರೈತರು ಸಹನೆಯನ್ನು ತೋರಿಸುತ್ತಾರೆ. ತಕ್ಷಣಕ್ಕೆ ಸಿಡಿದು ಬೀಳುವುದಿಲ್ಲ. ಇದನ್ನೇ ಬಂಡವಾಳವನ್ನಾಗಿಸಿಕೊಂಡು ರಾಜ್ಯದ ನಾಯಕರು, ಕೇಂದ್ರದ ನಾಯಕರು ದುರುಪಯೋಗ ಮಾಡಬಾರದು.

ಸಹನೆಯ ಕಟ್ಟೆ ಮೀರಿದ ಸಿಟ್ಟು ಇಡೀ ವಾತಾವರಣವನ್ನು ಕಲುಷಿತಗೊಳಿಸುತ್ತದೆ. 'ಬಡವನ ಸಿಟ್ಟು ದವಡೆಗೆ ಮೂಲ' ಎಂಬುದು ಹಳೇ ಗಾದೆ, ರೈತರಿಗೆ ಸಿಟ್ಟು ಬಂದರೆ ರಾಜ್ಯಕ್ಕೆ ಮೂಲ'ವಾಗಬಹುದು.

ನಾಯಕರಾರೂ ರೈತರ ಸಹನೆ ಪರೀಕ್ಷೆ ಮಾಡದಿರಲಿ. ಮಾಡಿದ್ದಾದರೆ ಕಾವೇರಿಗಿಂತಲೂ ದೊಡ್ಡ ಸಮಸ್ಯೆಯಾಗಬಹುದು.

---

ರಾಜ : ಬಾಡಿಗೆ ಕೇಳಿ ಕೇಳಿ ಬೇಸತ್ತ ಮಾಲೀಕ ಮನೇನೇ ನಮ್ಮ ಹೆಸರಿಗೆ ಬರೆದುಕೊಟ್ಟುಬಿಟ್ಟ.

ರಾಮು : ಹೌದೇ! ತುಂಬಾ ಅದೃಷ್ಟವಂತ ನೀನು.

ರಾಜು : ಮನೆ ಕಂದಾಯ, ನೀರಿನ ಕಂದಾಯ, ತೆರಿಗೆ ನೋಟೀಸು ಬರೋವರೆಗೂ ನಾನು ಹಾಗೇ ಅಂದುಕೊಂಡಿದ್ದೆ.

★

ರಾಜು : ಏನಯ್ಯಾ ಕಾಫಿ ಕುಡಿದ ಲೋಟ ನೀನೇ ತೊಳೀತಾ ಇದ್ದೀಯ?

ರಾಮು : ಸ್ವಲ್ಪ ವ್ಯಾಯಾಮ ಮಾಡಿ ಅಂತ ಡಾಕ್ಟರು ಹೇಳಿದಾರೆ ಅದಕ್ಕೇ.....

★

ಮಾಲೀಕ : ನಮ್ಮ ಹೋಟೆಲಲ್ಲಿ ಎಲ್ಲಾ ಐಟಮ್ಸ್ ಕರೆಂಟಿಂದಲೇ ತಯಾರಿಸೋದು ಸಾರ್.

ಗಿರಾಕಿ : ಹೌದಾ! ಅದಕ್ಕೇ ಇರಬೇಕು. ಬಿಲ್ ಮುಟ್ಟಿದರೇ ಶಾಕ್ ಹೊಡೆಯುತ್ತೆ.

# ರೈತರ ಆಕ್ರೋಶಕ್ಕೆ ಕಾರಣವಾದ ಆಲಮಟ್ಟಿ ವಿವಾದದ ಮೂಲ



**ಆಲಮಟ್ಟಿ ಅಣೆಕಟ್ಟಿನ ಎತ್ತರ ಕುರಿತು ಕೇಂದ್ರ ಸರಕಾರ ಕರ್ನಾಟಕದ ಹಿತಾಸಕ್ತಿಗೆ ಮಾರಕವಾಗುವ ರೀತಿಯಲ್ಲಿ ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಮಾಣ ಪತ್ರ ಸಲ್ಲಿಸಿರುವುದು ಈಗ ಕರ್ನಾಟಕ ಜನತೆಯ ಆಕ್ರೋಶಕ್ಕೆ ಕಾರಣವಾಗಿದೆ.**

ಆಲಮಟ್ಟಿ ಇಂದು ವಿವಾದದ ಕೇಂದ್ರಬಿಂದು.

ಆಲಮಟ್ಟಿ ಅಣೆಕಟ್ಟೆಯ ಎತ್ತರದ ವಿಚಾರದಲ್ಲಿ ಹಾಗೂ ಕೃಷ್ಣಾ ಮೇಲ್ದಂಡೆ ಯೋಜನೆಯ ನೀರಿನ ಬಳಕೆಯಲ್ಲಿ ಕರ್ನಾಟಕ ಮತ್ತು ಆಂಧ್ರಪ್ರದೇಶ ರಾಜ್ಯಗಳ ನಡುವಿನ ಯುದ್ಧಕ್ಕೆ ರಣರಂಗವಾಗಿರುವ ಸ್ಥಳವಿದು.

ಆಲಮಟ್ಟಿ ಅಣೆಕಟ್ಟಿನ ಎತ್ತರ ಕುರಿತು ಕೇಂದ್ರ ಸರಕಾರ ಕರ್ನಾಟಕದ ಹಿತಾಸಕ್ತಿಗೆ ಮಾರಕವಾಗುವ ರೀತಿಯಲ್ಲಿ ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಮಾಣ ಪತ್ರ ಸಲ್ಲಿಸಿರುವುದು ಈಗ ಕರ್ನಾಟಕ ಜನತೆಯ ಆಕ್ರೋಶಕ್ಕೆ ಕಾರಣವಾಗಿದೆ.

**ಕೃಷ್ಣಾ ಮೇಲ್ದಂಡೆ ಯೋಜನೆ :** ಭಾರತ ದೇಶದ ದಕ್ಷಿಣ ದ್ವೀಪಕಲ್ಪದಲ್ಲಿ ಎರಡನೆಯ ದೊಡ್ಡ ನದಿ ಕೃಷ್ಣಾ. ನದಿಯು ಮಹಾರಾಷ್ಟ್ರ ರಾಜ್ಯದ ಪಶ್ಚಿಮ ಘಟ್ಟದ ಮಹಾದೇವ ಪರ್ವತ ಶ್ರೇಣಿಯಲ್ಲಿ ಸಮುದ್ರ ಮಟ್ಟಕ್ಕಿಂತ 1338 ಮೀ. ಎತ್ತರದಲ್ಲಿ ಉಗಮವಾಗಿ, ಸುಮಾರು 1392 ಕೀ.ಮೀ. ಗಳವರೆಗೆ ಮಹಾರಾಷ್ಟ್ರ ಕರ್ನಾಟಕ ಹಾಗೂ ಆಂಧ್ರಗಳಲ್ಲಿ ಹರಿದು ಬಂಗಾಳ ಕೊಲ್ಲಿ ಸೇರುತ್ತದೆ.

ಕೃಷ್ಣಾ ಜಲಾನಯನ ಪ್ರದೇಶ ಸುಮಾರು 2,60,000 ಚ.ಕಿ.ಮೀ. ವಿಸ್ತೀರ್ಣ ಇದ್ದು, ಅದರಲ್ಲಿ 69,000 (26.8%). ಮಹಾರಾಷ್ಟ್ರ ರಾಜ್ಯದಲ್ಲಿದ್ದು. 1,12,600 ಚ.ಕಿ.ಮೀ. (43.80%) ಕರ್ನಾಟಕದಲ್ಲಿ ಹಾಗೂ 75,600 ಚ.ಕಿ.ಮೀ. (29.40%) ಆಂಧ್ರಪ್ರದೇಶದಲ್ಲಿದೆ. ಕರ್ನಾಟಕದ ಬೆಳಗಾವಿ, ವಿಜಾಪೂರ, ಗುಲಬರ್ಗಾ ಹಾಗೂ ರಾಯಚೂರು ಜಿಲ್ಲೆಗಳಲ್ಲಿ ಕೃಷ್ಣಾನದಿಯು ಪ್ರವಹಿಸುತ್ತದೆ.

ಕೃಷ್ಣಾ ನದಿಯಲ್ಲಿ ಯಥೇಚ್ಛವಾಗಿ ಹರಿಯುತ್ತಿರುವ ನೀರನ್ನು ಗುಲಬರ್ಗಾ ಹಾಗೂ ವಿಜಾಪೂರ ಜಿಲ್ಲೆಗಳಲ್ಲಿ ಉಪಯೋಗಿಸಿಕೊಳ್ಳಲು ಆಗಿನ ಹೈದರಾಬಾದ್ ಪ್ರಾಂತ್ಯವು ಕೃಷ್ಣಾ ಕೆಳದಂಡೆ ಯೋಜನೆ ರೂಪಿಸಿತ್ತು. (ಆಗಿನ ನಂದಿಕೊಂಡ ಮತ್ತು ಈಗಿನ ನಾಗಾರ್ಜುನ ಸಾಗರ) ಆಗಿನ ಮುಂಬಯಿ ರಾಜ್ಯವು ವಿಜಾಪೂರ ಜಿಲ್ಲೆಯ ಕೆಲ ಭಾಗಕ್ಕೆ ಏತ ನೀರಾವರಿಯ ಮೂಲಕ ನೀರಾವರಿ ಒದಗಿಸಲು 1950ನೇ ಇಸವಿಯಲ್ಲಿ ಒಂದು ಯೋಜನೆ ರೂಪಿಸಿತ್ತು. 1956ರಲ್ಲಿ ರಾಜ್ಯ ಪುನರ್ವಿಂಗಡಣೆಯಾದಾಗ ವಿಜಾಪೂರ, ರಾಯಚೂರು ಮತ್ತು ಗುಲಬರ್ಗಾ ಜಿಲ್ಲೆಗಳು ಕರ್ನಾಟಕ ರಾಜ್ಯದಲ್ಲಿ ಸೇರಿಕೊಂಡಿದ್ದರಿಂದ ಯೋಜನೆಯನ್ನು ಪುನರ್ ಪರಿಶೀಲಿಸಿ ಪರ್ಯಾಯವಾಗಿ ಅಣೆಕಟ್ಟು ಸ್ಥಳವನ್ನು ಆಲಮಟ್ಟಿಗೆ ಬದಲಾಯಿಸಲಾಯಿತು.

**ಕೃಷ್ಣಾ ನದಿ ನೀರಿನ ಹಂಚಿಕೆ :** ಕೃಷ್ಣಾ ನದಿ ಅಂತರರಾಜ್ಯ ನದಿಯಾಗಿದ್ದು ಮಹಾರಾಷ್ಟ್ರ, ಕರ್ನಾಟಕ ಹಾಗೂ ಆಂಧ್ರಗಳಲ್ಲಿ ಹರಿಯುತ್ತದೆ. ಕೃಷ್ಣಾ ಜಲವಿವಾದ ನ್ಯಾಯಮಂಡಳಿಯು ಆಂಧ್ರಪ್ರದೇಶದ ವಿಜಯವಾಡ ಆಣೆಕಟ್ಟು ಬಳಿ 75 ಶತಾಂಶದ ಕೃಷ್ಣಾ ನದಿಯ ನೀರಿನ ಅವಲಂಬಿತ ನೀರಿನ ಪ್ರಮಾಣವನ್ನು ಆಧರಿಸಿ 2060 ಟಿಎಂಸಿ ನೀರು ಲಭ್ಯವಿರುವುದಾಗಿ ನಿರ್ಧರಿಸಿ ಕರ್ನಾಟಕಕ್ಕೆ 'ಸ್ಕೀಮ್ ಎ' ಅಡಿಯಲ್ಲಿ 734 ಟಿಎಂಸಿ ನೀರನ್ನು ನಿಗದಿಪಡಿಸಿದೆ. ಹಾಗೂ 2060 ಟಿಎಂಸಿ ನೀರಿಗಿಂತ ಹೆಚ್ಚು ನೀರು ಲಭ್ಯವಿದ್ದಲ್ಲಿ 'ಸ್ಕೀಮ್ ಬಿ'ಯಲ್ಲಿ ಪ್ರತಿಶತ 50ರಷ್ಟು ನೀರನ್ನು ಕರ್ನಾಟಕಕ್ಕೆ ನಿಗದಿಪಡಿಸಿದೆ. ಕರ್ನಾಟಕ ಸರ್ಕಾರವು 173 ಟಿಎಂಸಿ ನೀರನ್ನು ಕೃಷ್ಣಾ ಮೇಲ್ದಂಡೆ ಯೋಜನೆಗಾಗಿ 'ಸ್ಕೀಮ್ ಎ' ಅಡಿಯಲ್ಲಿ ಉಪಯೋಗಿಸಿಕೊಳ್ಳಲು ಯೋಜಿಸಿದೆ. ಕೃಷ್ಣಾ ಜಲವಿವಾದ ನ್ಯಾಯ ಮಂಡಳಿಯ 'ಸ್ಕೀಮ್ ಬಿ'ಯು ಕ್ರಿ.ಶ. 2000 ನಂತರ 'ಸ್ಕೀಮ್ ಎ'ನಲ್ಲಿ ಉಪಯೋಗಿಸಿಕೊಂಡ ನೀರಿನ ಪ್ರಮಾಣವನ್ನು ಆಧರಿಸಿ ಮೂರು ರಾಜ್ಯಗಳ ಪರಿಷ್ಕರಣೆಗೆ ಒಳಪಡುತ್ತದೆ.

**ಯೋಜನೆಯ ಅನುಷ್ಠಾನ :** ಕೃಷ್ಣಾ ಮೇಲ್ದಂಡೆ ಯೋಜನೆಯಡಿಯಲ್ಲಿ ಕೃಷ್ಣಾ ನದಿಗೆ ಅಡ್ಡಲಾಗಿ ಎರಡು ಅಣೆಕಟ್ಟುಗಳ ನಿರ್ಮಾಣ ಹಾಗೂ ಕಾಲುವೆ ಮತ್ತು ಉಪಕಾಲುವೆಗಳ ಜಾಲವನ್ನು ನಿರ್ಮಿಸುವ ಕಾರ್ಯಗಳನ್ನು ಒಳಗೊಂಡಿದೆ.

1960ರಲ್ಲಿ ತಯಾರಿಸಿದ ಹಾಗೂ ಕೇಂದ್ರ ಜಲ ಆಯೋಗಕ್ಕೆ ಸಲ್ಲಿಸಿದ ವರದಿಯ ಪ್ರಕಾರ ಈ ಯೋಜನೆಯಡಿಯಲ್ಲಿ 208 ಟಿಎಂಸಿ ನೀರನ್ನು ಉಪಯೋಗಿಸಿಕೊಂಡು 5.5 ಲಕ್ಷ ಹೆಕ್ಟೇರು ಜಮೀನಿಗೆ ನೀರೊದಗಿಸಲು ಯೋಜಿಸಿತ್ತು. ಕೇಂದ್ರ ಜಲ ಆಯೋಗದ ಸಲಹೆ ಸೂಚನೆಯ ಪ್ರಕಾರ ಮತ್ತು ಕೃಷ್ಣಾ ಜಲ ವಿವಾದ ಆಯೋಗದ ತೀರ್ಪಿನಂತೆ ರಾಜ್ಯಕ್ಕೆ ಲಭ್ಯವಾಗಿಸಿದ ನೀರಿನ ಅನುಗುಣವಾಗಿ ಇದು ಕಾಲಕಾಲಕ್ಕೆ ಮಾರ್ಪಾಡಾಗಿರುತ್ತದೆ.

1978 ಎಪ್ರಿಲ್‌ನಲ್ಲಿ ಕೇಂದ್ರ ಸರ್ಕಾರದ ಯೋಜನಾ ಆಯೋಗವು ಪುರಸ್ಕರಿಸಿದ ಯುಕೆಪಿ ಅಂದಾಜು ವೆಚ್ಚವಾದ 283.65 ಕೋಟಿ ರೂ.ಗಳಿಗೆ (1976-77ರ ದರದಂತೆ) ಅಂಗೀಕಾರ ಕೊಟ್ಟಿದೆ. 119 ಟಿಎಂಸಿ ನೀರನ್ನು ಉಪಯೋಗಿಸಿಕೊಂಡು 4.25 ಲಕ್ಷ ಹೆ. ಜಮೀನಿಗೆ ನೀರಾವರಿ ಸೌಲಭ್ಯವನ್ನು ಒದಗಿಸಬಹುದು. ಇದು 1987ರಲ್ಲಿ ಪುನಃ ಪುರಸ್ಕರಿಸಲ್ಪಟ್ಟು ಯೋಜನಾ ಆಯೋಗವು 1214.97 ಕೋಟಿ ರೂ.ಗಳಿಗೆ (1986-87ರ ದರದಂತೆ) ಯುಕೆಪಿ ಮೊದಲ ಘಟ್ಟದಲ್ಲಿ ಸೇರಿದೆ. ಇದರಲ್ಲಿ ನಾರಾಯಣಪೂರ ಅಣೆಕಟ್ಟು ಮತ್ತು ಸಂಬಂಧಿಸಿದ ಕೆಲಸಗಳಿಗೆ 88.77 ಕೋಟಿ ರೂ. ಆಲಮಟ್ಟಿ ಆಣೆಕಟ್ಟೆಯ ನಿರ್ಮಾಣಕಾರ್ಯ ಸಮುದ್ರಮಟ್ಟದಿಂದ 509.016 ಮೀ.ವರೆಗೆ ಎತ್ತರಿಸುವಿಕೆ, ಎರಡನೆ ಹಂತಕ್ಕೆ ಸಂಬಂಧಿಸಿದ ನಿರ್ಮಾಣ ಕಾರ್ಯಗಳಿಗೆ ಪೂರ್ವಭಾವಿ ಕೆಲಸಗಳಿಗೆ 302.55 ಕೋಟಿ ರೂ. ನಾರಾಯಣಪೂರ ಎಡದಂಡೆ ನಿರ್ಮಾಣ ಮತ್ತು ಅದರ ನಾಲ್ಕು ಶಾಖಾ ಕಾಲುವೆಗಳ ನಿರ್ಮಾಣ ಮಾಡಿ 4.09 ಲಕ್ಷ ಹೆಕ್ಟೇರು ಜಮೀನಿಗೆ ನೀರಾವರಿ ಸೌಲಭ್ಯವನ್ನೊದಗಿಸಲು

740.81 ಕೋಟಿ ರೂ. ಆಲಮಟ್ಟಿ ಎಡದಂಡೆ ಕಾಲುವೆ (ಏತ) ನಿರ್ಮಾಣ ಮಾಡಿ 16 ಸಾವಿರ ಹೆ. ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನೊದಗಿಸಲು 39.43 ಕೋಟಿ ರೂ. ಮುಂಗರೆ (fore shore) ಏತ ನೀರಾವರಿಗಾಗಿ ಮುಖ್ಯ ಸ್ಥಾವರಗಳ ನಿರ್ಮಾಣ ಕಾರ್ಯಕ್ಕೆ 43.35 ಕೋಟಿ ರೂ.ಗಳ ಕೆಲಸ ಸೇರಿದೆ.

ಯುಕೆಪಿಯ ನಿರ್ಮಾಣ ಕಾರ್ಯವನ್ನು ವಿಶ್ವಬ್ಯಾಂಕಿನ ನೆರವಿನೊಂದಿಗೆ ಮೇ 1970ರಿಂದ ಮಾರ್ಚ್ 1983, ಮುಂದುವರಿದು ಮಾರ್ಚ್ 1986ರಲ್ಲಿ ಮುಗಿದಿದೆ. ಇತ್ತೀಚಿನ ಅಂದಾಜು ವೆಚ್ಚ 700 ಕೋಟಿ ರೂ.ಗಳಾಗಿದ್ದು, 700 ಕೋಟಿ ರೂ.ಗಳನ್ನು ಖರ್ಚು ಮಾಡಿ 31 ಟಿ.ಎಂ.ಸಿ. ನೀರನ್ನು ಉಪಯೋಗಿಸಲಾಗಿದೆ.

ನಾರಾಯಣಪೂರ ಜಲಾಶಯದ ಕಾಲುವೆಗಳಿಂದ ನೀರನ್ನು 85-86ರಲ್ಲಿ 10.55 ಟಿ.ಎಂ.ಸಿ. ಮುಂಗಾರು ಹಾಗೂ 11.41 ಟಿ.ಎಂ.ಸಿ. ಹಿಂಗಾರಿನಲ್ಲಿ ಉಪಯೋಗಿಸಿಕೊಂಡು ಪ್ರತಿವರ್ಷ ಹೆಚ್ಚುತ್ತಾ ಹೋದಂತೆ 96-97ರಲ್ಲಿ 6.44 ಟಿ.ಎಂ.ಸಿ. ಮುಂಗಾರು ಹಾಗೂ 33.01 ಟಿ.ಎಂ.ಸಿ. ಹಿಂಗಾರಿನಲ್ಲಿ ನೀರನ್ನು ಉಪಯೋಗಿಸಲಾಗಿದೆ.

ಕೃಷ್ಣಾ ಮೇಲ್ದಂಡೆ ಯೋಜನೆಗೆ ಪ್ರಾರಂಭದಿಂದ ಜನೆವರಿ 98ರ ಅಂತ್ಯದವರೆಗೆ 2993 ಕೋಟಿ ರೂ.ಗಳನ್ನು ಖರ್ಚು ಮಾಡಲಾಗಿದೆ. ಈ ಯೋಜನೆಯನ್ನು ಪೂರ್ಣಗೊಳಿಸಲು 5224.02 ಕೋಟಿ ರೂ. ಅವಶ್ಯಕತೆಯ ಅಂದಾಜಿದೆ.

ಕೃಷ್ಣಾ ಭಾಗ್ಯ ಜಲ ನಿಗಮ : ಸರ್ಕಾರವು ತನ್ನ ಕಂಪನಿಗಳ ಕಾಯ್ದೆ 1956 ಅಡಿಯಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆಯನ್ನು 2000 ರೊಳಗೆ ಮುಗಿಸಲು ಮತ್ತು ಹೆಚ್ಚಿನ ಹಣ ಕ್ರೋಢೀಕರಿಸಲು ಕೃಷ್ಣಾ ಭಾಗ್ಯ ಜಲ ನಿಗಮ ಲಿಮಿಟೆಡ್‌ನ್ನು 1994ರ ಆಗಸ್ಟ್‌ನಲ್ಲಿ ಅಸ್ತಿತ್ವಕ್ಕೆ ತಂದಿತು.

ಈ ನಿಗಮದ ಅಡಿಯಲ್ಲಿ ಯುಕೆಪಿ ಸಮಸ್ತ ಯೋಜನೆ, ಪರಿವೀಕ್ಷಣೆ, ಅಂದಾಜು ಕಾರ್ಯಾಚರಣೆ ಮತ್ತು ನಿರ್ವಹಣೆಯಾಗಿದೆ. ಕಾಮಗಾರಿಗಳಿಗೆ ಬೇಕಾಗುವ ಹಣವನ್ನು ನಿಗಮದ ಬಾಂಡ್ ಇಲ್ಲವೆ ಡಿಬೆಂಚರ್‌ಗಳ ಮೂಲಕ ಕ್ರೋಢೀಕರಿಸಲು ಯೋಜಿಸಿತ್ತು. ಹಾಗೂ ಇದೇ ರೀತಿ ಮಾಡಲು ನಿಗಮಕ್ಕೆ ಸರಕಾರ ಅನುಮತಿಯನ್ನು ನೀಡಿತ್ತು.



## ಬಚಾವತ್ ತೀರ್ಪು ಎಂದರೇನು ?

**ಬಚಾವತ್ !**

**ಹಾಗಂದರೇನು? ಎಂಬುದು ಇವತ್ತಿಗೂ ಗೊತ್ತಿರದ ಯುಕೆಪಿಯ ರೈತರಿಗೆ, ಯೋಜನೆಯ ನೀರು ಮಾತ್ರ ಉಪಯೋಗಿಸಲಾಗುತ್ತಿಲ್ಲ ವೆಂಬುದು ಕಳವಳಕಾರಿಯಾಗಿದೆ.**

**ಕರ್ನಾಟಕದ ಕೃಷ್ಣಾ ನದಿಯು ಮಹಾರಾಷ್ಟ್ರ, ಆಂಧ್ರ ಹಾಗೂ ಕರ್ನಾಟಕದಲ್ಲಿ ಹರಿದು ಹೋಗುವುದರಿಂದ ನೀರಿನ ಬಳಕೆಯಲ್ಲಿ ವಿವಾದವೊಂದು ಮೂರು ರಾಜ್ಯಗಳ ನಡುವೆ ನಡೆದಿತ್ತು.**

**ಈ ವಿವಾದಕ್ಕೆ ತೆರೆ ಎಳೆಯಲೆಂದೇ ಕೇಂದ್ರ ಸರ್ಕಾರ 1969ರಲ್ಲಿ ನ್ಯಾಯ ಮಂಡಳಿಯೊಂದನ್ನು ರಚಿಸಿತ್ತು. ಅದರ ನೇತೃತ್ವ ವಹಿಸಿದವರ ಹೆಸರೇ –**

**ಜಸ್ಟೀಸ್ ಬಚಾವತ್**

**1969ರಿಂದ 1973ರವರೆಗೆ ಆಯೋಗವು ವಿಚಾರಣೆಯೊಂದನ್ನು ನೀಡಿ ನ್ಯಾಯಮಂಡಳಿ 1973ರಲ್ಲಿ ಮಧ್ಯಂತರ ವರದಿ ಸಲ್ಲಿಸಿತ್ತು. 1975ರಲ್ಲಿ ಅಂತಿಮ ತೀರ್ಪು ನೀಡಿ 2000ರೊಳಗೆ ಮೂರು ರಾಜ್ಯಗಳು ತಮಗೆ ನೀಡಿದ ನೀರಿನ ಪ್ರಮಾಣವನ್ನು ಬಳಸಿಕೊಳ್ಳಲು ಹೇಳಿತ್ತು. ಕೃಷ್ಣಾ ಮತ್ತು ಕೃಷ್ಣಾ ಕಣಿವೆಯ 734 ಟಿ.ಎಂ.ಸಿ ನೀರನ್ನು ಬಳಸಿಕೊಳ್ಳಲು ಕರ್ನಾಟಕಕ್ಕೆ ಸೂಚಿಸಿತ್ತು. ಅದರಲ್ಲಿ ಯುಕೆಪಿಯೊಂದರಲ್ಲೇ 173 ಟಿ.ಎಂ.ಸಿ. ನೀರನ್ನು ಉಪಯೋಗಿಸಿಕೊಳ್ಳುವಂತೆ ಬಚಾವತ್ ಆಯೋಗದ ತೀರ್ಪು ಹೇಳಿದೆ.**

**ಮೂರು ರಾಜ್ಯಗಳು ಇದಕ್ಕೆ ಮಾನ್ಯ ಮಾಡಿದ್ದವು.**

**ಆದರೆ, ಆಂಧ್ರ ತನ್ನ ಪಾಲಿನ 840 ಟಿ.ಎಂ.ಸಿ. ನೀರನ್ನು ಬಳಸಿಕೊಂಡು ಕರ್ನಾಟಕದ ನೀರಿಗೆ ಕೈ ಹಾಕುತ್ತಿದೆ. ನಿಗದಿತ ವೇಳೆಗಿಂತ ಮುಂಚೆಯೇ ಯೋಜನೆಗಳ ಕಾಮಗಾರಿ ಮುಗಿಸಿದ ಆಂಧ್ರ ಸರ್ಕಾರ ಈಗ ಅಕ್ರಮವಾಗಿ ನಿರ್ಮಿಸಿದ ಯೋಜನೆಗಳಿಗೆ ಅನುಕೂಲತೆಗಾಗಿ ಹೆಚ್ಚಿನ ನೀರು ಕೇಳುತ್ತಿದೆ. ಆಣೆಕಟ್ಟೆಯ ಎತ್ತರವನ್ನು ಹೆಚ್ಚಿಸದಿರುವಂತೆ ಆಂಧ್ರ ಕೇಂದ್ರಕ್ಕೆ ಕೋರಿದೆ.**

**ಕರ್ನಾಟಕ ಇದೆಲ್ಲ ಕಂಡು ಕಣ್ಣು ಮುಚ್ಚಿ ಕುಳಿತಿದೆ. ಕೃಷ್ಣಾ ನದಿ ನೀರಿಗಾಗಿ ಮುಖ್ಯಮಂತ್ರಿ ಕೃಷ್ಣ ಕಣ್ಣು ತೆರೆಯುವುದು ಯಾವಾಗ? ಆಂಧ್ರದ ಹೈಟೆಕ್ ಮುಖ್ಯಮಂತ್ರಿ ನಾಯ್ಡು ಅವರಂತೆ ಕಂಪ್ಯೂಟರ್ ಸಿ.ಎಂ. ಎಂದೇ ಖ್ಯಾತರಾಗುತ್ತಿರುವ ಕೃಷ್ಣ ಅವರು ಕಂಪ್ಯೂಟರ್‌ನ ಕೀಬೋರ್ಡಿನ ಮೇಲೆ ಕೈಯಾಡಿಸಿದಂತೆ ಕೇಂದ್ರ ಸರ್ಕಾರದ ಮೇಲೆ ಕೈಯಾಡಿಸುವುದು ಯಾವಾಗ?**

ಹಲವು ಬಾರಿ ನಿಗಮವು ಸಭೆ ಸೇರಿ ಯುಕೆಪಿಯ ಎಲ್ಲಾ ಕಾಮಗಾರಿಗಳನ್ನು 2000ರೊಳಗೆ ಮುಗಿಸಬೇಕೆಂದು ಕಾರ್ಯಕ್ರಮ ಯೋಜಿಸಿ ಏತ ನೀರಾವರಿಗಳ ಕಾಲುವೆ ಮತ್ತು ಇತರ ಸಂಬಂಧಿತ ಕಾಮಗಾರಿಗಳನ್ನು ಹೊರತುಪಡಿಸಿ ಕಾರ್ಯಕ್ರಮ ತಯಾರಿಸಿತ್ತು.

ನಿಗಮವು ಈಗಾಗಲೇ 1089 ಕೋಟಿ ರೂ.ಗಳನ್ನು ಕ್ರೋಢೀಕರಿಸಿದ್ದು ಯುಕೆಪಿಯ ಕಾಮಗಾರಿಗಳನ್ನು 2000ರೊಳಗೆ ಪೂರ್ಣಗೊಳಿಸುವ ಉದ್ದೇಶದಿಂದ 1995ರಲ್ಲಿ ಸರ್ಕಾರವು ನಾರಾಯಣಪೂರ ಬಲದಂಡೆ ಕಾಲುವೆ 40 ಕಿ.ಮೀ., ಜೇವರ್ಗಿ ಶಾಖಾ ಕಾಲುವೆ 18ರಿಂದ 50 ಕಿ.ಮೀ, ಹಾಗೂ ಇಂಡಿ ಶಾಖಾ ಕಾಲುವೆ 64 ರಿಂದ 120 ಕಿ.ಮೀ. ಕಾಮಗಾರಿಗಳನ್ನು ನೇರ ಗುತ್ತಿಗೆ ಆಧಾರದ ಮೇಲೆ ನೀಡಲಾಗಿತ್ತು.

ಕೃಷ್ಣಾ ಮೇಲ್ದಂಡೆ ಯೋಜನೆ ಮತ್ತು ಕೃಷ್ಣಾ ಜಲಾನಯನ ಪ್ರದೇಶದ ನೀರಾವರಿ ಯೋಜನೆಗಳನ್ನು ಪೂರ್ಣಗೊಳಿಸಲು ಇನ್ನೂ ಆರು ತಿಂಗಳು ಮಾತ್ರ ಕಾಲ ಮಿತಿ ಇದೆ.

2000 ಇಸವಿಯ ಮೇ 11ರೊಳಗೆ ಕೃಷ್ಣಾ ನದಿಯ 729 ಟಿ.ಎಂ.ಸಿ. ನೀರನ್ನು ಬಳಸಿಕೊಳ್ಳಲು ಬಚಾವತ್ ಆಯೋಗ ಅಂತಿಮ ಗಡುವು ನೀಡಿದೆ. ಈ ಅವಧಿಯು ಕಣ್ಣು ಮಿಟುಕಿಸುವುದರೊಳಗಾಗಿ ಬರಲಿದೆ.

ಈ ಗಡುವಿನ ಅವಧಿಯಲ್ಲಿರುವ ಅಮೂಲ್ಯವಾದ ಆರು ತಿಂಗಳಿನಲ್ಲಿ ಎಲ್ಲಾ ಯೋಜನೆಗಳು ಸಂಪೂರ್ಣವಾಗಲು ಸಾಧ್ಯವೇ ಎಂಬುದು ಯಕ್ಷ ಪ್ರಶ್ನೆಯಾಗಿದೆ. ಈ ಪ್ರಶ್ನೆಯ ಉತ್ತರ ನಿರೀಕ್ಷಿಸುತ್ತಾ ಹೋದರೆ, ಹಿಂದಿನ ಮತ್ತು ಇಂದಿನ ಸರಕಾರ ಮಾಡಿರುವ ಯೋಜನೆ ಏನು? ಹಣಕಾಸು ಹಾಗೂ ಸಿಬ್ಬಂದಿಯೊಂದಿಗೆ ಯುದ್ಧೋಪಾದಿಯಲ್ಲಿ ಕಾಮಗಾರಿ ನಡೆಸಿದರೂ ಆರು ತಿಂಗಳಿನಲ್ಲಿ ಯಾವ ಮಾಂತ್ರಿಕನಿಂದಲೂ ಈ ಯೋಜನೆಗಳನ್ನು ಪೂರ್ಣಗೊಳಿಸಲು ಸಾಧ್ಯವಿಲ್ಲ ಎಂದು ಕೆಲ ಇಂಜಿನಿಯರ್‌ಗಳೇ ಪಿಸು ನುಡಿಯುತ್ತಾರೆ.

ಹೊಸ ಸರ್ಕಾರ ಅಧಿಕಾರಕ್ಕೆ

ಬಂದು, ಎರಡು ತಿಂಗಳಾಯಿತು. ಸರ್ಕಾರ ಇವತ್ತಿಗೂ ಯುಕೆಪಿ ಯೋಜನೆಗಳ ಬಗ್ಗೆ ಯಾವುದೇ ನಿರ್ದಿಷ್ಟ ಧೋರಣೆ ಪ್ರಕಟಿಸಿಲ್ಲವಾದ್ದರಿಂದ ಕೃಷ್ಣಾ ಕಣಿವೆಯ ರೈತರು ಕಂಗಾಲಾಗಿದ್ದಾರೆ.

ಯುಕೆಪಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸುವುದಾಗಿ ಜನತೆಯನ್ನು ನಂಬಿಸಿ ಬುರುಡೆ ಬಿಟ್ಟ ಹಿಂದಿನ ಸರ್ಕಾರ 'ಭಾಗ್ಯ ಜಲ ನಿಗಮ' ವನ್ನು ಅಸ್ತಿತ್ವಕ್ಕೆ ತಂದಿತು. ಈ ಮೂಲಕ ಹಲವು ಸಾವಿರ ರೂ.ಗಳನ್ನು ಬಾಂಡ್ ಮಾರಾಟ ಮಾಡಿ ಹಣ ಸಂಗ್ರಹಿಸಿತು.

ಈ ಹಣ ಎಲ್ಲಿ ಹೋಯಿತು?

ತುಂಡು ಗುತ್ತಿಗೆ, ನೇರಗುತ್ತಿಗೆ ಹಗರಣದಲ್ಲಿ ಸಾವಿರಾರು ಕೋಟಿ ರೂ. ಅವ್ಯವಹಾರಗಳು ನಡೆದವು. ಯೋಜನೆ ಕಾಮಗಾರಿಗಳು ಮಾತ್ರ ಪೂರ್ತಿಯಾಗದೇ ಅರ್ಧಕ್ಕೆ ನಿಂತಿವೆ. ಕೃಷ್ಣಾ ಭಾಗ್ಯ ಜಲ ನಿಗಮದ ಬಾಂಡ್ ಮಾರಾಟದ ಮೂಲಕ ಸಂಗ್ರಹಿಸಿದ ಹಣದ ಬಡ್ಡಿ ಮಾತ್ರ ಬೆಳೆಯುತ್ತಿದೆ.

ರೈತರಿಗೆ ನೀರು ಕೊಡದ ಸರ್ಕಾರ ಬಡ್ಡಿ ಹೇರುತ್ತಿದೆ.

ಅನೇಕ ಅನ್ಯಾಯಗಳ ಜೊತೆಗೆ ರೈತರ ಮೇಲೆ ಇದೊಂದು ಎಕ್ಸ್‌ಟ್ರಾ ಅನ್ಯಾಯ.



ಕಾಲುವೆಯಲ್ಲಿ ಹರಿಯುವುದು ನೀರೋ ? ಕಣ್ಣೀರೋ !

ಬಾಂಡ್ ಹೆಸರಿನ ಮೇಲೆ ಹಣ ತಿಂದವರು ಅಧಿಕಾರಸ್ಥ ರಾಜಕಾರಣಿಗಳು. ಕಂಟ್ರಾಕ್ಟರ್‌ಗಳು ಹಾಗೂ ಅಧಿಕಾರಿಗಳೆಲ್ಲ ಈಗ ಬಾಂಡ್ ಮೂಲಕ ಹೊಸ ಹಣ ಸಂಗ್ರಹಿಸುವ ನಿರೀಕ್ಷೆಯಲ್ಲಿದ್ದಾರೆ.

ಎಲ್ಲರ ಕಣ್ಣು ಹೊಸ ನಿಧಿ ಸಂಗ್ರಹದ ಮೇಲೆ.



ಇಂದಲ್ಲ ನಾಳೆ ನೀರು ಬರುವುದೆಂದು ಕಾಯುತ್ತ ಕುಳಿತಿರುವ ರೈತರಿಗೆ ಮಾತ್ರ ಕಣ್ಣೀರೇ ಗತಿ.

ನೀರಾವರಿ ಯೋಜನೆಗಳ ಬಗ್ಗೆ ಪ್ರತಿ ಪಕ್ಷದಲ್ಲಿದ್ದುಕೊಂಡು ವಿಧಾನ ಮಂಡಲದ ಒಳಗೆ ಮತ್ತು ಹೊರಗೆ ನಿರಂತರ ಹೋರಾಟ ನಡೆಸಿರುವ ಎಚ್.ಕೆ. ಪಾಟೀಲರು 'ಕೃಷ್ಣೆಯ ಕಣ್ಣೀರು' ಎಂಬ ಪುಸ್ತಕವನ್ನು ಹೊರ ತಂದಿದ್ದರು.

ಈಗ ಎಚ್.ಕೆ. ಪಾಟೀಲರು ನೀರಾವರಿ ಮಂತ್ರಿಯಾಗಿದ್ದಾರೆ.

ಕಣ್ಣೀರು ಒರೆಸಲು ಸಾಧ್ಯವಾಗುತ್ತಿಲ್ಲ.

ಮುಖ್ಯಮಂತ್ರಿ ಕೃಷ್ಣ ಅವರಿಗೂ ಸಾಧ್ಯವಾಗುತ್ತಿಲ್ಲ. ಇದೇ ರೀತಿಯಲ್ಲಿ ಯೋಜನೆಗಳು ಮಂದಗತಿಯಾದರೆ ಸಾಕ್ಷಾತ್ ದ್ವಾಪರಯುಗದ ಕೃಷ್ಣ ಬಂದರೂ ಸಾಧ್ಯವಾಗುವುದಿಲ್ಲ ಎಂಬುದು ಕೃಷ್ಣಾ ಕಣಿವೆಯ ರೈತರ ಮಾತಾಗಿದೆ.

ಹೈದರಾಬಾದ್ ಕರ್ನಾಟಕ ಪ್ರದೇಶವನ್ನು ರಾಜ್ಯ ಸರ್ಕಾರ ಎಷ್ಟು ಉದಾಸೀನತೆಯಿಂದ ಕಾಣುತ್ತಿದೆ ಎಂಬುದಕ್ಕೆ ಕೃಷ್ಣಾ ಮೇಲ್ದಂಡೆ ಯೋಜನೆಯೇ ಜೀವಂತ ಸಾಕ್ಷಿ.

ಕೃಷ್ಣಾ ವಿವಾದ ಕುರಿತ ಸಂದರ್ಶನ ಹಾಗೂ ಲೇಖನಗಳು : **ಮಹಿಪಾಲರೆಡ್ಡಿ ಸೇಡಂ (ಗುಲಬರ್ಗಾ)**

---

# ಬೆಂಗಳೂರಲ್ಲಿ ಒಳ್ಳೇ ಹುಡ್ಗೀರು ಸಿಗ್ತಾರ ?

ರಾತ್ರಿ ಪ್ರಯಾಣದ ಬಸ್ಸಿನಲ್ಲಿ ಅರುವತ್ತು ವರ್ಷ ದಾಟಿದ ವ್ಯಕ್ತಿಯೊಬ್ಬ ಪಕ್ಕದಲ್ಲಿ ಕುಳಿತಿದ್ದ ಯುವಕನಿಗೆ ಕೇಳಿದರು : 'ಬೆಂಗಳೂರಿನಲ್ಲಿ ಒಳ್ಳೆಯ ಹುಡುಗಿಯರು ಸಿಗುತ್ತಾರೆಯೇ?' ಪ್ರಶ್ನೆ ಕೇಳಿದ ಯುವಕ ತಬ್ಬಿಬ್ಬು. ಏನು ಹೇಳಲೂ ತೋಚದೆ ಸುಮ್ಮನೆ ಕುಳಿತ. ವೃದ್ಧರೇ ಮುಂದುವರಿಸಿದರು.

'ಹುಡುಗಿಯರು ನೌಕರಿ ಮಾಡೋರು ಆಗಿರಬೇಕು ನೋಡಪಾ...' ಹುಡುಗನಿಗೆ ವೃದ್ಧರ ಒಳ ಉದ್ದೇಶ ಅರ್ಥವಾಗದೆ ಇನ್ನೂ ಗಲಿಬಿಲಿಗೊಂಡ.

ಕೊನೆಗೂ ವೃದ್ಧರೇ ಒಗಟು ಒಡೆದರು : 'ನಮ್ಮ ಮನೇಲಿ ಎರಡು ವರ ಅದಾವು, ಕನ್ಯಾ ಬೇಕಿತ್ತು, ನೀನು ಬೆಂಗಳೂರಿನಲ್ಲೇ ಇರೋದ್ರಿಂದ ಕೇಳಿದೆ, ಅಷ್ಟೇ''

ವೃದ್ಧರು ಬೇರಾರೂ ಅಲ್ಲ. ಇತ್ತೀಚೆಗೆ ಕಾರ್ಯನಿರ್ವಾಹಕ ಇಂಜಿನಿಯರ್ ಹುದ್ದೆಯಿಂದ ನಿವೃತ್ತರಾಗಿ, ಹಾವೇರಿ ವಿಧಾನಸಭಾ ಕ್ಷೇತ್ರದ ಕಾಂಗ್ರೆಸ್ ಟಿಕೆಟಿಗೆ ತೀವ್ರವಾಗಿ ಪ್ರಯತ್ನಿಸಿದ ಕರಜಗಿ ಗ್ರಾಮದ ಹಣವಂತ ರಾಜಕಾರಣಿ. ■




# 'ವಿಶ್ವ ಸುಂದರಿ'ಯ ಸುತ್ತಮುತ್ತ

**ಮುಂಬಯಿನ ಯುಕ್ತಾ ಮುಖೀ ಈ ಬಾರಿಯ ವಿಶ್ವಸುಂದರಿ. ಇಂಥ ಪಟ್ಟ ಗಳಿಸಿದ ಭಾರತೀಯರಲ್ಲಿ ಆಕೆ ನಾಲ್ಕನೆಯವಳು. ವಯಸ್ಸು ಕೇವಲ 21. ಇದ್ದಕ್ಕಿದ್ದ ಹಾಗೆ ಸುಂದರಿಯರ ಸಾಲು ಸಾಲೇ ತಯಾರಾಗಿ ನಿಂತಿದ್ದು ಹೇಗೆ?**

**ಕಳೆದ ಐದು ವರ್ಷಗಳಲ್ಲಿ ನಾಲ್ಕು ಜನ ವಿಶ್ವಮಟ್ಟದ ಸೌಂದರ್ಯ ಸ್ಪರ್ಧೆಗಳಲ್ಲಿ ಗೆಲುವು ಸಾಧಿಸಿದ್ದು ಕೇವಲ ಆಕಸ್ಮಿಕವೇ? ಬೇರೆ ಇನ್ನೇನಾದರೂ ಕಾರಣಗಳಿವೆಯೆ?**

ಲಂಡನ್‌ನ ಒಲಂಪಿಯಾ ಥಿಯೇಟರ್. ಒಳಗೆ ವಿಶ್ವ ಸುಂದರಿ ಆಯ್ಕೆ ಪ್ರಕ್ರಿಯೆ. ಹೊರಗೆ ಮಹಿಳೆಯರ ದಂಡಿನ ಪ್ರತಿಭಟನೆ. ''ಇದು ಸೌಂದರ್ಯ ಸ್ಪರ್ಧೆಯಲ್ಲ. ದನಗಳ ಸಂತೆ'' ಎಂಬ ಮುಗಿಲು ಮುಟ್ಟುವ ಮೊಳಗು.

ಸ್ಪರ್ಧೆಯ ತೀರ್ಪುಗಾರರು ಕೇಳುತ್ತಿದ್ದರು.

''ಮದುವೆಯಾದ ಗಂಡಸೊಡನೆ ಹೋಗಲು ಸಿದ್ಧವೆ?''

''ಇಲ್ಲ. ಇನ್ನೊಬ್ಬ ಹೆಣ್ಣಿಗೆ ಎಂದೂ ನೋವುಂಟು ಮಾಡಲಾರೆ''

''ತಾಯಿಯಾಗಲು ಇಷ್ಟವಿದೆಯೇ?''

''ಖಂಡಿತ. ಆದರೆ ಎಷ್ಟೋ ಮಕ್ಕಳು ಮನೆಯಿಲ್ಲದೆ ಅನಾಥರಾಗಿರುವ ಇಂದಿನ ಸ್ಥಿತಿಯಲ್ಲಿ ಒಂದು ಮಗು ದತ್ತು ತೆಗೆದುಕೊಳ್ಳುವುದೇ ನನಗೆ ಇಷ್ಟ.''

''ಪಾಕೀಸ್ತಾನ-ಭಾರತಗಳ ವೈಮನಸ್ಯ ಪರಿಹಾರಕ್ಕೆ ಯುದ್ಧವೇ ಸೂಕ್ತ ಉತ್ತರವೇ?''

''ಯುದ್ಧಗಳು ಎಂದೂ ಪರಿಹಾರವಲ್ಲ. ಅಂತಿಮ ವಿಜಯ ಪಡೆಯುವ ವೇಳೆಗೆ ಜನರೇ ಬದುಕುಳಿದಿರುವುದಿಲ್ಲ.''

ಪಟಪಟನೆ ಉತ್ತರ ಹೇಳಿದ ಭಾರತ ಸುಂದರಿ ಯುಕ್ತಾ ಮುಖೀ, ಈ ಬಾರಿ ಗೆಲ್ಲುವುದು ಖಂಡಿತ ಎಂದು ಭಾವಿಸಿದ್ದ ವೆನಿಜೂಲಾದ ಸುಂದರಿಯನ್ನು ಮಗ್ಗುಲಿಗೆ ಸರಿಸಿ ವಿಶ್ವಸುಂದರಿ ಎನಿಸಿಕೊಂಡಳು.

ಆಕೆಯ ಬುದ್ಧಿವಂತಿಕೆ ಮತ್ತು ಹೃದಯವಂತಿಕೆಗಳೇ ಗೆಲುವಿಗೆ ಕಾರಣ

ಎಂದು ಬಣ್ಣಿಸಲಾಗುತ್ತಿದೆ. ಚಿಕ್ಕ ಹುಡುಗಿ ಆಗಿದ್ದಾಗಿಂದ ಹೊತ್ತಿದ್ದ ವಿಶ್ವ ಸುಂದರಿ ಆಗಬೇಕೆಂಬ ಕನಸು ನನಸಾಗಿದೆ.

ಮುಂಬಯಿನ ಈ ಹುಡುಗಿಗೆ ಸಿನಿಮಾಕ್ಕಿಂತ ರಂಗಭೂಮಿ ಇಷ್ಟ. ಈಗಂತೂ ಪ್ರಿಯಕರ ಯಾರೂ ಇಲ್ಲ. ಇನ್ನು ಐದು ವರ್ಷ ಮದುವೆ ಆಗುವ ಯೋಚನೆಯೂ ಇಲ್ಲ. ಇದಿಷ್ಟೂ ಆಕೆ ವ್ಯಕ್ತಪಡಿಸಿದ ವಿಚಾರಗಳು.

ಮೊದಲ ಸಲ 1966ರಲ್ಲಿ ರೀಟಾ ಫರಿಯಾ ವಿಶ್ವ ಸುಂದರಿ ಆದಳು. 1994ರಲ್ಲಿ ಐಶ್ವರ್ಯ ರೈ, 1997ರಲ್ಲಿ ಡಯಾನಾ ಹೇಡೆನ್, ಈಗ ಯುಕ್ತಾ ಮುಖೀ ವಿಶ್ವ ಸುಂದರಿ ಪಟ್ಟ ಗಳಿಸಿಕೊಂಡಿದ್ದಾರೆ. 1994ರಲ್ಲಿಯೇ ಸುಷ್ಮಿತಾ ಸೇನ್ ಮಿಸ್ ಯೂನಿವರ್ಸ್ ಎನಿಸಿಕೊಂಡಿದ್ದಳು.

ಯುಕ್ತಾ ಗೆಲುವು ಸಾಧಿಸಿದ ಬಗ್ಗೆ ಭಾರತೀಯರಿಗೆ ಹೆಮ್ಮೆ ಇದೆ. ಸಾಫ್ಟ್‌ವೇರ್ ಉದ್ಯಮ ಬಿಟ್ಟರೆ ವಿಶ್ವಮಟ್ಟದ ಖ್ಯಾತಿ ಭಾರತಕ್ಕೆ ಇರುವುದು ಇಂಥ ಸುಂದರಿಯರ ವಿಷಯದಲ್ಲಿ ಎನ್ನುತ್ತಾರೆ ಉದ್ಯಮದ ಜನ.

ಭಾರತೀಯ ಸೌಂದರ್ಯದ ಪರಿಕಲ್ಪನೆಯೇ ಬೇರೆ. ನಮ್ಮ ಜನ ಇಂಥ ಸುಂದರಿಯರ ಪಟ್ಟ ಗಳಿಸಿಕೊಳ್ಳಲು ಒಣಗಿದ ಕಟ್ಟಿಗೆಗಳಂತಾಗುತ್ತಿರುವ ಬಗ್ಗೆ ಖೇದವಿದೆ ಎನ್ನುತ್ತಾರೆ ಮಾಜಿ ಕ್ರಿಕೆಟ್ ತಾರೆ ಅರುಣ್ ಲಾಲ್. ನಮ್ಮವರು ಪಶ್ಚಿಮದ ಅರ್ಥವಿಲ್ಲದ ಅನುಕರಣೆ ಮಾಡುವ ಬಗ್ಗೆಯೂ ಅವರು ಖೇದ ವ್ಯಕ್ತಪಡಿಸುತ್ತಾರೆ.

ಇದೊಂದು ಹುನ್ನಾರ. ಬಹುರಾಷ್ಟ್ರೀಯ ಕಂಪೆನಿಗಳು ತಮ್ಮ ಸರಕು ಮಾರಲು, ಅಭಿವೃದ್ಧಿಶೀಲ ರಾಷ್ಟ್ರಗಳನ್ನು ಬಳಸುವ ವಂಚನೆ ಇದು. ಹಾಗಾಗಿಯೇ ಇಂಥ ಸ್ಪರ್ಧೆಗಳಲ್ಲಿ ವಿಜಯಗಳಿಸುವವರು ಅಭಿವೃದ್ಧಿಶೀಲ ಅಥವಾ ಬಡ ರಾಷ್ಟ್ರಗಳೆಂದು ಕರೆಸಿಕೊಳ್ಳುವ ದೇಶದ ಜನ ಎಂದು ಇನ್ನು ಹಲವರ ವಾದ. ಅದಿರಲಿ. ಹೀಗೆ ಸಾಲು ಸಾಲಾಗಿ ನಮ್ಮ ಹೆಣ್ಣುಗಳು ವಿಶ್ವಸುಂದರಿಯರಾಗಲು ಕಾರಣವೇನು?

ನೀವೇ ಗಮನಿಸಿ. 1966ರಲ್ಲಿ ಭಾರತದ ರೀಟಾ ಫರಿಯಾ ವಿಶ್ವ ಸುಂದರಿ ಎಂದು ಆಯ್ಕೆಯಾಗುವವರೆಗೆ, ನಮ್ಮ ಜನಕ್ಕೆ ಇಂಥದೊಂದು ಸ್ಪರ್ಧೆಯ ವಿಚಾರವೂ ತಿಳಿದಿರಲಿಲ್ಲ. ಹಾಗೆ ನೋಡಿದರೆ ರೀಟಾ ಸ್ಪರ್ಧೆಗೆ ಹೋಗಿದ್ದು ಹೆಚ್ಚಿನ ಮಹತ್ವಾಕಾಂಕ್ಷೆಯಿಂದ ಅಲ್ಲ. 'ಈವ್ಸ್ ವೀಕ್ಲಿ' ನಡೆಸುವ ಭಾರತ ಸುಂದರಿ ಸ್ಪರ್ಧೆಗೆ, ರೀಟಾಳ ಅಕ್ಕ ಫಿಲೋಮಿನಾ ಫರಿಯಾ ತಂಗಿಯ ಫೋಟೋ ಕಳಿಸಿದ್ದಳು.

ಹೇಗಿರುತ್ತದೋ ನೋಡುವ ಕುತೂಹಲದಿಂದ ಹೋಗಿದ್ದು. ಸ್ಪರ್ಧೆಗೆಂದು ಉಟ್ಟಿದ್ದು ತಾಯಿಯ ಸೀರೆ. ಅಕ್ಕನ ಸಡಿಲಾದ ಸ್ಯಾಂಡಲ್‌ಗಳು. ಅವೂ ಮೊದಲ ಸುತ್ತಿನಲ್ಲೇ ಕಿತ್ತು, ಬರಿಗಾಲಲ್ಲಿ ಆಕೆ ವೇದಿಕೆಗೆ ಬಂದು, ಆಶ್ಚರ್ಯಕರ ರೀತಿಯಲ್ಲಿ ಭಾರತ ಸುಂದರಿಯಾಗಿ ಆಯ್ಕೆಯಾದಳು. ಇದಕ್ಕೆ ಪ್ರತಿಯಾಗಿ ಸಿಕ್ಕಿದ ಬಹುಮಾನವೆಂದರೆ ಉಚಿತವಾಗಿ ಒಂದು ವರ್ಷ 'ಈವ್ಸ್ ವೀಕ್ಲಿ' ಆಕೆಗೆ ಪೂರೈಕೆ ಆಯಿತು. ಜೊತೆಗೇ ವಿಶ್ವ ಸುಂದರಿ ಸ್ಪರ್ಧೆಯಲ್ಲಿ ಪಾಲ್ಗೊಳ್ಳುವ ಅವಕಾಶ.

ರೀಟಾ ಸಹಜ ಸುಂದರಿ. ಸ್ಪರ್ಧೆಯ ಗೋಜುಗಳ ಅರಿವಿರಲಿಲ್ಲ. ಅವಳ ಬಳಿ ಇದ್ದುದೇ ನಾಲ್ಕೈದು ಒಳ್ಳೇ ಡ್ರೆಸ್‌ಗಳು. ಎರವಲು ಪಡೆದ ರೇಷ್ಮೆ ಸೀರೆ. ಈಜು ಉಡುಗೆ ಧರಿಸಬೇಕೆಂದು ತಿಳಿದಾದ ಮೇಲೆ, ಲಂಡನ್‌ನಲ್ಲಿಯೇ ಆಕೆ ಅದನ್ನು ಖರೀದಿಸಿದ್ದಳು. ಅಂದು ಇದೇ ಲಂಡನ್‌ನ ಆಲ್ಬರ್ಟ್ ವಿಕ್ಟರ್ ಹಾಲ್‌ನಲ್ಲಿ ವಿಶ್ವಸುಂದರಿ ಕಿರೀಟ ಆಕೆಯ ತಲೆ ಏರಿತ್ತು.

ಈಗಿನ ತಲೆಮಾರು ಸ್ಪರ್ಧೆಗೆ ತಯಾರಾಗುವ ರೀತಿಯೇ ಬೇರೆ. ಸ್ಪರ್ಧಿಯ ಎತ್ತರ ಬಿಟ್ಟು ಬೇರೆಲ್ಲ ಸ್ವರೂಪ ಬದಲಿಸುವ ವ್ಯವಸ್ಥೆ ಇದೆ. ಕಾಸ್ಮೆಟಿಕ್ ಸರ್ಜರಿ ಇಂಥವರಿಗೊಂದು ವರದಾನ.

ಮುಖೀ ವಿಚಾರದಲ್ಲಿಯೇ ನೋಡಿ. ಆಕೆಯ ಸೊಟ್ಟಗಿದ್ದ ಹಲ್ಲುಗಳನ್ನು ನೇರಗೊಳಿಸಲಾಯಿತು. ನಗುವಾಗ ವಸಡು ಕಾಣಿಸದಂತೆ ಅದನ್ನು ಹಿಂದೆ ಸರಿಸಲಾಯಿತು. ಹಲ್ಲುಗಳನ್ನು ಇನ್ನಷ್ಟು ಬಿಳುಪುಗೊಳಿಸಲಾಯಿತು.

ಇದು ತೀರಾ ಸಾಮಾನ್ಯ ಚಿಕಿತ್ಸೆ. ಉಬ್ಬಿದ ಗಲ್ಲದ ಮೂಳೆ ತಿದ್ದಿ, ತ್ರಿಕೋನಾಕೃತಿಯ ಮುಖ ಬಾದಾಮಿ ಆಕಾರಕ್ಕೆ ಬರುವಂತೆ ತಿದ್ದಲಾಗುತ್ತದೆ. ಮೂಗಿನ ಮಾಟ ನೇರ್ಪುಗೊಳಿಸಿ, ಮೂಗಿನ ಹೊಳ್ಳೆಗಳ ಅಂದ ಹೆಚ್ಚಿಸಲಾಗುತ್ತಿದೆ. ತುಟಿಗಳು ಸಪಾಟಾಗಿದ್ದರೆ, ಸಿಲಿಕಾನ್ ಇಂಪ್ಲಾಂಟ್ ಮೂಲಕ ಉಬ್ಬಿ ಆಹ್ವಾನಿಸುವಂಥ ತುಟಿಗಳನ್ನು ರೂಪಿಸಲಾಗುತ್ತದೆ.

ಅಷ್ಟೇ ಏಕೆ ದೇಹದ ಯಾವುದೇ ಭಾಗದಲ್ಲಿ ಉಬ್ಬು ಜಾಸ್ತಿ ಇದ್ದರೆ 'ಲಿಪೋಸಕ್ಷನ್' ಎಂಬ ವಿಧಾನದಿಂದ ಆ ಭಾಗ ಮಾಟಗೊಳಿಸಲಾಗುತ್ತದೆ.

ಮುಖೀ ಸ್ವಲ್ಪ ಎತ್ತರಕ್ಕೆ ಇದ್ದುದರಿಂದ ಬಾಗುತ್ತಾ ಇದ್ದಳು. ಅದನ್ನು ತಿದ್ದಿ ನೆಟ್ಟಗೆ ನಿಲ್ಲುವಂತೆ ಕಲಿಸಲಾಯಿತು. ಸುಷ್ಮಿತಾಸೇನ್‌ಳ ಸ್ತನದ ಗಾತ್ರ ಹೆಚ್ಚಿಸಲು ವಿಶೇಷ ವ್ಯಾಯಾಮಗಳನ್ನು ರೂಪಿಸಲಾಗಿತ್ತು. ಐಶ್ವರ್ಯ ರೈ ಈಜುಡುಗೆ ತೊಟ್ಟಾಗ ತೊಡೆಯ ಭಾಗ ಬಿಳಚಿಕೊಂಡ ಹಾಗೆ ಕಾಣುತ್ತಾ ಇದ್ದುದರಿಂದ, ಎಲೆಕ್ಟ್ರಿಕ್ ಕಿರಣಗಳ ಮೂಲಕ ಆ ಭಾಗದ ಚರ್ಮದ ಬಣ್ಣ ಮಂದಗೊಳಿಸಲಾಯಿತು. ಇನ್ನೂ ಒಂದು ಹೆಜ್ಜೆ ಮುಂದೆ ಹೋದರೆ, 1997ರ ವಿಶ್ವಸುಂದರಿ ಡಯಾನಾ ಹೇಡನ್‌ಳ ಕಂದು ಬಣ್ಣ ಗಮನಿಸಿ, ಅದನ್ನು ತಿಳಿಗೊಳಿಸಲು ನಾನಾ ರೀತಿಯ ಲೇಪನಗಳನ್ನು ಬಳಸಲಾಯಿತು.


ಯುಕ್ತಾ : ಸೌಂದರ್ಯ ಚಿಕಿತ್ಸೆಗೆ ಮುನ್ನ ಹಾಗೂ ಆನಂತರ

ಅವತ್ತಿನ ಸಹಜ ಸುಂದರಿ ರೀಟಾ ಫರಿಯಾಗೂ, ಬೊಂಬೆಗಳಂತೆ ತಯಾರಾಗಿ ನಿಂತ ಇವತ್ತಿನ ಸುಂದರಿಯರಿಗೂ ಇರುವ ವ್ಯತ್ಯಾಸ ಇದೇ. ಮುಂಬಯಿ, ದೆಹಲಿಯ ಸೌಂದರ್ಯ ತಜ್ಞರು ನೇರವಾಗಿ ಹೇಳುವುದಿದೆ "ಒಂದಿಷ್ಟು ರೂಪ ಇದ್ದರೆ ಸಾಕು. ಆಕೆಯನ್ನು ವಿಶ್ವದ ಅತ್ಯುತ್ತಮ ಸುಂದರಿಯಾಗಿ ರೂಪಿಸುವುದು ಕಷ್ಟವೇನಲ್ಲ...."

ಇಂಥ ಚಿಕಿತ್ಸೆಗಾಗಿ ಇಪ್ಪತ್ತೈದು ಸಾವಿರದಿಂದ ಒಂದು ಲಕ್ಷ ರೂಪಾಯಿವರೆಗೆ ಖರ್ಚಾಗುತ್ತದೆ. ಗೆಲುವು ಮತ್ತು ಅದರಿಂದ ಬರುವ ಲಾಭ ಗಮನಿಸಿದರೆ ಇದು ಅಂಥ ದೊಡ್ಡ ಮೊತ್ತವೇನಲ್ಲ. ಯಾವುದೇ ವ್ಯಕ್ತಿ ಭಾರತ ಸುಂದರಿ ಆಗಿ ಆಯ್ಕೆಯಾದರೆ ನಗದು ಬಹುಮಾನವೇ ಒಂದು ಲಕ್ಷ ರೂಪಾಯಿ ದೊರೆಯುತ್ತದೆ. ವಿಶ್ವ ಸುಂದರಿಗೆ ದೊರೆಯುವ ಬಹುಮಾನದ ಮೊತ್ತ 43 ಲಕ್ಷ ರೂಪಾಯಿ. ಅದಲ್ಲದೇ ವೃತ್ತಿಯ ದೃಷ್ಟಿಯಿಂದ ನಾನಾ ರೀತಿಯ ಅವಕಾಶಗಳು ಸೃಷ್ಟಿಯಾಗುತ್ತವೆ. ಇಂಥದಕ್ಕಾಗಿ ಒಂದಿಷ್ಟು ಹಣ ಹಾಗೂ ಸಮಯ ವಿನಿಯೋಗಿಸುವುದರಲ್ಲಿ ತಪ್ಪೇನು ? ಎನ್ನುತ್ತಾರೆ ಸ್ಪರ್ಧಿಗಳು.

ಯುಕ್ತಾ ಮುಖೀ ತನ್ನೆಲ್ಲ ಪ್ರಯತ್ನ ಮತ್ತು ಬುದ್ಧಿವಂತಿಕೆಗಳಿಂದ ವಿಶ್ವಸುಂದರಿ ಕಿರೀಟ ಗಳಿಸಿದ್ದಾಳೆ. ಇನ್ನು ವರ್ಷಕಾಲ ಅದು ಅವಳ ತಲೆಯನ್ನು ಅಲಂಕರಿಸಿರುತ್ತದೆ.

ಮುಂದೆ ಮತ್ತೊಬ್ಬ ಭಾರತದ ಸ್ಪರ್ಧಿ ಈ ಕಿರೀಟಕ್ಕೆ ತಲೆ ಒಡ್ಡುವ ತನಕ ಸೌಂದರ್ಯ ಜಿಜ್ಞಾಸೆ ನಡೆದೇ ಇರುತ್ತದೆ.

■ ರಜನಿ ರಾಮಕೃಷ್ಣ



# ಬದುಕಿನ ಹೆಜ್ಜೆಗಳು

ಇದೊಂದು ಹಳೇ ಕಥೆ. ರಾಜನೊಬ್ಬ ಜನಕ್ಕೆ ಒಂದೊಂದು ಲೋಟ ಹಾಲು ತಂದು ಸುರಿಯಲು ಹೇಳಿದ್ದ. 'ನಾನೊಬ್ಬ ಹಾಲಿನ ಬದಲು ನೀರು ಸುರಿದರೆ ತಿಳಿಯುವುದಾದರೂ ಹೇಗೆ?'' ಎಂದು ಎಲ್ಲ ಯೋಚಿಸಿದರು. ಪರಿಣಾಮ ಎಂದರೆ ರಾಜನ ಸಂಗ್ರಹದಲ್ಲಿ ಹಾಲಿಗಿಂತ ನೀರು ಹೆಚ್ಚಾಗಿತ್ತು.

ಅಂಥದ್ದೇ ಒಂದು ಸ್ಥಿತಿಯಲ್ಲಿ ನಾವೀಗ ಇದ್ದೇವೆ. ನನ್ನೊಬ್ಬನಿಂದ ಏನಾಗುತ್ತದೆ! ನಾನೊಬ್ಬ ಲಂಚ ಕೂಡದೇ ಹೋದರೆ ಲಂಚ ನಿರ್ಮೂಲನೆ ಆಗುತ್ತದೆಯೇ! ಎಂದೆಲ್ಲ ಯೋಚಿಸುತ್ತೇವೆ.

ಇದು ಸಾಮಾಜಿಕ ನೆಲೆಯ ಮಾತು. ವೈಯಕ್ತಿಕ ಬದುಕು ಇದಕ್ಕಿಂತ ಹೊರತಲ್ಲ. 'ಏನು ಮಾಡೋದು? ಅಪ್ಪ, ಅಮ್ಮನ ಬಲವಂತ. ನನನ್ನದೇನೂ ಇಲ್ಲಪ್ಪ'' ಎಂದು ವರದಕ್ಷಿಣೆ ಪಡೆದ ಬಗ್ಗೆ ವಿವರಣೆ ನೀಡುವ ಜನ ನಿತ್ಯ ಕಾಣುತ್ತಾರೆ.

ಯಾರೂ ನೋಡ್ತಾ ಇಲ್ಲ ಅಂತ ಮಾಡಬಾರದ್ದು ಮಾಡಲು ತೊಡಗುವುದು ಆತ್ಮ ವಂಚನೆ. ಒದ್ದೆ ನೆಲದಲ್ಲಿ ನಡೆದಾಗ ಹೆಜ್ಜೆ ಗುರುತು ಮೂಡಿಯೇ ಮೂಡುತ್ತವೆ. ಒಣ ನೆಲದಲ್ಲಿ ಹೆಜ್ಜೆ ಗುರುತ ಮೂಡಿದರೂ ಬರಿಗಣ್ಣಿಗೆ ಕಾಣುವುದು ಕಷ್ಟ. ಹಾಗೆಂದು ನಾವಿಟ್ಟ ಹೆಜ್ಜೆ ಯಾವುದು ಎಂಬುದು ನಮ್ಮ ಅಂತರಂಗಕ್ಕೆ ತಿಳಿಯದೇ?

ಇಂಥ ಅಂತರಂಗದ ನೈತಿಕತೆಯೇ ಈಗ ವಿರಳವಾಗುತ್ತಿದೆ. ಆದರೆ ಸಮಾಜ ಒಂದರ ನಿಜವಾದ ತಳಹದಿ ಅದು. ಅದು ಶಿಥಿಲವಾದರೆ ಬದುಕಿಗೆ ಅರ್ಥ ಇರುವುದಿಲ್ಲ. ಇಡೀ ಸಮಾಜ ಭ್ರಷ್ಟವಾಗುತ್ತದೆ.

ಸಾಮಾನ್ಯವಾಗಿ ನಾವು ನಾನಾ ರೀತಿಯ ಒತ್ತಡಗಳಿಗೆ ಗುರಿಯಾಗಿ ಮನಸೊಪ್ಪದ ತೀರ್ಮಾನಗಳನ್ನು ಕೈಗೊಳ್ಳುತ್ತೇವೆ. ಅದು ಒಂದು ಕ್ಷಣದ ನಿರ್ಧಾರವಾದರೂ, ಅದರ ಪರಿಣಾಮ ಮಾತ್ರ ಬದುಕಿನುದ್ದಕ್ಕೂ ಇರುವಂಥದ್ದು.

ಇಂಥ ಸಂದರ್ಭಗಳಲ್ಲಿ ಹೇಗೆ ವರ್ತಿಸಬೇಕು ಎಂದು ಮೊದಲ ಪಾಠ ಹೇಳಿಕೊಟ್ಟವರು ನನ್ನ ಅಜ್ಜ. ಅವರು ಖ್ಯಾತ ಸರ್ಜನ್. ನಾವು ಸರಿ ಎಂದು ದೃಢವಾದಾಗ, ಆ ನಿಲುವಿಗೆ ಅಂಟಿ ಉಳಿಯಬೇಕು ಎಂದೇ ಅವರು ಹೇಳುತ್ತಿದ್ದರು. ಅದಕ್ಕೆ ಉದಾಹರಣೆಯಾಗಿ ಅವರ ಬದುಕಿನ ಘಟನೆಯೊಂದು ಹೇಳುತ್ತಾ ಇದ್ದರು.

ಅಜ್ಜ ಜಿಲ್ಲಾ ಆಸ್ಪತ್ರೆಯಲ್ಲಿ ಸರ್ಜನ್. ಅವತ್ತು ಒಂದು ಶಸ್ತ್ರ ಚಿಕಿತ್ಸೆ. ಸಹಾಯಕ್ಕೆ ಹೊಸದಾಗಿ ಬಂದ ನರ್ಸ್. ಶಸ್ತ್ರ ಚಿಕಿತ್ಸೆ ಮುಗಿದು, ಬಳಸಿದ್ದ ಉಪಕರಣ, ಹತ್ತಿಯ ತುಂಡು ಎಲ್ಲ ಎಣಿಕೆ ಮಾಡಲಾಯಿತು. ಬೇರೆಲ್ಲ ಉಪಕರಣಗಳ ಲೆಕ್ಕ ಸರಿಯಾಗಿತ್ತು. ಬಳಸಿದ್ದು ಹತ್ತು ಹತ್ತಿಯ ತುಂಡು. ಟ್ರೇನಲ್ಲಿ ಸಂಗ್ರಹವಾಗಿದ್ದು ಕೇವಲ ಒಂಬತ್ತು ತುಂಡು ಮಾತ್ರ. ಅಷ್ಟೇ ಬಳಸಿದ್ದು ಎಂದು ಅಜ್ಜನ ವಾದ. ಇಲ್ಲ ಹತ್ತು ತುಂಡು ಎಂದು ಆ ಹೊಸ ನರ್ಸ್. 'ನಿನ್ನ ಲೆಕ್ಕ ಸರಿಯಾಗಿಲ್ಲ. ನಾನಿನ್ನು ಹೊಲಿಗೆ ಹಾಕ್ತೀನಿ' ಎಂದು ಅಜ್ಜ ಮುಂದಾದಾಗ, ಆಕೆ ಅಳುಕುತ್ತಲೇ ಆದರೆ ದಿಟ್ಟವಾಗಿ ''ಸರ್, ಒಂದು ಸಲ ಆ ರೋಗಿಯ ಬಗ್ಗೇನೂ ಯೋಚನೆಗೆ ಮಾಡಿ'' ಎಂದು ಬೇಡಿಕೊಂಡಳಂತೆ. ಆಗ ಕಾಲಡಿಯಲ್ಲಿ ಬಿದ್ದಿದ್ದ ರಕ್ತ ಲೇಪಿತ ಹತ್ತನೆಯ ತುಂಡು ತೋರಿಸುತ್ತಾ ''ನೀನು ಒಳ್ಳೆಯ ನರ್ಸ್ ಆಗ್ತೀಯ ಕಣಮ್ಮ'' ಎಂದು ಭವಿಷ್ಯ ನುಡಿದರಂತೆ. ಅವರಂದ ಭವಿಷ್ಯವೂ ನಿಜವಾಯಿತು. ಎಲ್ಲಕ್ಕಿಂತ ಮುಖ್ಯವಾಗಿ ''ತಾನು ಹೊಸಬಳು. ಡಾಕ್ಟರು ಹಿರಿಯರು ಅನುಭವಸ್ಥರು. ಅವರು ಹೇಳಿದ್ದು ಒಪ್ಪಿಬಿಡಬೇಕು. ಇಲ್ಲವಾದರೆ ನಾಳೆ ತನ್ನ ವೃತ್ತಿಗೆ ಧಕ್ಕೆ ಬರಬಹುದೆಂಬ ಅಳುಕು ಆಕೆಗಿರಲಿಲ್ಲ''

ನಾವು ಸರಿ ಎಂದು ಸ್ಪಷ್ಟವಾಗಿದ್ದಾಗ ಅದನ್ನು ಸಾಧಿಸಿ ತೋರಿಸುವುದೂ ಬಹಳ ಮುಖ್ಯ ಎಂದು ಅಜ್ಜ ಹೇಳುತ್ತಾ ಇದ್ದರು.

★

ಎರಡನೆಯ ಪಾಠ ಹೇಳಿಕೊಟ್ಟಿದ್ದು ನಮ್ಮ ಹೈಸ್ಕೂಲಲ್ಲಿ ಮಾಸ್ತರಾಗಿದ್ದವರು.

ಒಂದು ಸಲ ಅವರು ಮನೇಲಿ ಮಾಡಿಕೊಂಡು ಬರಲು ಲೆಕ್ಕ ಒಂದು ಕೊಟ್ಟಿದ್ದರು. ಅದು ತಪ್ಪಾಗಿತ್ತು. ಮರುದಿನ ನಾವೆಲ್ಲ ಪೆಚ್ಚು ಮೋರೆ ಹೊತ್ತು ಪುಸ್ತಕ ಅವರ ಮುಂದಿಟ್ಟೆವು. ಬಹುಪಾಲು ಜನಕ್ಕೆ ಲೆಕ್ಕ ಅರ್ಥವಾಗದೇ ಇದ್ದುದರಿಂದ ಅವರು ಬೋರ್ಡಿನ ಮೇಲೆ ಅದನ್ನು ಬಿಡಿಸಿ ತೋರಿಸಿದರು. ನಾವೆಲ್ಲ ಸರಸರನೆ ಬರೆದುಕೊಂಡೆವು. ಅದು ಮುಗಿದ ಮೇಲೆ ಮಾಸ್ತರು ನಮ್ಮಲ್ಲಿನ ಚಂದ್ರಶೇಖರ ಎಂಬಾತನನ್ನು ಹೆಸರಿಡಿದು ಕರೆದು

'ಇವನೊಬ್ಬನೇ ಲೆಕ್ಕ ಸರಿಯಾಗಿ ಮಾಡಿದ್ದು'' ಎಂದದ್ದೂ ಅಲ್ಲದೇ ಮುಂದುವರಿಸಿ ''ನನಗೂ ಲೆಕ್ಕ ಬಿಡಿಸೋದು ಗೊತ್ತಿರಲಿಲ್ಲ. ನನ್ನ ಪರಿಚಯದ ಒಬ್ಬರನ್ನ ಕೇಳಿ ತಿಳಕೋಬೇಕು ಅಂದುಕೊಂಡಿದ್ದೆ. ಸಾಧ್ಯ ಆಗಲಿಲ್ಲ. ಚಂದ್ರಶೇಖರ ಬಿಡಿಸದ್ದು ನೋಡಿ, ನಾನೂ ಹಾಗೇ ಬರೆದು ತೋರಿಸಿದೆ....'' ಎಂದರು.

ಗೊತ್ತಿಲ್ಲದ್ದನ್ನು ಒಪ್ಪಿಕೊಳ್ಳುವ ಹಾಗೆ ನಮಗೆ ತಿಳಿಯದ್ದು ಇನ್ನೊಬ್ಬರಿಗೆ ಗೊತ್ತಿದೆ ಎನಿಸಿದಾಗ, ಅವರು ಎಷ್ಟೇ ಚಿಕ್ಕವರಿರಲಿ. ಅವರಿಂದ ಕಲಿಯವುದು ಹಾಗೂ ಅದನ್ನು ಸ್ಮರಿಸುವುದು ಮುಖ್ಯ ಎಂದು ಮನವರಿಕೆ ಮಾಡಿಕೊಟ್ಟವರು ಆ ಮಾಸ್ತರು.

★

ಕಾಲೇಜಿಗೆ ಬಂದಾಗ ಸಹಜವಾಗಿಯೇ ಜಗತ್ತು ಹೊಸ ಅರ್ಥದಲ್ಲಿ ಕಾಣಿಸತೊಡಗುತ್ತದೆ. ನಾವು ನಾವಾಗಿ ಇರುವುದೇ ಇಲ್ಲ. ನಮ್ಮ ಬಟ್ಟೆ, ರೀತಿ, ನೀತಿ ಎಲ್ಲಕ್ಕೂ ಬೇರೆಯದೇ ಅರ್ಥ ಬರುತ್ತದೆ. ಬಟ್ಟೆ ಬಡತನ ಮುಚ್ಚಿಕೊಳ್ಳುವ ಹಾಗೇ ತಾನೊಬ್ಬ ಬೇರೆಲ್ಲರಿಗಿಂತ ಭಿನ್ನವಾದ, ಸೊಗಸುಗಾರ. ನಾನು ಇರುವುದೇ ಹಾಗೆ ಎಂದು ಬಿಂಬಿಸುವ ಯತ್ನ ನಡೆಯುತ್ತದೆ.

ಆದರೆ ಎಂದೋ ಒಂದು ದಿನ ಹೊರಗೆ ಕಾಯುವ ಈ ಎಲ್ಲಕ್ಕಿಂತ ಮುಖ್ಯವೆನಿಸುವುದು ನಮ್ಮ ಅಂತರಂಗದ ಸೊಗಸುಗಾರಿಕೆ ಎಂದು ಮನವರಿಕೆ ಆಗುವಾಗ ಕಾಲ ಮೀರಿ ಹೋಗಿರುತ್ತದೆ. ಇಲ್ಲವೇ, ನಾವು ಅದನ್ನು ಒಪ್ಪಿಕೊಳ್ಳಲು ಹೋಗುವುದೇ ಇಲ್ಲ.

ನಮ್ಮ ಕಾಲೇಜು ಬಹಳ ಪ್ರತಿಷ್ಠಿತ ಸಂಸ್ಥೆ. ಮೈಸೂರಲ್ಲಿ ತೀರಾ ಹೆಸರು ಪಡೆದಿದ್ದು. ನಮ್ಮಲ್ಲಿ ಬರುವ ಲೆಕ್ಚರರ್‌ಗಳೆಲ್ಲ ಸರಿ ಸುಮಾರಾಗಿ ಸೂಟು ಧರಿಸಿಯೇ ಬರುತ್ತಾ ಇದ್ದರು. ಒಳ್ಳೆಯ ಗತ್ತಿನಿಂದಲೂ ನಡೆದುಕೊಳ್ಳುತ್ತಾ ಇದ್ದರು. ಇವರೆಲ್ಲರಿಗಿಂತ ಭಿನ್ನವಾದವರು ನಮಗೆ ಪ್ರಿಯವಾದ ರಮೇಶ್ ಎಂಬ ಮಾಸ್ತರು. ಒಂದು ಸಾದಾ ಸ್ಲಾಕ್ ಹಾಗೂ ಪ್ಯಾಂಟಲ್ಲಿ ಬರುತ್ತಾ ಇದ್ದರು. ಅದನ್ನೇ ನೀಟಾಗಿ ಒಗೆದು, ಇಸ್ತ್ರಿ ಮಾಡಿ ಧರಿಸಿಕೊಂಡಿರುತ್ತಿದ್ದರು. ನಮ್ಮ ಗಮನ ಅವರ ಡ್ರೆಸ್‌ಗಿಂತ ಹೆಚ್ಚಾಗಿ, ಮಂತ್ರ ಮುಗ್ಧರಾಗಿ ಅವರ ಪಾಠ ಕೇಳುವತ್ತ.

ಡಿಗ್ರಿಯ ಕೊನೇ ದಿನ ಅಂತೂ ಧೈರ್ಯ ಮಾಡಿ ನಮ್ಮಲ್ಲೊಬ್ಬರು ಕೇಳಿಯೇಬಿಟ್ಟೆವು. ಅವರು ಕೂಡ ಸಿಟ್ಟು ಮಾಡಿಕೊಳ್ಳದೇ ಹೇಳಿದರು.

''ಡ್ರೆಸ್ ಇರೋದು ನಮ್ಮ ವ್ಯಕ್ತಿತ್ವ ಮುಚ್ಚಿಡೋಕೆ ಅಲ್ಲ. ನಾವೇನೋ ಅದನ್ನ ಸ್ಪಷ್ಟವಾಗಿ ಬಹಿರಂಗಪಡಿಸೋಕ್ಕೆ....

ನಾವೇನು ಎಂದು ತಿಳಿಯದೇ ಇರೋದು, ಇನ್ನೊಬ್ಬರಂತೆ ಆಗಬೇಕೆಂಬ ಹುಂಬ ಹಂಬಲದಿಂದ ನಾವು ನಾವಾಗಿ ಉಳಿಯೋದಿಲ್ಲ.

ನಾನು ಹಾಗೂ ನನ್ನ ಜೊತೆಯ ಹಲವರು ಕಲಿತ ಬದುಕಿನ ಹೆಜ್ಜೆಗಳು. ನಾವು ಮುಖ್ಯವಾಗಿ ತಿಳಿಯಬೇಕಾದ ನಿಲುವುಗಳಿಗೆ ಈ ಮೂರು ಸ್ಪಷ್ಟ ದಾರಿ ದೀಪ ಅನ್ನಿಸುತ್ತದೆ.

■ ಅರುಣ

# ಕಮಲಾದಾಸ್ ಸುರಯ್ಯಾ ಆದದ್ದು



ಕಮಲಾದಾಸ್ ಬಾಲ್ಯದ ಒಂದು ಚಿತ್ರ

> ಕಮಲಾ ಅವರ ಮಲಯಾಳಂ ಬರಹ ಓದಿದ ಎಳೆಯ ಹುಡುಗಿಯರಿಗೆ ಅವರಂತೆ ಬರೆಯಬೇಕೆಂಬ ಹಂಬಲ. ಅವರು ಒಂದರ್ಥದಲ್ಲಿ ಅವರೆಲ್ಲರ ಆದರ್ಶ. ಕಮಲಾ ತಮ್ಮ ಆತ್ಮ ಚರಿತ್ರೆ ಬರೆದಾಗ ಬೆಚ್ಚಿದವರು ಇಂಥ ಎಳೆಯರು. ಮಲೆಯಾಳಂ ಸಾಹಿತ್ಯದಲ್ಲಿ ತೀರಾ ಅಪರೂಪ ಎನಿಸಿದ ವಾಸ್ತವವನ್ನು ಅವರು ಮೊನಚಾಗಿ ಹೇಳಿದ್ದರು. ಹೆಣ್ಣಿನಲ್ಲಿ ಕಾಮದ ಅತೃಪ್ತಿ ಇರುತ್ತದೆ. ಅದನ್ನು ಆಕೆ ಇಂಗಿಸಿಕೊಳ್ಳಲು, ಸಂಸಾರದ ಚೌಕಟ್ಟಿನ ಆಚೆಗೂ ಕೈ ಚಾಚಿದರೆ ತಪ್ಪೇನೂ ಇಲ್ಲ ಎಂಬ ವಾದ ಅವರದು. ಹೀಗಾಗಿ ಎಳೆಯರಿಗೆ ಗೊಂದಲ

**ಕ**ಮಲಾದಾಸ್ ಭಾರತೀಯ ಓದುಗರಿಗೆ ಪರಿಚಿತ. ಅವರ 'ಬಾಲ್ಯಕಾಲ ಸ್ಮರಣಕ್ಕಳ್' ಹಾಗೂ 'ಮೈ ಸ್ಟೋರಿ' ಎಂಬ ಇಂಗ್ಲೀಷಿನ ಆತ್ಮಚರಿತ್ರೆ ಬಹುಪಾಲು ಭಾರತೀಯ ಭಾಷೆಗಳಿಗೆ ಅನುವಾದಗೊಂಡಿವೆ. ಜೊತೆಗೆ ಅವರ ಹಲವಾರು ಕವನಗಳೂ ಆತ್ಮೀಯ ದನಿಯಲ್ಲಿ ಓದುಗರೊಡನೆ ಸಂವಾದಕ್ಕೆ ಇಳಿಯುತ್ತವೆ.

ಕಮಲಾ ಹುಟ್ಟಿದ್ದು ಕೇರಳದ ದೊಡ್ಡ ಮನೆತನದಲ್ಲಿ. ಅವರ ತಾಯಿ ಬಾಲಮಣಿ ಅಮ್ಮಾಳ್. ಬಹುದೊಡ್ಡ ಸಾಹಿತಿ. ಅವರ ಕುಟುಂಬ 'ನಲಪ್ಪಾಟ್' ಕೇರಳದ ಜನ ಬಹಳ ಗೌರವದಿಂದ ನೋಡುವಂಥದ್ದು. ತಂದೆ ಸಿ.ಎಂ.ನಾಯರ್ ಮಲಯಾಳಂನ ಜನಪ್ರಿಯ ದೈನಿಕ 'ಮಾತೃಭೂಮಿ'ಯ ನಿರ್ದೇಶಕರಾಗಿದ್ದವರು.

ಕಮಲಾ ಅವರ ಮಲಯಾಳಂ ಬರಹ ಓದಿದ ಎಳೆಯ ಹುಡುಗಿಯರಿಗೆ ಅವರಂತೆ ಬರೆಯಬೇಕೆಂಬ ಹಂಬಲ. ಅವರು ಒಂದರ್ಥದಲ್ಲಿ ಅವರೆಲ್ಲರ ಆದರ್ಶ. ಕಮಲಾ ತಮ್ಮ ಆತ್ಮ ಚರಿತ್ರೆ ಬರೆದಾಗ ಬೆಚ್ಚಿದವರು ಇಂಥ ಎಳೆಯರು. ಮಲೆಯಾಳಂ ಸಾಹಿತ್ಯದಲ್ಲಿ ತೀರಾ ಅಪರೂಪ ಎನಿಸಿದ ವಾಸ್ತವವನ್ನು ಅವರು ಮೊನಚಾಗಿ ಹೇಳಿದ್ದರು. ಹೆಣ್ಣಿನಲ್ಲಿ ಕಾಮದ ಅತೃಪ್ತಿ

ಇರುತ್ತದೆ. ಅದನ್ನು ಆಕೆ ಇಂಗಿಸಿಕೊಳ್ಳಲು, ಸಂಸಾರದ ಚೌಕಟ್ಟಿನ ಆಚೆಗೂ ಕೈ ಚಾಚಿದರೆ ತಪ್ಪೇನೂ ಇಲ್ಲ ಎಂಬ ವಾದ ಅವರದು. ಹೀಗಾಗಿ ಎಳೆಯರಿಗೆ ಗೊಂದಲ.

ಕೇರಳದ ಕುಟುಂಬಗಳಲ್ಲಿ, ಅದರಲ್ಲೂ ಶ್ರೀಮಂತರ ಮನೆಗಳಲ್ಲಿ ಇದ್ದಿರಬಹುದಾದ ಮಹಿಳೆಯರ ವಿವಾಹೇತರ ಸಂಬಂಧ ಒಂದು ಮಗ್ಗುಲಾದರೆ, ಕಮಲಾ ಪ್ರತಿಪಾದಿಸಿದ ದಿಟ್ಟತನವೇ ಬೇರೆ ರೀತಿಯದು. ಅಲ್ಲಿ ಆತ್ಮವಂಚನೆ ಇರಲಿಲ್ಲ.

ತಮ್ಮ ಆತ್ಮ ಚರಿತ್ರೆಯಲ್ಲಿ ಬರೆದು ತೆರೆದಿಟ್ಟ ಬದುಕಿನ ವಾಸ್ತವ, ಸಂಬಂಧಗಳನ್ನು ಓದಿದಾಗ ಇಡೀ ಮಲಯಾಳ ದೇಶವೇ ಬೆಚ್ಚಿ ಕುಳಿತಿತ್ತು. ಇದರ ಪರಿಣಾಮವಾಗಿ ಸಂಪ್ರದಾಯಸ್ಥ ಕೇರಳೀಯರು ಕಮಲಾ ಅವರನ್ನು ನೋಡುವ ದೃಷ್ಟಿ ಬದಲಾಯಿತು. ಆಕೆಯನ್ನು ಅಸ್ಪೃಶ್ಯರೆಂಬಂತೆ ನೋಡುವುದು ಆರಂಭವಾಯಿತು. ಸತ್ಯ ಹೇಳಿ ನಿಷ್ಠುರ ಕಟ್ಟಿಕೊಂಡಿದ್ದಕ್ಕೆ ಕಮಲಾಗೆ ಬೇಸರ. ಒಳಗೇ ಅದು ಅವರನ್ನು ಬಾಧಿಸುತ್ತಾ ಹೋಯಿತು.

ಬರೆಯುವುದನ್ನು ಬಿಟ್ಟು, ತಮ್ಮ ಅರವತ್ತನೇ ವಯಸ್ಸಿನಲ್ಲಿ ಪೇಂಟಿಂಗ್ ಕೈಗೆತ್ತಿಕೊಂಡಾಗಲೂ ವಿವಾದ ಅವರನ್ನು ಬೆನ್ನಟ್ಟಿ ಬಂತು. ಆಕೆ ಚಿತ್ರಿಸಿದ್ದು ಬೆತ್ತಲೆ ಮಹಿಳೆಯರನ್ನು. ಅವಕ್ಕೆ ವಿಮರ್ಶಕರ ಮೆಚ್ಚುಗೆ. ಒಳ್ಳೆಯ ಬೆಲೆ ಹಾಗೂ ಮಾರುಕಟ್ಟೆ ದೊರೆಯಿತು. ಆದರೆ ಶಿಷ್ಟತೆಯೇ ತಮ್ಮ ಪರಂಪರೆಯ ದೊಡ್ಡ ಗುಣ ಎಂದು ನಂಬಿದ ಬಹುಪಾಲು ಜನಕ್ಕೆ ಕಮಲಾ ಅವರ ಹೊಸ ಅವತಾರ ನುಂಗಲಾರದ ತುತ್ತು.

ಸಂದರ್ಭ ದೊರೆತು ಆಕೆ ಬಾಯಿ ತೆಗೆದಾಗೆಲ್ಲ ಮುಕ್ತ ಪ್ರೀತಿ, ಹೆಣ್ಣಿನ ಲೈಂಗಿಕ ಸ್ವಾತಂತ್ರ್ಯ ಇಂಥವೇ ವಿಷಯಗಳ ಬಗ್ಗೆ ಮಾತಾಡುತ್ತಾ ಇನ್ನಷ್ಟು ನಿಷ್ಠುರಕ್ಕೆ ಗುರಿಯಾದರು.

ಈಗ ತಮ್ಮ 67ನೇ ವಯಸ್ಸಿನಲ್ಲಿ ಅವರು ಇಸ್ಲಾಂ ಧರ್ಮ ಸ್ವೀಕರಿಸಿ 'ಸುರಯ್ಯ' ಆಗಿದ್ದಾರೆ. ಅಷ್ಟೇ ಅಲ್ಲ. ತಾವು ತರುಣನೊಬ್ಬನನ್ನು ಮದುವೆ ಆಗುವ ಬಯಕೆ ವ್ಯಕ್ತಪಡಿಸಿದ್ದಾರೆ.

ಧರ್ಮ ಮತ್ತು ವಿವಾಹ ತೀರಾ ವೈಯಕ್ತಿಕ ವಿಷಯಗಳು. ಆದರೆ ಕಮಲಾ ಅವರಂಥ ಲೇಖಕಿ ಇಂಥದೊಂದು ಹೆಜ್ಜೆ ಇಟ್ಟಾಗ ಸಹಜವಾಗಿಯೇ ದೊಡ್ಡ ಕಂಪನಗಳು ಏಳುತ್ತವೆ.



ಕಮಲಾದಾಸ್ ಮತಾಂತರಗೊಂಡ ನಂತರದ ಚಿತ್ರ

ಮತಾಂತರದ ಬಗ್ಗೆ ಗಾಢವಾದ ಆತ್ಮಾವಲೋಕನ ಈಗ ಮುಖ್ಯ ಎನಿಸಿದೆ. ಇಸ್ಲಾಂ ಎಷ್ಟೇ ಒಳ್ಳೆಯ ಧರ್ಮ ಆದರೂ, ಅದನ್ನು ಇಲ್ಲಿ ಆಚರಿಸುತ್ತಿರುವ ರೀತಿ ಹಲವು ರೀತಿಯ ಸಮಸ್ಯೆಗಳಿಗೆ ಕಾರಣ. ಬಹು ಪತ್ನಿತ್ವ, ಮೂರು ಬಾರಿ 'ತಲಾಖ್' ಹೇಳಿ ಮದುವೆ ಮುರಿದುಕೊಳ್ಳುವ ಗಂಡಸರು, ಇದರಿಂದ ಮಾನಸಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಕುಸಿಯುವ ಆ ಧರ್ಮದ ಹೆಂಗಸರು ಎಲ್ಲ ಕಣ್ಣಾರೆ ಕಾಣುತ್ತ ಇರುವ ಸಂದರ್ಭದಲ್ಲಿ, ಮಹಿಳೆಯಾದ ಕಮಲಾ ಇಂಥರೊಂದು ನಿರ್ಧಾರ ತೆಗೆದುಕೊಂಡದ್ದು ವಿಚಿತ್ರ ಎನಿಸುತ್ತದೆ.

ಅಷ್ಟೇ ಅಲ್ಲ. ಹೊಸ ಧರ್ಮಕ್ಕೆ ಪರಿವರ್ತಿತರಾದ ಎಲ್ಲರೂ ತೋರುವ ಅತ್ಯುತ್ಸಾಹದಲ್ಲಿಯೇ ಇಸ್ಲಾಂ ಪರ ವಾದವನ್ನು ಕಮಲಾ ಮಂಡಿಸಲಾರಂಭಿಸಿದ್ದಾರೆ. ಮಹಿಳೆಯರ ಸಂಕಷ್ಟ ನಿವಾರಣೆಗೆ ರಚಿಸಲಾದ ವನಿತಾ ಆಯೋಗ ಹಾಗೂ ಕುಟುಂಬ ನ್ಯಾಯಾಲಯಗಳ ಬಾಗಿಲನ್ನು ಸಹಸ್ರಾರು ಅನ್ಯಾಯಕ್ಕೊಳಗಾದ ಹೆಣ್ಣುಮಕ್ಕಳು ತಟ್ಟುತ್ತಾ ಇದ್ದಾರೆ. ಇಂಥ ಸಂದರ್ಭದಲ್ಲಿ 'ಗಂಡಸು ನಾಲ್ಕು ಮದುವೆ ಆದರೆ, ನಾಲ್ಕು ಮಹಿಳೆಯರಿಗೆ ಜೀವನ ಕೊಟ್ಟಂತಾಗುತ್ತದೆ' ಎಂದೆಲ್ಲ ಕಮಲಾದಾಸ್ ಅರ್ಥಾತ್ ಸುರಯ್ಯಾ ವಾದ ಮಂಡಿಸತೊಡಗಿದ್ದಾರೆ.

ಇಂಥ ಅತ್ಯುತ್ಸಾಹದ ನುಡಿಗಳು ಬೀರುವ ಪರಿಣಾಮ ಮಾತ್ರ ಅನಾಹುತಕಾರಿ ಎಂದು ಅಲ್ಲಿನ ಮಹಿಳಾ ಧುರೀಣರು ಭಾವಿಸತೊಡಗಿದ್ದಾರೆ.

■ ರಾಜನ್

---

ಗಂಡ : ಲೇ ಅಡುಗೆ ಆಯ್ತೇನೇ?
ಹೆಂಡತಿ : ಇಲ್ಲಾಂದ್ರೇ....
ಗಂಡ : ಬೇಗ ರೆಡಿ ಮಾಡು ಇಲ್ಲ ಅಂದ್ರೆ, ನಾನು ಹೋಟೆಲಿಗೆ ಹೋಗ್ತೀನಿ.
ಹೆಂಡತಿ : ಒಂದು ಹತ್ತು ನಿಮಿಷ ಕಾಯ್ತೀರಾ?
ಗಂಡ : ಹತ್ತು ನಿಮಿಷದಲ್ಲಿ ಅಡುಗೆ ಆಗುತ್ತೇನೇ?
ಹೆಂಡತಿ : ಇಲ್ಲ, ನಾನೂ ಡ್ರೆಸ್ ಛೇಂಜ್ ಮಾಡ್ಕೊಂಡು ನಿಮ್ಮ ಜೊತೇಲೇ ಬರ್ತೀನ್ರೀ....!



# ನಿರೀಕ್ಷೆ

ಕತೆ

■ ಶಾರದಾ ವಿ. ಮೂರ್ತಿ
ನಂ. 202, 6ನೇ ಕ್ರಾಸ್, 3ನೇ ಮುಖ್ಯ ರಸ್ತೆ, ಮೈಕೋ ಲೇ ಔಟ್
ಬಿ.ಟಿ.ಎಂ. ಎರಡನೇ ಹಂತ, ಬೆಂಗಳೂರು – 560 076.

ನಮ್ಮ ಹೃದಯ ಸಿಂಹಾಸನಗಳಲ್ಲಿ ಏನೆಲ್ಲಾ ಆಸೆಗಳನ್ನೂ, ಮಧುರ ಭಾವನೆಗಳನ್ನೂ ಇಟ್ಟುಕೊಂಡು ಅಯೋಧ್ಯೆಯ ಅರಮನೆಯನ್ನು ಹೊಕ್ಕೆವು. ನಮ್ಮ ನಾಲ್ವರ ಉತ್ಸಾಹಕ್ಕೆ, ಉಲ್ಲಾಸಕ್ಕೆ ಎಣೆಯೇ ಇರಲಿಲ್ಲ. ತಂದೆ-ತಾಯಿಯ ರಂತಹ ಅತ್ತೆ-ಮಾವಂದಿರು, ಸಕಲ ಗುಣಸಂಪನ್ನರಾದ ಪತಿ ಇನ್ನೇನು ಚಿಂತೆ? ಅರಮನೆಯಲ್ಲಿ ಎಲ್ಲರೂ ನಮ್ಮನ್ನು ಪ್ರೀತಿಸುವವರೇ... ಆದರಿಸುವವರೆ.... ಅಂತೆಯೇ ಅರಮನೆಯ ಸಕಲ ವಸ್ತುಗಳೂ ನಮಗೆ ಪ್ರಿಯವಾಗಿದ್ದವು, ಸುಂದರವಾಗಿದ್ದವು.

ಮಿಥಿಲೆಯಲ್ಲಿ ಸಂಭ್ರಮದ ವಾತಾವರಣ. ತಂದೆಯವರ ಸಂತಸ ಹೇಳತೀರದು. ಶಿವಧನಸ್ಸನ್ನು ಮುರಿದು ಸ್ವಯಂವರದಲ್ಲಿ ಗೆದ್ದ, ಶ್ರೀಮನ್ನಾರಾಯಣನ ಪ್ರತಿರೂಪದಂತಿರುವ ಶ್ರೀರಾಮನೊಡನೆ ಮಗಳ ಮದುವೆ ಮಾಡಲು ಕಾತರರಾಗಿದ್ದಾರೆ. ನನ್ನಕ್ಕನ ಮುಖವಂತೂ ಆನಂದೋಲ್ಲಾಸದಿಂದ ಕಳೆಗೊಂಡು ರಾಗರಂಜಿತವಾಗಿ ಶೋಭಿಸುತ್ತಿದೆ. ಇಂತಹ ಸಂದರ್ಭದಲ್ಲಿ ಅಕ್ಕನನ್ನು ರೇಗಿಸದೆ ಬಿಟ್ಟೇನೆ?

ರಾಜೋದ್ಯಾನದಲ್ಲಿ ಅಕ್ಕನ ಕೆನ್ನೆ ಚಿವುಟಿ ಮಾತಿಗೆಳೆಯುತ್ತೇನೆ, ''ಅಕ್ಕ.... ನಿನ್ನ ಕನಸಿನ ಸಾಕಾರ ರೂಪದಂತಿದ್ದಾರಲ್ಲವೆ ಶ್ರೀರಾಮಚಂದ್ರ. ಆಹಾ.... ಎಂತಹ ಗಂಭೀರ ಸ್ವರೂಪ.... ಆ ದಿವ್ಯ ಕಾಂತಿ.... ಆಗಲೇ ನಿನ್ನ ಮನಸ್ಸನ್ನು

ಅಪಹರಿಸಿಬಿಟ್ಟಿದ್ದಾರಲ್ಲವೆ.... ಇನ್ನು ಮೇಲೆ ಈ ಬಡತಂಗಿಯ ಗತಿ....''

ಸೀತಕ್ಕ ಹುಸಿ ಮುನಿಸು ನಟಿಸಿ ನನ್ನ ಕಿವಿ ಹಿಂಡುತ್ತಾ ನುಡಿದಳು. ''ನಿನ್ನದು ಅತಿಯಾಯ್ತು ಊರ್ಮಿಳೆ. ಸೀತೆ ಎಂದಾದರೂ ತನ್ನ ಪ್ರೀತಿಯ ತಂಗಿಯನ್ನು ಬಿಟ್ಟಾಳೆಯೆ.... ಸರಸಕ್ಕೂ ಹಾಗೆನ್ನದಿರು. ಹೇಗಿದ್ದರೂ ನೀನೂ ನನ್ನೊಡನೆ ಬರುವವಳು ತಾನೆ? ಯಾವಾಗಲೂ ಅಣ್ಣನಿಗೆ ಅಂಟಿಕೊಂಡಿರುತ್ತಾರಲ್ಲ.... ಅದೇ ಅವರ ಹೆಸರು.... ಆಂ.... ಲಕ್ಷ್ಮಣ. ತಂದೆಯವರು ಶ್ರೀ ವಿಶ್ವಾಮಿತ್ರ ಋಷಿಗಳೊಂದಿಗೆ ಸಮಾಲೋಚಿಸುತ್ತಿರುವುದು ನೀನೂ ಬಲ್ಲೆಯಷ್ಟೆ. ಅಂದ ಮೇಲೆ ಆ ಅಣ್ಣ-ತಮ್ಮಂದಿರು, 'ಎರಡು ದೇಹ ಒಂದು ಜೀವ'ದಂತಿರುವುದಾದರೆ ನಾವೇನು ಕಡಿಮೆ ಎಂದು ತೋರಿಸಿಯೇ ಬಿಡೋಣ''



''ಹೋಗಕ್ಕ....'' ಹುಸಿಕೋಪವನ್ನು ನಟಿಸುತ್ತಾ ನಾನೆಂದೆ. ''ಓಹೋ.... ಈಗಲೇ ನನ್ನ ತಂಗಿಗೆ ಎಷ್ಟೊಂದು ನಾಚಿಕೆ'' ಎಂದು ಪ್ರೀತಿಯಿಂದ ನನ್ನ ಗಲ್ಲವನ್ನು ಸವರುತ್ತಾ, ಮುಂಗುರುಳನ್ನು ತೀಡುತ್ತಿದ್ದರೆ ನಾನು ಹಿತವಾಗಿ 'ಊಂ' ಎಂದು ರಾಗವೆಳೆದೆ.

''ನಂತರ ಮಾತನಾಡೋಣ.... ತಾಯಿಯವರು ಕಾಯುತ್ತಿರುತ್ತಾರೆ.'' ಎಂದು ಮುನ್ನಡೆದ ಸೀತಕ್ಕನನ್ನು ಹಿಂಬಾಲಿಸುತ್ತಾ ಮನಸ್ಸಿನಲ್ಲಿ ಮಂಡಿಗೆ ಮೆಲ್ಲತೊಡಗಿದೆ.

ಅಂದು ಸಂಜೆಯೇ ಅಕ್ಕ ಹೇಳಿದ ಮಾತು ದಿಟವೆಂದು ತಿಳಿಯಿತು, ಸೀತಕ್ಕನಿಗೂ, ನನಗೂ, ಶ್ರುತಕೀರ್ತಿ, ಮಾಂಡವಿಯವರಿಗೂ ಒಂದೇ ದಿನ ವಿವಾಹವೆಂದು ನಿಶ್ಚಯಿಸಿದ್ದರು.

ಅನುರೂಪರಾದ ಅಳಿಯಂದಿರು ಸಿಕ್ಕ ಭಾಗ್ಯಕ್ಕೆ ಅಪ್ಪ-ಅಮ್ಮಂದಿರು ಸಂತಸದಿಂದಿದ್ದರೆ ನಮ್ಮ ಅದೃಷ್ಟಕ್ಕಾಗಿ ನಾವೆಲ್ಲಾ ಹಿಗ್ಗುತ್ತಿದ್ದೆವು. ಸೀತಕ್ಕ ಅನುಪಮ ಸುಂದರಿ, ಸಾಕ್ಷಾತ್ ಲಕ್ಷ್ಮೀದೇವಿಯಂತೆ, ನಾನೇನೂ ರೂಪದಲ್ಲಿ ಕಡಿಮೆ ಇಲ್ಲ. ಅಂತೆಯೇ ತಂಗಿಯರೂ ಲಾವಣ್ಯವತಿಯರು. ಸೇರುವ ಮನೆಯಲ್ಲಿಯೂ ನಾವೆಲ್ಲರೂ ಒಂದಾಗಿರಬಹುದೆನ್ನುವ ಹರ್ಷ ನಮ್ಮೆಲ್ಲರ ಮುಖದಲ್ಲಿ ಅಚ್ಚೊತ್ತಿತ್ತು. ನಿಲುವುಗನ್ನಡಿಯಲ್ಲಿ ನನ್ನ ಮುಖ ಬಿಂಬವನ್ನು ನೋಡಿ ನೋಡಿ ಹಿಗ್ಗುತ್ತಿದ್ದೆ. ಆದರೂ ಮನದಾಳದಲ್ಲಿ ಏನೋ ಒಂದು ಸಂಶಯದ ಎಳೆ. ಹುಚ್ಚು ಯೋಚನೆಯಿದ್ದೀತು ಎಂದು ಮನದಿಂದ ಕೊಡವಲೆತ್ನಿಸಿದರೂ ಮತ್ತೆ ಅದೇ ಭಯದ ನೆರಳು. ಈ ನನ್ನ ಭೀತಿ ನನ್ನಕ್ಕನ ಗಮನಕ್ಕೂ ಬಂತು.

''ಏನು ನನ್ನ ಮುದ್ದು ತಂಗಿಯ ಗಲಿಬಿಲಿಗೆ ಕಾರಣ?'' ''ಅಕ್ಕ.... ಮತ್ತೆ.... ಮತ್ತೆ....'' ಮುಂದೇನೂ ನುಡಿಯಲಾಗದೆ ತಲೆಕೆಳಗೆ ಹಾಕಿದೆ. ನನ್ನ ಮುಖವನ್ನು ವಾತ್ಸಲ್ಯದಿಂದ ಹಿಡಿದೆತ್ತುತ್ತಾ ನನ್ನತ್ತ ಪ್ರಶ್ನಾರ್ಥಕ ನೋಟ ಬೀರಿದಾಗ ಹಿಗ್ಗಿನಿಂದ ನುಡಿದೆ.

''ಅಕ್ಕ.... ಅದೇ.... ಅವರು....''

''ಯಾರಮ್ಮಾ ಆ ಅವರು....'' ಅಕ್ಕನ ತುಂಟದನಿಗೆ ತುಸು ಬೇಸರದಿಂದಲೇ ಹೇಳಿದೆ.

''ರೇಗಿಸಬೇಡಕ್ಕ.... ಭಾವನೊಂದಿಗಿರುತ್ತಾರಲ್ಲ.... ತಮ್ಮ.... ಅವರ ಚೂಪಾದ ಮೂಗು.... ತುಸು ಕಿರಿದಾದ ಕಣ್ಣು.... ಬಿಗಿದುಕೊಂಡಿರುವ ಮುಖಮುದ್ರೆ.... ಆ ದಟ್ಟವಾದ ಹುಬ್ಬುಗಳನ್ನು ನೋಡಿದರೆ.... ಅವರಿಗೆ ಮುಂಗೋಪ ಬಹಳ ಹೆಚ್ಚೆಂದು ತೋರುತ್ತದೆ. ಅಲ್ಲವೇ ಅಕ್ಕ.... ನೋಡಲು ಚೆನ್ನಾಗಿದ್ದಾರೆಂಬುದು ನಿಜ. ಆದರೂ ಏಕೋ ಭಯವಕ್ಕ ಒಂದರೆ ಗಳಿಗೆಯೂ ಅಣ್ಣನನ್ನು ಬಿಟ್ಟಿರಲಾರರು ಅವರು. ಅಂತಹವರನ್ನು ಮದುವೆಯಾಗಿ ಅವರಿಗೆ ಹಿತವಾಗಿರಬಲ್ಲೆನೆ ಅಕ್ಕ....''

ಅಕ್ಕ ಜೋರಾಗಿ ನಕ್ಕಾಗ ನನಗೆ ಕೆಡುಕೆನಿಸಿತು.

''ಹೋಗಕ್ಕ.... ನಿನಗೆಲ್ಲಾ ತಮಾಷೆಯೆ....'' ಎಂದವಳೇ ಅಲ್ಲಿಂದ ಹೊರಡುವ ತಯಾರಿ ನಡೆಸಿದೆ.

ಸೀತಕ್ಕ ನನ್ನ ಕುರುಳನ್ನೆಳೆಯುತ್ತಾ ಕೆಣಕಿದಳು. ''ಓಹೋ.... ನಿನ್ನೊಡೆಯನಾಗುವಾತ ಸದಾ ನಿನ್ನೊಂದಿಗಿರಬೇಕೆನ್ನುವ ಹಂಬಲವೇ ಮುದ್ದು ತಂಗಿಗೆ.... ಯೋಚಿಸಬೇಡಮ್ಮ.... ಮದುವೆಯಾದ ಮೇಲೆ ನೀನೆಲ್ಲೋ ಅವರಲ್ಲೇ.... ಆಮೇಲೆ ಈ ಅಕ್ಕನಿಗೇ ತಂಗಿಯ ಮುಖದರ್ಶನ ದುರ್ಲಭವೇನೊ. ಇನ್ನು ಮೈದುನರ ಕೋಪದ ವಿಷಯವೆ? ಎಂತಹ ಕೋಪಿಷ್ಠರೂ ನನ್ನ ತಂಗಿಯ ಮುಖ ನೋಡಿದೊಡನೆ ಶಾಂತ ಸರೋವರದಂತಾಗಿಬಿಡುತ್ತಾರೆ. ಅಷ್ಟಾಗಿಯೂ ಊರ್ಮಿಳ ಎಂದರೆ ಸಾಮಾನ್ಯಳೆ? ಸಹನೆಯ ಪ್ರತಿರೂಪವಲ್ಲವೆ ಅವಳು....''

''ಅಕ್ಕ.... ಅಕ್ಕ.... ನನ್ನನ್ನಿಷ್ಟು ಒಳ್ಳೆಯವಳನ್ನಾಗಿ ಹೊಗಳಬೇಡಕ್ಕ.... ಒಳ್ಳೆಯತನದ ಪಟ್ಟ ಉಳಿಸಿಕೊಳ್ಳುವುದು ಬಹಳ ಕಷ್ಟ'' ಆತಂಕದಿಂದ ಬಂದಿತ್ತು ಮಾತು.

''ಆ ನಂಬಿಕೆ ನನಗಿದೆ ತಂಗಿ.... ಏಳು ಈಗ ಭೋಜನದ ಸಮಯವಾಗುತ್ತಾ ಬಂತು.'' ಎಂದು ಮುಂದಡಿಯಿಟ್ಟ ಅಕ್ಕನನ್ನು ಹಿಂಬಾಲಿಸಿದೆ. ಅಕ್ಕನ ಸಾಂತ್ವನದಿಂದ ಮುದಗೊಂಡ ನಾನು ಬಾಗಿ ಅವಳ ಕಿವಿಯಲ್ಲಿ ಪಿಸುಗುಟ್ಟಿದೆ.

''ಅಕ್ಕ.... ನೀನು ಯಾವಾಗಲೂ ನಿನ್ನ ತಂಗಿಯನ್ನು ಮರೆಯೊಲ್ಲತಾನೆ?''

''ಹುಚ್ಚು ಹುಡುಗಿ.... ಅದು ಹೇಗೆ ಸಾಧ್ಯ?'' ಎಂದು ಮರು ಪ್ರಶ್ನೆ ಹಾಕಿ ನನ್ನ ಕೆನ್ನೆ ಚಿವುಟಿದಳು ಸೀತೆ.

ಎಷ್ಟೋ ಹೊತ್ತಿನವರೆಗೂ ಸೀತಕ್ಕನ ಮಾತುಗಳನ್ನೇ ಮೆಲುಕು ಹಾಕುತ್ತಿದ್ದೆ. ''ನಾನು ಸಹನೆಯ ಪ್ರತಿರೂಪವಂತೆ. ಆದರೆ ಅತಿಯಾದ ಸಹನೆಯೇ ನನ್ನ ಬಾಳಿಗೆ ಮುಳುವಾಗದಿರಲಿ! ಎಂದು ದೇವರಲ್ಲಿ ಮೊರೆಯಿಟ್ಟೆ.

**ಭಾಗ 2**

ನಮ್ಮ ಹೃದಯ ಸಿಂಹಾಸನಗಳಲ್ಲಿ ಏನೆಲ್ಲಾ ಆಸೆಗಳನ್ನೂ, ಮಧುರ ಭಾವನೆಗಳನ್ನೂ ಇಟ್ಟುಕೊಂಡು ಅಯೋಧ್ಯೆಯ ಅರಮನೆಯನ್ನು ಹೊಕ್ಕೆವು. ನಮ್ಮ ನಾಲ್ವರ ಉತ್ಸಾಹಕ್ಕೆ, ಉಲ್ಲಾಸಕ್ಕೆ ಎಣೆಯೇ ಇರಲಿಲ್ಲ. ತಂದೆ-ತಾಯಿಯರಂತಹ ಅತ್ತೆ-ಮಾವಂದಿರು, ಸಕಲ ಗುಣಸಂಪನ್ನರಾದ ಪತಿ ಇನ್ನೇನು ಚಿಂತೆ? ಅರಮನೆಯಲ್ಲಿ ಎಲ್ಲರೂ ನಮ್ಮನ್ನು ಪ್ರೀತಿಸುವವರೇ... ಆದರಿಸುವವರೆ.... ಅಂತೆಯೇ ಅರಮನೆಯ ಸಕಲ ವಸ್ತುಗಳೂ ನಮಗೆ ಪ್ರಿಯವಾಗಿದ್ದವು, ಸುಂದರವಾಗಿದ್ದವು.

ಸೀತಕ್ಕನಂತೂ ಎಲ್ಲರ ಕಣ್ಮಣಿಯೇ. ಶ್ರೀರಾಮಚಂದ್ರನ ಹೃದಯದರಸಿಯೂ ಆಗಿಬಿಟ್ಟಳು.

ಸೌಮ್ಯ ಸ್ವಭಾವದ ನಾನೂ ರೂಪಿನಲ್ಲಿ, ವಿದ್ಯೆ ವಿನಯಗಳಲ್ಲಿ ಸೀತಕ್ಕನಿಗೇನೂ ಕಡಿಮೆಯಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಸೀತಕ್ಕನೇ ಯಾವಾಗಲೂ ನನ್ನನ್ನು, ''ಗುಣದ ಪುತ್ಥಳಿ ನನ್ನ ತಂಗಿ'', ಎಂದು ಹೆಮ್ಮೆ ಪಡುತ್ತಿರಲಿಲ್ಲವೆ?

ನಾನು-ನನ್ನರಸ ಲಕ್ಷ್ಮಣ-ಊರ್ಮಿಳ.... ನಾವು ಒಲವಿನ ಪತಿ-ಪತ್ನಿಯರೇ ಹೌದು. ಅನ್ಯೋನ್ಯ ದಾಂಪತ್ಯವೇ ನಮ್ಮದು. ಆದರೂ ನನ್ನ ಮನಸ್ಸಿಗೆ ಸಂಪೂರ್ಣ ತೃಪ್ತಿಯಿಲ್ಲ. ಹೃದಯಕ್ಕೆ ಶಾಂತಿಯಿಲ್ಲ. ಏನೋ ಮುಜುಗರ. ಎದೆಯಲ್ಲೇನೋ ತಳಮಳ.

ನಿರ್ಮಲವಾದ ಸರೋವರಕ್ಕೆ ಬಿದ್ದ ಒಂದು ಕಲ್ಲೇಟಿನಂತೆ ಗುಳಗುಳನೆ

ಎದ್ದಿರುವ ನೀರ್ಗುಳ್ಳೆಗಳು. ಭಾವನೆಗಳ ತಾಕಲಾಟ. ಇಂತಹುದೇ ಎಂದು ಹೇಳಲಾಗದ ಆತಂಕ, ಚಡಪಡಿಕೆ, ಉದ್ವಿಗ್ನತೆ. ಮೇಲಿಂದ ಮೇಲೆ ಏಳುವ ಪ್ರಶ್ನೆ. ''ಸೀತಕ್ಕ-ಶ್ರೀರಾಮ ಭಾವನವರಂತೆ ನಮ್ಮದೂ ಸಂತೃಪ್ತ ದಾಂಪತ್ಯವೇ? ಅಂತಹ ಅನ್ಯೋನ್ಯತೆ ಪರಸ್ಪರ ನಮ್ಮಿಬ್ಬರಲ್ಲೂ ಇದ್ದೀತೆ? ಇದೆ ಎಂದು ಖಂಡಿತವಾಗಿ ಒಪ್ಪಲೂ ಆಗದ ಇಲ್ಲ ಎಂದು ನಿರಾಕರಿಸಲೂ ಆಗದಂತಹ ಸಂದಿಗ್ಧ.

ಸೀತಕ್ಕ ಅಂದು ಎಂತಹ ಆನಂದದಿಂದ, ಧನ್ಯತಾಭಾವದಿಂದ ನುಡಿದಿದ್ದಳು, ''ನಿಮ್ಮ ಭಾವ ಏನು ಹೇಳಿದರು ಗೊತ್ತೆ ಊರ್ಮಿಳ....

....''ನನ್ನ ಗತಿಗೆ ತಕ್ಕ ಹೆಜ್ಜೆ ಹಾಕುವ, ನನ್ನ ರಾಗಕ್ಕೆ ತಕ್ಕ ತಾಳ ಹಾಕುವ, ನನ್ನ ಮನಸಿಗೆ ಹಿತವಾಗಿ ನಡೆಯುವ ನೀನು ನನ್ನ ಪತ್ನಿಯಾಗಿ ಸಿಕ್ಕಿದುದು ನನ್ನ ಪುಣ್ಯ. ಆದುದರಿಂದಲೇ ಸೀತಾರಾಮನಾಗಿ ಬಿಟ್ಟಿರುವೆ. ನೀನಿಲ್ಲದೆ ನಾನಿಲ್ಲ. ಎಂತಹ ಎಡರು-ತೊಡರುಗಳನ್ನೂ, ಕಷ್ಟ-ನಿಷ್ಠುರಗಳನ್ನೂ ಜೊತೆಯಾಗಿಯೇ ಎದುರಿಸೋಣ. ನೀ ನನ್ನ ಸ್ಫೂರ್ತಿ. ತಂದೆ-ತಾಯಿಯವರೂ ನಿನ್ನನ್ನು ಅದೆಷ್ಟು ಇಷ್ಟಪಡುತ್ತಾರೆ.... ನನಗೇ ಮತ್ಸರವಾಗುವಷ್ಟು.... ನನ್ನ ಸೀತೆ ಯಾವಾಗಲೂ ಹೀಗೇ ಇರಬೇಕು.... ಎಂದು ಏನೆಲ್ಲಾ ಹೇಳಿದರು. ನಿನಗೂ ಮೈದುನ ಹಾಗೆಯೇ ಹೇಳಿರಬೇಕಲ್ಲವೆ.... ಛೀ! ಕಳ್ಳಿ.... ನನ್ನಲ್ಲೂ ಗುಟ್ಟೇ.... ಅಕ್ಕ ಅರೆತೆರೆದ ಕಣ್ಣುಗಳಲ್ಲಿ ಆನಂದ ಅನುಭವಿಸುತ್ತಾ, ಮಧು ಚಪ್ಪರಿಸುವಂತೆ ಭಾವನಾಪರವಶಳಾಗಿ ನುಡಿಯುವುದನ್ನೇ ಮಂತ್ರ ಮುಗ್ಧಳಾಗಿ ನೋಡುತ್ತಿದ್ದ ಕೇಳುತ್ತಿದ್ದೆ.... ಆಹಾ! ಅಕ್ಕನದು ಎಂತಹ ಸಾರ್ಥಕ ಜೀವನ ಎಂದು ಆನಂದಿಸಿದೆ. ಓಹ್! ಅವಳ ಕೆನ್ನೆಗೆ ಅದೇನು ರಂಗು! ಮುಖವಂತೂ ಕೆಂಗುಲಾಬಿಯಂತೆ.... ಎಂತಹ ಸಂತೃಪ್ತ ಗೃಹಿಣಿ ನನ್ನಕ್ಕ....

ಕಂಡೂ ಕಾಣದಂತೆ ಅಸೂಯೆಯ ಅಲೆಯೊಂದು ಹೃದಯಾಂತರಂಗದಲ್ಲಿ ಎದ್ದದ್ದು ಸುಳ್ಳಲ್ಲ. ನನ್ನ ಮುಖವನ್ನೇ ಪರೀಕ್ಷಾತ್ಮಕ ಹಾಗೂ ತುಲನಾತ್ಮಕ ದೃಷ್ಟಿಯಿಂದ ನೋಡುತ್ತಿದ್ದ ನನ್ನಕ್ಕನಿಗೊಂದು ಬದಲು ನುಡಿಯಬೇಕಿತ್ತು. ಅಕ್ಕನಿಗೆ ನಿರಾಶೆಯುಂಟುಮಾಡುವ ಮನಸ್ಸಿಲ್ಲದೆ.

''ಅವರೇನು ಹೇಳಿದರೋ ನನಗೆ ನೆನಪಿಲ್ಲ ಅಕ್ಕ'' ಬಾರದ ನಾಚಿಕೆಯನ್ನು ನಟಿಸುತ್ತಾ ನನ್ನ ಮುಖಭಾವವನ್ನು ಮುಚ್ಚಿಡುವಂತೆ ತಲೆತಗ್ಗಿಸಿಕೊಂಡು ನುಡಿದೆ.

''ನೀನು ಬಲು ಜಾಣೆ.... ನನ್ನಂತೆ ಗುಟ್ಟು ಬಿಡುವವಳಲ್ಲ ಎಂದು ಸೀತೆ ನನ್ನ ಮುಖವನ್ನು ತನ್ನ ಕೈಯಿಂದ ಎತ್ತಿ ಹಿಡಿಯುವಾಗ ಎಲ್ಲಿ ಅಳು ಬಂದೀತೋ ಎಂಬ ಅಳುಕು ಬಲವಾಗಿ ಕಾಡುತ್ತಿತ್ತು.

''ಸುಮಿತ್ರತ್ತೆ ಯಾಕೋ ಬರಹೇಳಿದ್ದಾರೆ'' ಎಂದೊಂದು ನೆವ ಹೇಳಿ ಅಕ್ಕನ ಬಳಿಯಿಂದ ಜಾರಿಕೊಂಡಿದ್ದೆ.

ಮನಃಪಟಲದಲ್ಲಿ ಅಂದು ನನ್ನರಸನೊಂದಿಗೆ ನಡೆದ ಮಾತು-ಕತೆಗಳು ಅಲೆ ಅಲೆಯಾಗಿ ತೇಲಿಬರತೊಡಗಿದವು.

ಬೆಳಗಿನ ಸ್ನಾನ, ಪೂಜೆ, ತಿಂಡಿಗಳನ್ನೆಲ್ಲಾ ಮುಗಿಸಿ ನನ್ನಂತಃಪುರದಲ್ಲಿ ಏನೇನೋ ಹೊಂಗನಸುಗಳನ್ನು ಕಾಣುತ್ತಾ ಕಿಟಕಿಯ ತೆರೆಗಳನ್ನೆಲ್ಲಾ ಎಳೆದು ಸರಿಪಡಿಸುತ್ತಿದ್ದಾಗ... ನನ್ನ ಮನದಿನಿಯ ಬಂದಿದ್ದರು. ಹರ್ಷದ ಗುಂಗಿನಲ್ಲಿದ್ದ ನನ್ನನ್ನು ಗಮನಿಸಿ, ''ಏನು ಊರ್ಮಿಳ.... ಬಹಳ ಸಂತೋಷದಿಂದಿರುವಂತಿದೆ; ವಿಶೇಷವೇನಾದರೂ ನಡೆಯಿತೆ?'' ಎಂದು ಪ್ರಶ್ನಿಸಿದ್ದರು.

ನಾಚಿಕೆಯಿಂದ ತಲೆ ತಗ್ಗಿಸಿ ಬೆರಳಿನಿಂದ ನೆಲವನ್ನು ಕೆರೆಯುತ್ತಿದ್ದಾಗ ಬಹುಶಃ ನನ್ನ ಕೇಶಾಲಂಕಾರ ಅವರ ಕಣ್ಣಿಗೆ ಬಿದ್ದಿರಬೇಕು....

''ಓಹ್.... ಎಲ್ಲಿಯೋ ಹೋಗುವ ತಯಾರಿ ನಡೆದಂತಿದೆ....'' ಕುತೂಹಲವಿತ್ತು.

ನೇರವಾಗಿ ಅವರ ದೃಷ್ಟಿಯನ್ನೆದುರಿಸಲಾರದೆ ಮೆಲ್ಲನೆ ನುಡಿದಿದ್ದೆ. ''ತಮ್ಮ ಅಪ್ಪಣೆಯಿಲ್ಲದೆ ಎಲ್ಲಿಗೆ ಹೋಗುತ್ತೇನೆ ಆರ್ಯಪುತ್ರ.... ಇದೆಲ್ಲಾ.... ಈ ಅಲಂಕಾರವೆಲ್ಲಾ ತಮಗಾಗಿಯೆ.... ತಮ್ಮ ಹೃದಯವನ್ನು ಗೆದ್ದುಕೊಳ್ಳಲು....''

''ಹ್ಹ.... ಹ್ಹ.... ಹ್ಹ....'' ಜೋರಾಗಿ ನಗುತ್ತಾ ನನ್ನವರು ನುಡಿದದ್ದೇನು.

''ನನ್ನ ಹೃದಯವನ್ನಾಗಲೇ ಗೆದ್ದಿದ್ದಿ ಪ್ರಿಯೆ. ನೀನು ಬಹಳ ಗುಣಶೀಲೆ.... ಅತ್ಯಂತ ಶಾಂತ ಸ್ವಭಾವದ ನನ್ನ ರಾಣಿ ನನಗೆಂದೂ ಬಲು ಪ್ರಿಯ. ನನ್ನಂತಹ ಮುಂಗೋಪಿಗೆ ಸರಿಯಾದ ಹೆಣ್ಣು ನೀನು.''

ನನಗಂತೂ ಸಂತಸವನ್ನು ಹತ್ತಿಕ್ಕಲಾಗಲಿಲ್ಲ. ಅತಿ ಗಂಭೀರ ಸ್ವಭಾವದ ನನ್ನಿನಿಯ ನನ್ನನ್ನು ಪ್ರೀತಿಸುತ್ತಿದ್ದಾರೆನ್ನುವುದು, ನನ್ನನ್ನು ಮೆಚ್ಚಿಕೊಂಡಿದ್ದಾರೆನ್ನುವುದು ತಿಳಿದು ಕುಣಿದು, ಕುಪ್ಪಳಿಸುವಷ್ಟು ಖುಷಿಯಾಗಿತ್ತು. ಸಂತೋಷದ ಭರದಲ್ಲಿಯೇ ಮೆಲ್ಲನೆ ಮನದಿಂಗಿತವನ್ನು ಅರುಹಿದೆ.

''ಇಲ್ಲಿಯೇ ಕುಳಿತುಕೊಳ್ಳಿ ಆರ್ಯಪುತ್ರ.... ಒಂದಷ್ಟು ಹೊತ್ತು ಜೊತೆಯಲ್ಲಿ ಕುಳಿತು ಆನಂದವಾಗಿ ಮಾತನಾಡೋಣ.''

ಆಗ ಏನೋ ಬೆಚ್ಚಿ ಬಿದ್ದವರಂತೆ, ಕನಸಿನಿಂದ ವಾಸ್ತವಕ್ಕೆ ಬಂದವರಂತೆ ದಿಗ್ಗನೆದ್ದರು. ಅವರ ಮುಖಭಾವವೇ ಬದಲಾಗಿ ಹೋಯಿತು.

''ರಾಮಣ್ಣ ಅಯೋಧ್ಯೆಯನ್ನೆಲ್ಲಾ ಸುತ್ತು ಹಾಕುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದಾರೆ. ಅದಕ್ಕಾಗಿ ಬೆಳಿಗ್ಗೆಯೇ ತಯಾರಾಗಿ ಬಾ ಎಂದಿದ್ದರು....

ಇದೀಗ ಎಂತಹ ಅನರ್ಥವಾಗಿ ಬಿಡುತ್ತಿತ್ತು..... ಈಗಾಗಲೇ ತಡವಾಯಿತು. ಎಂದವರೇ ಹೊರಡಲನುವಾದರು.

ಬೇರೊಂದು ಲೋಕದಲ್ಲಿ ಓಲಾಡುತ್ತಿದ್ದ.... ಓಲಾಡಬೇಕೆಂದು ಬಯಸಿದ್ದ ಮನಸ್ಸು ಥಟ್ಟನೆ ವಾಸ್ತವಕ್ಕಿಳಿದಿತ್ತು. ಮುದುಡಿತ್ತು. ಬೆಚ್ಚಿತ್ತು.

ಆದರೂ ಅತಿ ನಿಧಾನವಾಗಿ ಪ್ರಶ್ನಿಸಿದ್ದೆ.

''ಯಾವಾಗಲೂ ನಿಮಗೆ ರಾಮಣ್ಣನವರಿದ್ದರಾಯಿತು. ಈ ಊರ್ಮಿಳೆಯ ನೆನಪೇ ಆಗುವುದಿಲ್ಲ ಅಲ್ಲವೆ?

ಅಬ್ಬ! ಅಷ್ಟು ಕೇಳಿದ್ದೇ ತಪ್ಪಾಗಿ ಹೋಯಿತು.

ಅವರ ಮುಖ ಕೋಪದಿಂದ ಕೆಂಪಾಗಿ, ಕಣ್ಣುಗಳು ಕೆಂಡದುಂಡೆಗಳಾದವು. ಗುಡುಗಿನಂತೆ ಗುಡುಗಿದರವರು.

''ನನಗೆ ರಾಮಣ್ಣನನ್ನು ಬಿಟ್ಟರೆ ಜೀವವೇ ಇಲ್ಲ. ನಮ್ಮಿಬ್ಬರ ಪ್ರೀತಿಗೆ ಯಾರೂ ಅಡ್ಡಬರಲಾರರು.... ನೀನೂ ಸಹ ಊರ್ಮಿಳ.... ನಿನ್ನ ಸ್ಥಾನವನ್ನು ನೀನು ಅರಿತರೆ ಒಳ್ಳೆಯದು. ನೀನು ಒಬ್ಬಳು ಸುಶಿಕ್ಷಿತ ರಾಜಕುಮಾರಿ ಎಂಬುದನ್ನು ಮರೆಯದಿರು. ಕೇವಲವಾಗಿ ನಡೆದುಕೊಂಡು ನಿನ್ನ ಘನತೆಗೆ ನೀನೇ ಮಸಿ ಹಚ್ಚದಿರು'' ಇಷ್ಟು ಹೇಳಿದವರೇ ಭರಭರನೆ ಬಿರುಗಾಳಿಯಂತೆ ಅಲ್ಲಿಂದ ನಡೆದಿದ್ದರು. ನನಗಂತೂ ಮುಖ ಭಂಗ, ತೇಜೋಭಂಗವಾದಂತಾಗಿ ಕಣ್ಣೀರು ತಡೆಯಿಲ್ಲದೆ ಸುರಿಯತೊಡಗಿತ್ತು.



ಇಷ್ಟಕ್ಕೂ ನಾನು ಮಾಡಿದ್ದ ತಪ್ಪಾದರೂ ಏನು? ತೀರಾ ಕೇವಲವಾಗಿ ನಡೆದುಕೊಂಡೆನೆ?

ಅವರ ದೃಷ್ಟಿಯಲ್ಲಿ ಅಷ್ಟು ನಿಕೃಷ್ಟವಾಗಿ ಬಿಟ್ಟೆನೆ? ಇದೇ ಅಲ್ಲವೆ.... ಶ್ರೀರಾಮ ಭಾವನವರಿಗೂ, ತನ್ನ ಲಕ್ಷ್ಮಣನಿಗೂ ಇರುವ ವ್ಯತ್ಯಾಸ.... ಹೀಗೆ ಹೋಲಿಸುವುದು ತಪ್ಪಿದ್ದೀತು..... ಆದರೆ ಇಂತಹ ಸಂದರ್ಭದಲ್ಲಿ ಮನಸ್ಸು ಹೀಗೆಲ್ಲಾ ತುಲನೆ ಮಾಡುವುದು ಸಹಜ ತಾನೆ? ಭಾವನವರಿಗೂ ತಮ್ಮನೆಂದರೆ ಮಿತಿಮೀರಿದ ಪ್ರೇಮ, ವಾತ್ಸಲ್ಯ.... ತಮ್ಮನನ್ನು ಬಿಟ್ಟು ಬಾಳೇ ಇಲ್ಲ ಎಂಬಂತೆ. ಆದರೆ ಸೀತಕ್ಕನನ್ನು ಅವರು ಅನುನಯಿಸುವ ಪ್ರೀತಿ, ಅಕ್ಕನ ಮೇಲೆ ತೋರುವ ಗೌರವ ಭಾವ.... ಉತ್ತಮ ಪತಿ ಹಾಗೆಯೇ ಇರಬೇಕಲ್ಲವೆ?

ಪತ್ನಿ ಹಾಗೆ ಬಯಸುವುದು ತಪ್ಪೆ? ತಮ್ಮನನ್ನು ಪ್ರಾಣಸಮಾನನೆಂದು ತಿಳಿದಿದ್ದರೂ ಸೀತಕ್ಕನಿಗೆ ಸರಿಯಾದ ಸ್ಥಾನವನ್ನೇ ಕೊಟ್ಟಿರುವರಲ್ಲ.... ಅವರಿಗೆ ಈಗ ಸೀತಕ್ಕನೂ ಪ್ರಾಣದ ಒಂದು ಭಾಗವೇ ಆಗಿಲ್ಲವೆ? ಆದರೆ ತನ್ನಿನಿಯನಾದರೋ.... ಹೀಗೆಲ್ಲಾ ಬಿರುನುಡಿದು.... ಕಟಕಿಯಾಡಿ.... ಛೇ! ತಮ್ಮ ಆಶಯ ಏನೇ ಇದ್ದರೂ ಹೀಗೇ ಮುಖಾಮುಖಿಯಾಗಿ ತನ್ನನ್ನು ಅವಮಾನಿಸಬಾರದಿತ್ತು. ನಾನೇಕೆ ಅವರ ಭ್ರಾತೃವಾತ್ಸಲ್ಯಕ್ಕೆ ಅಡ್ಡಿಯಾದೇನು? ನನಗೂ ಆ ಬಗ್ಗೆ ಹೆಮ್ಮೆ ಇರಲಿಲ್ಲವೆ? ಆದರ್ಶ ಭ್ರಾತೃವಾತ್ಸಲ್ಯ ಕಂಡು ನಾನು ಹರ್ಷಿಸದಿದ್ದೇನೆ?

ಕಿರುಹಳ್ಳಕ್ಕೆ, ಹೊಳೆಗೆ ಅಡ್ಡ ಕಟ್ಟಬಹುದು. ಆಳವಾದ, ವಿಸ್ತಾರವಾದ ಕಡಲಿಗೆ ತಡೆಯೊಡ್ಡಲಾದೀತೆ? ಅಷ್ಟೂ ತಿಳಿಯದವಳೇ ನಾನು! ನನ್ನ ಸ್ಥಾನ ನನಗೆ ಗೊತ್ತೇ ಇದೆ. ಆದರೂ.... ತುಟಿ ಮೀರಿ ಬಂದ ಒಂದು ಮಾತು.... ಅದೂ ತಮಾಷೆಗೆಂಬಂತೆ ನುಡಿದದ್ದೇ ಇಷ್ಟು ದೊಡ್ಡ ರಾದ್ಧಾಂತವಾಗಬೇಕೆ? ಏನು ಮಾಡುವುದು? ಅಕ್ಕ.... ನೀನು ನನ್ನನ್ನು ಸಹನೆಯ ಪ್ರತಿರೂಪವೆಂದಿದ್ದೆಯಲ್ಲವೆ.... ಇದೀಗ ನೋಡು ನನ್ನ ಸ್ಥಿತಿಯನ್ನು. ಸಹನೆ.... ಸಹನೆ ನನ್ನ ಪ್ರೀತಿಗೆ ಸಿಕ್ಕ ಉಡುಗೊರೆಗೆ ಸಂತಸಪಡಬೇಕೆ? ತಾಳ್ಮೆಯಿಂದಿರಬೇಕೆ? ಅಕ್ಕ.... ನಾನೂ ಈ ಮನೆಯ ಸೊಸೆಯಾಗಿ ಮನೆ ತುಂಬಿ ಬಂದೆ ನಿನ್ನಂತೆ.... ಆದರೆ.... ಆದರೆ...., ಪತಿಯ ಮನ ತುಂಬಲಾರದವಳಾದೆನೆ? ಅತ್ತೂ, ಅತ್ತೂ ಸಾಕಾಗಿ ಕೊನೆಗೆ ಕಣ್ಣೊರೆಸಿಕೊಂಡು ಮುಖ ತೊಳೆದುಕೊಂಡೆ. ಎದೆಯ ಕಿಚ್ಚನ್ನು ಬಚ್ಚಿಟ್ಟುಕೊಂಡು ನಗುವಿನ ಮುಖವಾಡ ಹಾಕಿಕೊಂಡು ಪೂಜಾ ಮಂದಿರದತ್ತ ಹೊರಟಿದ್ದೆ ಶಾಂತಿಯನ್ನು ಅರಸುತ್ತ.

ಅನಂತರ ಅಪ್ಪಿತಪ್ಪಿಯೂ ಆ ಬಗ್ಗೆ ನನ್ನವರಲ್ಲಿ ಆ ಪ್ರಸ್ತಾಪವನ್ನೆತ್ತಲಿಲ್ಲ. ನಿಜ ಹೇಳಬೇಕೆಂದರೆ ಹೇಗೆ ಮಾತನಾಡಲೂ ಭಯ, ಮೂಗಿನ ತುದಿಯಲ್ಲಿರುವ ಕೋಪ ಬುಸ್ಸೆಂದು ಯಾವಾಗ ಹೆಡೆಯಾಡಿಸುತ್ತದೋ ಬಲ್ಲವರಾರು? ಅವರಿಗೂ ನಂತರ ಕೆಡುಕೆನಿಸಿರಬೇಕು.

ಅಂದು ರಾತ್ರಿ ಅವರಾಡಿದ ಮಾತುಗಳಲ್ಲಿ ಆ ಭಾವನೆ ವ್ಯಕ್ತವಾಗಿತ್ತು. ''ನಾನು ನಿನ್ನನ್ನು ಮನಸಾರೆ ಪ್ರೀತಿಸುತ್ತೇನೆ ಊರ್ಮಿಳ.... ಆದರೆ ಅತ್ಯಂತ ಸಹನೆಯ, ಶಾಂತಿಯ ನೆಲೆಯಾಗಿರಬೇಕು ನೀನು. ನನ್ನ ಸ್ವಭಾವದ ಅರಿವು ನಿನಗಿಲ್ಲವೆ? ಅರಿತು ನಡೆದರೆ ಇಬ್ಬರಿಗೂ ಒಳ್ಳೆಯದು. ಅಬ್ಬ....! ಪ್ರೀತಿಯ ಅಭಿವ್ಯಕ್ತಿಯಲ್ಲಿಯೂ ಒಂದು ಶರತ್ತು. ಹೆಣ್ಣಿಗೆ ಈ ಕಟ್ಟಳೆ... ರೀತಿ.... ರಿವಾಜು ಎಲ್ಲಾ.... ಗಂಡಸರು ಹೇಗಿದ್ದರೂ ಪ್ರಶ್ನಿಸುವಂತಿಲ್ಲ. ಅದು ಪತಿವ್ರತಾ ಧರ್ಮಕ್ಕೇ ಕುಂದಿದ್ದಂತೆ. ನಾನು.... ನಾನು.... ತಾಳ್ಮೆಯ ಪ್ರತಿ ಮೂರ್ತಿಯಾಗಿರಬೇಕು.

ಆದರೂ ಆ ಕ್ಷಣದಲ್ಲಿ ಅವರಾಡಿದ ಮಾತಿನಿಂದ ಮನಸ್ಸು ಮುದಗೊಂಡಿತ್ತು. ಬೆಳಿಗ್ಗೆ ಕೋಪಿಸಿಕೊಂಡವರು ಇಷ್ಟು ಬೇಗ ಹೀಗೆ ಒಲವಿನ ಮಾತನಾಡುವರೆಂಬುದು ನನ್ನ ಕಲ್ಪನೆಗೂ ಎಟುಕದ ಸಂಗತಿ. ತುಸು ಹಗುರಾಗಿತ್ತು ಮನ. ಹೆಣ್ಣಾದ ನನ್ನದೇ ತಪ್ಪಿರಬಹುದೆಂದುಕೊಂಡು ಅದನ್ನೊಪ್ಪಿಕೊಳ್ಳಲು ನಿರ್ಧರಿಸಿದ್ದೆ.

''ಸ್ವಾಮಿ.... ಅಣ್ಣ-ತಮ್ಮಂದಿರ ಪ್ರೀತಿಗೆ ನಾನೆಂದೂ ಅಡ್ಡಬಾರೆನು. ಈ ಊರ್ಮಿಳ ಎಂದೆಂದೂ ತಮ್ಮ ಚರಣದಾಸಿ, ತಮ್ಮ ಮಾತಿಗೆ ನಾನೆಂದೂ ಎದುರಾಡೆನು'' ಅಂದೇ ನನ್ನ ವ್ಯಕ್ತಿತ್ವವಿದೆಯೆನ್ನುವುದನ್ನೇ ಮರೆತು ನನ್ನ ಸ್ವಾಮಿಗೆ ಅರ್ಪಿಸಿಕೊಂಡಿದ್ದಾಗಿತ್ತು. ಪತಿಗೆ ತಕ್ಕ ಸತಿಯಾಗಿ, ಪತಿವ್ರತೆಯಾಗಿ, ನಿಷ್ಕಳಂಕಿಯಾಗಿ ಏನೆಲ್ಲಾ ಕಷ್ಟ ಬಂದರೂ ತುಟಿಕಚ್ಚಿ ಸಹಿಸಬೇಕೆಂದು ಅಂದೇ ಪಣ ತೊಟ್ಟೆ.

ಯಾವಾಗಲೂ ಮಂದಸ್ಮಿತವದನೆಯಾಗಿ ಎಲ್ಲರ ಕಣ್ಮಣಿಯಾಗಿರುವ ಸೀತಕ್ಕ ನನ್ನೊಡನಿರುವಾಗ ನನಗೇಕೆ ಇಲ್ಲದ ಚಿಂತೆ ಎಂದು ಸಮಾಧಾನ ಪಟ್ಟುಕೊಂಡೆ.

### ಭಾಗ 3

ಪ್ರಜಾನುರಾಗಿಯಾಗಿ, ಸಕಲರ ಮನಗೆದ್ದ ದಿವ್ಯ ಗಂಭೀರ, ಶಾಂತ ಮೂರ್ತಿ ಶ್ರೀರಾಮಚಂದ್ರರ ಪಟ್ಟಾಭಿಷೇಕ-ಶ್ರೀಮನ್ನಾರಾಯಣ, ಲಕ್ಷ್ಮಿಯರಂತೆ ಅಕ್ಕ-ಭಾವಂದಿರು ನನ್ನ ಕಣ್ಣ ಮುಂದೆ ಸುಳಿಯುತ್ತಿದ್ದರು. ಅಕ್ಕನ ಭಾಗ್ಯಕ್ಕೆ ಮನ ನಲಿಯುತ್ತಿತ್ತು. ನಾನಾ ಬಗೆಯ ಹೊಂಗನಸುಗಳು. ಅಕ್ಕನನ್ನು ರೇಗಿಸಿದೆ, ನಗಿಸಿದೆ, ಕೆಣಕಿದೆ. ನನಗಂತೂ ಅತಿಯಾದ ಸಂಭ್ರಮ.

ಇದರಲ್ಲಿ ನನ್ನ ಸ್ವಾರ್ಥವೂ ಇಲ್ಲದಿರಲಿಲ್ಲ. ಅಣ್ಣ ಯುವರಾಜರಾದರೆ ತಮ್ಮ ಸದಾ ಪ್ರಸನ್ನರಾಗಿರುವುದರಲ್ಲಿ ಸಂಶಯವೇ ಇಲ್ಲ. ಆ ಅಣ್ಣನೂ ಎಲ್ಲಾ ವಿಷಯಗಳನ್ನೂ ತಮ್ಮನಿಗೆ ಹೇಳುತ್ತಾ.... ಕೇಳುತ್ತಾ.... ಒಟ್ಟಿನಲ್ಲಿ ಅಣ್ಣ-ತಮ್ಮಂದಿರು ಸಂತೋಷದಿಂದಿದ್ದರೆ ಆಗ ನಾವೂ ಸುಖವಾಗಿರಬಹುದು. ಯಾವಾಗಲೂ ಮುಖ ಬಿಗಿದುಕೊಂಡೇ ಇರುವ ನನ್ನವರು ಸುಪ್ರಸನ್ನರಾಗಿ, ಸಮಾಧಾನಚಿತ್ತದಿಂದ, ನಗುಮೊಗದಿಂದ ಇರುವುದನ್ನು ನೋಡುವುದೇ ಒಂದು ಸೊಬಗು.

ಅಂದು ರಾತ್ರಿಯಂತೂ ನನ್ನ ಪ್ರಭುವಿನ ಹರ್ಷ ಹೇಳತೀರದು, ''ನನ್ನ ರಾಮನಿಗೆ ನಾಳೆ ಪಟ್ಟಾಭಿಷೇಕ ಊರ್ಮಿಳ...., ಸಂತಸದಿಂದ ಹೃದಯ ತುಂಬಿ ಬರುತ್ತಿದೆ. ಹಸಿವು, ನೀರಡಿಕೆಗಳೊಂದೂ ಆಗದ ಮನಃಸ್ಥಿತಿ ನಾಳೆ ನನ್ನಣ್ಣನ ಉಡುಗೆ-ತೊಡುಗೆಗಳನ್ನೂ, ರೂಪ ವೇಷಗಳನ್ನೂ ಮನ ನೆನೆಯುತ್ತಿದೆ. ನಿನಗೂ ನಿನ್ನಕ್ಕನ ಭಾಗ್ಯವನ್ನು ಕಂಡು ಹಾಗೆಯೇ ಆಗಿರಬೇಕಲ್ಲವೆ?''

ಆಗ ನಾನು ಮರು ಪ್ರಶ್ನೆ ಹಾಕಿದ್ದೆ.

''ಇದೇನು ಕೇಳುವಿರಿ ಸ್ವಾಮಿ? ನನಗೆ ಇದಕ್ಕಿಂತ ಸಂತೋಷವಿದೆಯೆ? ಇದರಲ್ಲಿ ನನ್ನ ಸ್ವಾರ್ಥವೂ ಇಲ್ಲವೆ ಆರ್ಯಪುತ್ರ?''

ಏನು ಎಂಬಂತೆ ಅವರು ಹುಬ್ಬನ್ನು ಕೊಂಕಿಸಿ ಕೇಳಿದ್ದರು. ''ಶ್ರೀ ರಾಮಚಂದ್ರ ಭಾವನವರು ರವಿಯಂತಲ್ಲವೆ ಸ್ವಾಮಿ? ತಾವು ಆ ಸೂರ್ಯಪ್ರಕಾಶದಲ್ಲಿ ಅರಳುವ ಕಮಲದಂತೆ. ಆ ಅರಳಿದ ಹೂವು ನೋಡಲು ಎಂತಹ ಸೊಗಸಲ್ಲವೆ ಆರ್ಯಪುತ್ರ.... ಆಗ ಎಲ್ಲರಿಗೂ ಎಂತಹ ಸಂತೃಪ್ತಿ, ನೆಮ್ಮದಿ ಅಲ್ಲವೇ ದೊರೆ....'' ನನ್ನ ಉತ್ತರ ಅವರಿಗೆ ನಗು ತರಿಸಿತ್ತು.

ನನ್ನ ಮುಂಗುರುಳನ್ನು ಹಿಡಿಯುತ್ತಾ, ''ನನ್ನ ರಾಣಿ ಬಹಳ ಸೊಗಸಾಗಿ ಮಾಡನಾಡುತ್ತಿರುವಳಲ್ಲ. ಓಹ್.... ಈಗಾಗಲೇ ವೇಳೆ ಮೀರುತ್ತಿದೆ ಬೆಳಿಗ್ಗೆ ಬೇಗನೆ ಏಳಬೇಕು, ಇನ್ನು ನಿದ್ರಿಸೋಣವೆ?'' ಎಂದಿದ್ದರು ಪ್ರೀತಿಯಿಂದ ಓಲೈಸುತ್ತ.

### ಭಾಗ 4

ಮರುದಿನ ಆಘಾತ ಕಾದಿತ್ತು. ನಮ್ಮ ಕನಸುಗಳೆಲ್ಲಾ ತಾರು ಮಾರಾಗಿದ್ದವು. ನಾರುಡುಗೆ ತೊಟ್ಟು ಹದಿನಾಲ್ಕು ವರ್ಷ ವನವಾಸಕ್ಕೆ ಹೊರಟು ನಿಂತಿದ್ದರು ಭಾವನವರು. ಸೀತಕ್ಕನಿಗೆ ಎಷ್ಟೋ ಹೇಳಿದರವರು. 'ನೀನು ಸುಕುಮಾರಿ, ಅರಣ್ಯವಾಸ ಬೇಡ' ಎಂದು. ಧೈರ್ಯವಂತರೂ ಗದಗುಟ್ಟಿ ನಡುಗುವಂತೆ, ಕಾಡಿನ ವರ್ಣನೆಯನ್ನು ಮಾಡಿದರು ಪರಿಪರಿಯಾಗಿ. ಆದರೂ ಪತಿವ್ರತೆ ನನ್ನಕ್ಕ ಭಾವನವರ ಬಾಯಿಕಟ್ಟುವಂತೆ ಸತೀಧರ್ಮವನ್ನು ಬೋಧಿಸಿದಳಲ್ಲದೆ ತಾನೂ ನಾರುಡುಗೆಯಲ್ಲಿ ಪತಿಯ ಹಿಂದೆ ಹೊರಟು ನಿಂತಾಗ ಕರುಳು ಕಿತ್ತು ಬರುವಂತಾಗಿತ್ತು ನನಗೆ.

ಅಕ್ಕನ ಸ್ಥಿತಿಗಾಗಿ ಮರುಗುತ್ತಾ, ಕಣ್ಣೀರು ಸುರಿಸುತ್ತಾ ನಿಂತಿರುವಾಗ ಮತ್ತೊಂದು ಆಘಾತ ಕಾದಿತ್ತು. ನನ್ನವರೂ ಶ್ರೀರಾಮನೊಡನೆ ವನವಾಸಕ್ಕೆ ಹೊರಟು ನಿಂತಿದ್ದರು.

ಓ.... ದೇವರೇ.... ಈಗ ನಾನೇನು ಮಾಡಲಿ.... ಏನೆಂದು ಹೇಳಲಿ ನನ್ನ ಸಂಕಟವನ್ನು, ನನ್ನ ಕನಸಿನ ಅಯೋಧ್ಯೆಯಲ್ಲಿ ಶೋಕ ಸಾಗರವೇ ಮಡುಗಟ್ಟಿದೆ, ಆದರೂ ಎಲ್ಲೋ ಒಂದಿನಿತು ಸಮಾಧಾನ, ವಿಶ್ವಾಸ.... ಸುಮಿತ್ರತ್ತೆಯವರಾಗಲಿ, ಶ್ರೀರಾಮ ಭಾವನವರಾಗಲಿ ನನ್ನ ಪ್ರಭುವಿಗೆ ಅರಮನೆಯಲ್ಲಿಯೇ ಇರುವಂತೆ ಅಪ್ಪಣೆ ಕೊಡಬಹುದು. ಅರಮನೆಯಲ್ಲಿದ್ದರೂ ಅಣ್ಣನ ವಿಯೋಗದಲ್ಲಿ ನನ್ನ ಸ್ವಾಮಿಯ ಮುಖ ಹೇಗಿರಬಹುದೆಂದು ಕಲ್ಪಿಸಿಕೊಂಡರೇ ಭಯವಾಗುತ್ತದೆ. ಆದರೂ ಪ್ರಭುವಿಲ್ಲದೆ ನಾನಿರಬಲ್ಲೆನೆ.

ಅಥವಾ ನಾನೂ ನನ್ನಕ್ಕನಂತೆ ಅರಣ್ಯಕ್ಕೇ ಹೊರಟುಬಿಡಲೇ. ಇದೇ ಸರಿ.... ಕಾಡೇನು.... ಮೇಡೇನು... ಪತಿಯಿರುವಲ್ಲೇ ಪುಣ್ಯ ಸ್ಥಳವಲ್ಲವೆ ಸತಿಗೆ? ಹೌದು.... ನನ್ನ ಸ್ವಾಮಿಗೆ ನಾನು ಹಾಗೆಯೇ ಹೇಳಬೇಕು....

.... ಪತಿಯ ಕಷ್ಟಗಳಲ್ಲಿ ಸಹಭಾಗಿಯಾಗದ ಸತಿಯಿದ್ದರೇನು? ಬಿಟ್ಟರೇನು? ಈ ಅರಮನೆ, ಈ ವೈಭವ ಯಾರಿಗೆ ಬೇಕು?

ಆದರೆ ನನ್ನ ಸ್ವಾಮಿ ಲಕ್ಷ್ಮಣ ತಾವೊಬ್ಬರೇ ವನವಾಸಕ್ಕೆ ಸಿದ್ಧರಾಗುತ್ತಿದ್ದಾರಲ್ಲ.... ನನ್ನ ಅಂತಃಪುರಕ್ಕೆ ಬಾರದೆ ಹೋಗುವರೆ? ಅಂತಃಪುರಕ್ಕಾದರೂ ಒಮ್ಮೆ ಬಂದಿದ್ದರೆ ಏಕಾಂತದಲ್ಲಿ ಎಲ್ಲವನ್ನೂ ತಿಳಿಸಿ ಹೇಳಿ ನಾನೂ ಅವರ ಆಜ್ಞಾನುವರ್ತಿಯಾಗಿ ಹೊರಡಬಹುದಿತ್ತು.

ಆದರೆ.... ಈ ಸಂದರ್ಭದಲ್ಲಿ.... ಮಾವನವರು.... ಅತ್ತೆಯವರು ವಿಲಪಿಸುತ್ತಿರುವಾಗ ಅವರನ್ನು ಅಂತಃಪುರಕ್ಕೆ ಕರೆಯುವುದಾದರೂ ಹೇಗೆ? ಅಪಾರ್ಥ ಕಲ್ಪಿಸರೇ ಇವರೆಲ್ಲರೂ. ಹಿಂದೆ ಮುಂದೆ ನೋಡದೆ ನನ್ನ ಪ್ರಭು ಏನಾದರೂ ಗುಡುಗಿದರೆ.... ಮೊದಲೇ ದುಃಖದಿಂದ, ಕೋಪದಿಂದ ಮನಸ್ಸು ಬೆಂದುಹೋಗಿದೆ. ಓ.... ಭಗವಂತ.... ಈಗ ನಾನೇನು ಮಾಡಲಿ.... ಉದ್ವಿಗ್ನತೆಯಲ್ಲಿ ಬೆಂದುಹೋಗುತ್ತಿರುವೆನಲ್ಲ....

ನನ್ನಕ್ಕನಿಗಾದರೂ ನನ್ನಂತರಂಗ ತಿಳಿಯಬಾರದೆ? ಎಂದೆಂದಿಗೂ ನಿನ್ನೊಡನಿರುವೆ ಎಂದ ನನ್ನಕ್ಕ 'ನನ್ನನ್ನು ಮರೆತು ವನವಾಸಕ್ಕೆ ಸಿದ್ಧವಾಗಿರುವಳಲ್ಲ. ಸುಮ್ಮನಿರಲಾಗದೆ ಸ್ವಾಮಿಯ ಪಾದದ ಮೇಲೆ ಬಿದ್ದು ಬಿಕ್ಕಳಿಸತೊಡಗಿದೆ.

''ಸ್ವಾಮಿ, ಚರಣದಾಸಿಯನ್ನು ನಿಮ್ಮೊಂದಿಗೆ ಕರೆದುಕೊಂಡು ಹೋಗುವುದಿಲ್ಲವೆ? ನೀವಿಲ್ಲದೆ ನಾನಿಲ್ಲ.''

ದುಃಖದ ತೀವ್ರತೆಯಲ್ಲಿ ಹಣ್ಣಾಗಿದ್ದರವರು. ಅವರ ಕಣ್ಣುಗಳು ದುಃಖದಿಂದ, ಕೋಪದಿಂದ ಕಿರಿದಾಗಿ ಮೂಗಿನ ಹೊಳ್ಳೆಗಳು ಅದುರುತ್ತಿದ್ದವು. ಆದರೆ ಅತಿ ಮೆಲ್ಲನೆಯ, ದೃಢವಾದ ಸ್ವರದಲ್ಲಿ ನನ್ನವರು ಹೇಳಿದರು.

''ನೀನು ನನ್ನ ಹೆಮ್ಮೆಯ ಸತಿ ಊರ್ಮಿಳೆ... ದುಃಖದಿಂದ ಬೆಂದುಹೋಗಿರುವ ವಯಸ್ಸಾದ ತಾಯಿ-ತಂದೆಯರ ಹೊಣೆ ನಿನ್ನದು.... ನಿನ್ನ ಪ್ರಭು ಎಂದೆಂದೂ ನಿನ್ನ ಮನದಲ್ಲಿ, ನಿನ್ನ ಕರ್ತವ್ಯದಲ್ಲಿ, ನಿನ್ನ ನಡೆಯಲ್ಲಿ ಎಂಬುದನ್ನು ಮರೆಯದಿರು'' ನನ್ನ ಬಾಯಿ ಕಟ್ಟಿಸಿಬಿಟ್ಟರು ಎದುರಾಡದಂತೆ. ನನ್ನ ರೋದನಕ್ಕೆ ಅವರ ಕಲ್ಲು ಮನಸ್ಸು ಕರಗಲಿಲ್ಲ. ನನಗೆ ಹೊರಲಾರದ ಹೊರೆ ಹೊರಿಸಿದರು. ನನ್ನವರು ಮಾಡುತ್ತಿರುವುದು ಧರ್ಮಸಮ್ಮತವೆ? ನ್ಯಾಯ ಸಮ್ಮತವೆ? ಎಂಬ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯಿತು. ನನ್ನಕ್ಕನಿಗೊಂದು ಪತಿವ್ರತಾ ಧರ್ಮ, ನನಗೊಂದು ಸತೀಧರ್ಮ. ಆದರೆ ಹಾಗೆಂದು ನುಡಿಯಲಾದೀತೆ? ಅವರ ಮುಂಗೋಪವನ್ನು ಅರಿತೂ ಅಂತಹ ಸಾಹಸ ಮಾಡಲಾದೀತೆ? ಕಣ್ಣೀರು ತುಂಬಿದ ಮುಖದಿಂದ ನೀರವವಾಗಿ ನನ್ನಕ್ಕನತ್ತ, ಭಾವನವರತ್ತ, ಅತ್ತೆಯವರತ್ತ ದೃಷ್ಟಿ ಹಾಯಿಸಿದೆ..... ಇನ್ನೂ ಒಂದು ಆಶೆಯ ಎಳೆ.... ಉಹೂಂ.... ಎಲ್ಲಿಯೂ ನನಗೆ ಬೆಂಬಲ ಸಿಗಲಿಲ್ಲ. ಹೊರಟು ಬಿಟ್ಟರು ನನ್ನನ್ನು ಬಿಟ್ಟು.

ದುಃಖಾಗ್ನಿಯಲ್ಲಿ ಬೇಯುತ್ತಾ ನಾನು ಅರಮನೆಯ ಒಂದು ಮೂಲೆಯಲ್ಲಿ ನನ್ನವರಾರೂ ಇಲ್ಲದಂತೆ ಮೌನವಾಗಿ ರೋದಿಸಿದೆ. ಕೊನೆಯೇ ಇಲ್ಲದಂತೆ. ಎಷ್ಟು ಕಾಲ ಹಾಗಿರಲಾದೀತು!

ಅತ್ತೆಯವರು 'ಊರ್ಮಿಳಾ' ಎಂದು ಕರೆದಾಗ ನನ್ನ ದುಃಖವೆಲ್ಲವನ್ನೂ ಮರೆತು ನನ್ನ ಪ್ರಭುವಿನ ಆಣತಿಯಂತೆ ಅತ್ತೆಯರ ಸೇವೆಯಲ್ಲಿಯೇ ಹದಿಬದೆಯ ಧರ್ಮವನ್ನು ಕಂಡುಕೊಂಡೆ. ಭಣಗುಟ್ಟುವ ನನ್ನಂತಃಪುರವನ್ನು ನೋಡಿದರೇ ಹೃದಯ ಒಡೆದು ಚೂರಾಗುತ್ತಿತ್ತು. ನಲ್ಲನಿಲ್ಲದ ಅರಮನೆಯಲ್ಲಿ ಇರುವುದಕ್ಕಿಂತ ದೊಡ್ಡ ಶಿಕ್ಷೆ ಇದೆಯೆ? ವಿರಹ ವೇದನೆಯಲ್ಲಿ ಬಳಲಿ ಹೋಗುತ್ತಿದ್ದೇನೆ. ಓ.... ದೇವರೇ.... ಇಂತಹ ಕೊರಗು ಯಾರಿಗೂ ಬೇಡ.... ಹದಿನಾಲ್ಕು ವರ್ಷಗಳು.... ಆ ದೀರ್ಘ ಕಾಲ ಬಂದೀತೆ? ಅಲ್ಲಿಯವರೆಗೂ ಉಳಿಯುವೆನೆ ನಾನು....

ಇಲ್ಲ.... ಉರಿಯುವ ಹಣತೆಯಲ್ಲಿ ನನ್ನ ಸ್ವಾಮಿಯನ್ನು ಕಾಣಬೇಕು. ಹದಿನಾಲ್ಕು ವರ್ಷಗಳಪರ್ಯಂತವೂ ಆ ಜ್ಯೋತಿ ಉರಿಯುವಂತೆ ಕಾಯುತ್ತಿರಬೇಕು. ಮಾವ-ಅತ್ತೆಯರ ಶುಶ್ರೂಷೆಯಲ್ಲಿ, ಮಾಂಡವಿ-ಶ್ರುತಕೀರ್ತಿಯರ ಒಡನಾಟದಲ್ಲಿ ನನ್ನಿರವನ್ನು ಮರೆಯಬೇಕು. ಪ್ರಭುವನ್ನು ಕಾಣಬೇಕು. ಅಂತೆಯೇ ಸಂಕಲ್ಪ ಮನಸ್ಸಿನಲ್ಲಿ ಹೆರೆಯಾಯಿತು. ಕರ್ತವ್ಯದ ಕರೆಗೆ ಓಗೊಟ್ಟೆ. ಮನಸ್ಸು ಮಾಡಿದರೆ ಅಸಾಧ್ಯವಾವುದು?

ಆದರೂ ನನ್ನ ಭವಿಷ್ಯದೊಂದಿಗೆ ಚೆಲ್ಲಾಟವಾಡುವ ದುರ್ವಿಧಿ.... ಮಾವನವರ ಮರಣ.... ಅದೂ ಹಿರಿಯ ಮಕ್ಕಳ ಗೈರು ಹಾಜರಿಯಲ್ಲಿ.... ಎಲ್ಲೆಲ್ಲಿಯೂ ಶೋಕವೇ ಮೂರ್ತಿವೆತ್ತಂತೆ. ಅಬ್ಬ! ನನ್ನ ಕನಸಿನ ಆಯೋಧ್ಯೆಗೆ ಎಂತಹ ಗತಿ....

ದಿನಗಳುರುಳುತ್ತಿದ್ದವು ಬಹು ನಿಧಾನವಾಗಿ. ಮೇಲ್ನೋಟಕ್ಕೆ ನಾನು ಅತ್ಯಂತ ಶಾಂತ ಸ್ವರೂಪಳು. ಒಳಗೆ ಸುಡುವ ದಾವಾನಲ, ಹಗಲೂ-ರಾತ್ರಿ ಕಿತ್ತು ತಿನ್ನುವ ವಿರಹವೇದನೆ, ಒಮ್ಮೆಯಂತೂ ಕನಸಿನಲ್ಲಿ ನನ್ನ ಪ್ರಭು... ಕರೆದರೂ ಕೇಳದಂತೆ ಬಿಟ್ಟು ಹೋಗುತ್ತಿರುವ ನನ್ನ ಪ್ರಭು.... ಕೂಗಿಕೊಂಡ,

''ಅತ್ತೆಯವರೇ.... ನೀವೆಲ್ಲರೂ ನನಗೆ ಅನ್ಯಾಯ ಮಾಡುತ್ತಿದ್ದೀರಿ.... ನಿಮ್ಮ ಸೊಸೆಯ ಅಂತರಾಳವನ್ನು ಅರಿಯಿರಾ ನೀವು.... ನನ್ನನ್ನು ಕಳುಹಿಸಿಕೊಡಿ ನಿಮ್ಮ ಕಾಲಿಗೆ ಬೀಳುತ್ತೇನೆ.... ಅತ್ತೆ....''

ಯಾರದೋ ಹಿತವಾದ ಕರಗಳು ನನ್ನ ಹಣೆಯನ್ನು ಸ್ಪರ್ಶಿಸುತ್ತಿರುವುದರ ಅರಿವಾಗಿ ಕಣ್ಣು ಬಿಟ್ಟಾಗ ನಾಚಿಕೆಯಾಗಿತ್ತು. ನಾನು ಕನಸಿನಲ್ಲಿ ಬಡಬಡಿಸಿದ್ದನ್ನು ಸುಮಿತ್ರತ್ತೆ ಕೇಳಿಸಿಕೊಂಡರೆ? ಸುಪ್ತ ಮನ ಏನೆಲ್ಲಾ ಕಾರಿಕೊಂಡಿತ್ತೋ?

''ಜ್ವರ ಸುಡುತ್ತಿದೆ ಮಗು..... ಎಷ್ಟು ಹೊತ್ತಾದರೂ ನೀನು ಏಳಲಿಲ್ಲವೆಂದು ನೋಡಲು ಬಂದರೆ ಏನೇನೋ ಕನವರಿಸುತ್ತಿರುವೆ.... ವಿಪರೀತ ಜ್ವರ.... ನಿನ್ನ ದುಃಖ ನನಗರ್ಥವಾಗುತ್ತದೆ ಊರ್ಮಿಳೆ.... ನೀನು ಅಸಾಮಾನ್ಯಳು.... ಎಂತಹ ಸಂಕಟವನ್ನೂ ತಡೆದುಕೊಳ್ಳಬಲ್ಲೆಯೆಂಬ ಅರಿವು, ವಿಶ್ವಾಸ ನನಗಿದೆ. ನೀನು ಈ ದುಃಖವನ್ನು ನಮ್ಮೆಲ್ಲರಿಗಾಗಿ ಭರಿಸಲೇಬೇಕು, ಮಗಳೇ'' ಎಂದು ಸಂತೈಸುವಾಗ ಅತ್ತೆಯವರ ಮಡಿಲಲ್ಲಿ ಮುಖವಿಟ್ಟು ಎದೆ ಹಗುರವಾಗುವವರೆಗೂ ಬಿಕ್ಕಳಿಸಿದೆ.

''ಅತ್ತೆಯವರೇ.... ನೀವೆಲ್ಲರೂ ಮಿತಿಮೀರಿದ ಜವಾಬ್ದಾರಿಯನ್ನು ಹೊರೆಸಿ, ನನ್ನ ಆಶೆ-ಆಕಾಂಕ್ಷೆಗಳನ್ನು ಭಸ್ಮ ಮಾಡುತ್ತಿಲ್ಲವೆ?'' ಎಂಬ ಮಾತು ಗಂಟಲಲ್ಲೇ ಉಳಿಯಿತು.

ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ಹೃದಯ ಗಟ್ಟಿ ಮಾಡಿಕೊಂಡೆ. ಸಿಕ್ಕದ ಇರುವುದಕ್ಕಾಗಿ ಕೊರಗುತ್ತಾ ಕುಳಿತುಕೊಳ್ಳುವುದಕ್ಕಿಂತ ಬಂದದ್ದೆಲ್ಲಾ ಬರಲಿ, ನನ್ನ ಕರ್ತವ್ಯವೇ ನನ್ನನ್ನು ರಕ್ಷಿಸುತ್ತದೆ ಎಂಬ ತತ್ವಕ್ಕೆ ಅಂಟಿಕೊಂಡು ಕಾರ್ಯೋನ್ಮುಖಳಾದೆ. ಆಶೆಯ ಲಹರಿಯಲ್ಲಿ ಸಾಗಿ ಹಳೆಯದನ್ನು ನೆನೆನೆನೆದು ಕಂದಿ ಹೋಗುತ್ತಿದ್ದ ಮನಕ್ಕೆ ಕಡಿವಾಣ ಹಾಕಿದೆ. ಯಾವೊಂದು ಭಾವನೆಯೂ ಇಲ್ಲದೆ, ನಿರ್ಲಿಪ್ತಳಾಗಿ ನಿಮಿಷ, ಗಂಟೆ, ದಿನಗಳನ್ನೆಣಿಸುತ್ತಾ ಹದಿನಾಲ್ಕು ವರ್ಷ ಎಂದು ಮುಗಿಯುವುದೋ ಎಂದು ಮೌನ ಕಣ್ಣೀರ ಧಾರೆ ಹರಿಸುತ್ತಾ ದಿನ ನೂಕುತ್ತಿರುವೆ. ಆ ಸುದಿನ ಎಂದು ಬಂದೀತು! ನನ್ನ ನಿರೀಕ್ಷೆಗೆ, ಪ್ರತೀಕ್ಷೆಗೆ ಎಂದು ಕೊನೆ? ನನ್ನ ಆತ್ಮವಂಚನೆಗೆಂದು ಬಂದೀತು ಅಂತ್ಯ! ನನ್ನ ಪ್ರಭು! ನಿಮ್ಮ ಭಾತೃಪ್ರೇಮಕ್ಕಾಗಿ ನಿಮ್ಮ ಸತಿ ತೆತ್ತ ಬೆಲೆಯ ಅರಿವಿದೆಯಾ.... ನಿರೀಕ್ಷೆ.... ನಿರಂತರ ನಿರೀಕ್ಷೆ..... ನಿರೀಕ್ಷೆ..... ನಿರೀಕ್ಷೆ ■

---

**ಡೈರಿ ಹಾಲು ಹೆಚ್ಚು ಕಾಲ ಕೆಡದಂತೆ ಇರಲು ಜೆಂಟಾಮೈಸಿನ್ ಎಂಬ ಆಂಟಿ ಬಯಾಟಿಕ್ ಕೆಲವರು ಬಳಸುತ್ತಾರೆ. ಇದು ಹಾನಿಕಾರಕ ಎಂದು ನ್ಯಾಷನಲ್ ಇನ್‌ಸ್ಟಿಟ್ಯೂಷನ್ ಫಾರ್ ನ್ಯೂಟ್ರಿಷನ್ ವರದಿ ಮಾಡಿದೆ.**

**ದೆಹಲಿಯಲ್ಲಿ ಹಾಲಿನ ಕೆಲವು ಮಾದರಿಗಳ ಪರೀಕ್ಷೆ ನಡೆಸಿದಾಗ ಇದು ಪತ್ತೆಯಾಗಿದೆ. ಜೀವರಕ್ಷಕ ಬೆರೆತ ಹಾಲನ್ನು ದೀರ್ಘಕಾಲ ಸೇವಿಸಿದರೆ ಕರುಳಿನ ಸೂಕ್ಷ್ಮ ಜೀವಿಗಳು ಸಾಯುತ್ತವೆ. ಮೂತ್ರಪಿಂಡ ಕೂಡ ಧಕ್ಕೆಗೊಳ್ಳುತ್ತದೆ ಎಂದು ವರದಿ ಹೇಳಿದೆ.**

**ಕೆಲವರು ಹಾಲಿನಲ್ಲಿನ ಕೊಬ್ಬಿನಂಶ ಬೆರೆಯುವಂತೆ ಮಾಡಲು ಡಿಟರ್ಜೆಂಟ್ ಬಳಸುವುದೂ ಪತ್ತೆಯಾಗಿದೆ. ಇದರಿಂದ ಕರುಳಿನ ಕೋಶಗಳು ಹಾನಿಗೀಡಾಗುತ್ತವೆ. ಕೆಲವೆಡೆ ಮಕ್ಕಳಿಗಾಗಿ ತಯಾರಿಸುವ ಹಾಲಿನಲ್ಲೂ ಇಂಥ ಡಿಟರ್ಜೆಂಟ್ ಇದ್ದುದು ಪತ್ತೆಯಾಗಿದೆ.**

ಬೈಕ್ ಮತ್ತು ಸ್ಕೂಟರ್‌ಗಳೆಂದರೇ ಯುವ ಜನಾಂಗಕ್ಕೆ ರೋಮಾಂಚನ. ವಯಸ್ಸಾದವರಿಗೆ ಅದೊಂದು ಅನಿವಾರ್ಯ. ನಿತ್ಯ ನೂರಾರು ಬಗೆಯ ಜಾಹೀರಾತು, ತಮ್ಮ ವಾಹನವೇ ಶ್ರೇಷ್ಠ ಎಂದು ಪ್ರತಿ ಕಂಪೆನಿಯೂ ಕೂಗಿ ಹೇಳುತ್ತಾ ಪೈಪೋಟಿ ನಡೆಸುತ್ತಿದೆ. ಇವುಗಳ ಸತ್ಯಾಸತ್ಯತೆ ಏನು? ಕಂಪೆನಿಗಳು ಹೇಳುವುದೆಲ್ಲ ನಿಜವೇ! ಸುಳ್ಳೇ! ಎಂದು ನಿರ್ಧರಿಸಲಾಗದೇ ಗ್ರಾಹಕ ಗೊಂದಲಕ್ಕೆ ಬೀಳುತ್ತಾನೆ.



# ನಿಮಗೆಂಥ ಸ್ಕೂಟರ್ ಬೈಕ್ ಬೇಕು?

**ಈ**ಗಂತೂ ನಗರಗಳಲ್ಲಿ ಸಾರಿಗೆಯ ಅವ್ಯವಸ್ಥೆ ನಡುವೆ ದ್ವಿಚಕ್ರವಾಹನ ಖರೀದಿಸುವುದು ಅನಿವಾರ್ಯ ಎಂಬಂಥ ಸ್ಥಿತಿ. ಇಂಥ ಸ್ಥಿತಿಯಲ್ಲಿ ಸ್ಕೂಟರ್ ಖರೀದಿಸುವುದೋ! ಬೈಕ್ ಖರೀದಿಸುವುದೋ! ಅದರಲ್ಲಿ ಯಾವ ಬ್ರ್ಯಾಂಡಿನ ವಾಹನ ಖರೀದಿಸುವುದು? ಎಂಬೆಲ್ಲ ಪ್ರಶ್ನೆಗಳೂ ಸಹಜ.

ಒಂದು ಕಾಲಕ್ಕೆ ನಮ್ಮಲ್ಲಿ ಲ್ಯಾಂಬ್ರೆಟ್ಟಾ, ವೆಸ್ಪಾ ಸ್ಕೂಟರ್‌ಗಳು, ಬುಲೆಟ್ ಮತ್ತು ಯೆಜ್‌ಡಿ ಬೈಕುಗಳನ್ನು ಬಿಟ್ಟರೆ ಬೇರೆ ದ್ವಿಚಕ್ರ ವಾಹನಗಳೇ ಇರಲಿಲ್ಲ. ನಿಧಾನಕ್ಕೆ ಬಜಾಜ್, ಎಲ್.ಎಂ.ಎಲ್, ಟಿ.ವಿ.ಎಸ್, ಕೈನೆಟಿಕ್ ಮುಂತಾದ ಭಾರತೀಯ ತಯಾರಕರು ದ್ವಿಚಕ್ರ ವಾಹನ ತಯಾರಿಕೆಗೆ ಮುಂದಾದರು.

ಪರಿಸರ ಸ್ನೇಹಿ ವಾಹನಗಳಿಗೆ ಸಂಹಿತೆ ಒಂದನ್ನು ಯುರೋಪಿನಲ್ಲಿ ಜಾರಿಗೆ ತರಲಾಯಿತು. ಆನಂತರ ಭಾರತೀಯ ವಾಹನ ತಯಾರಕರು ಒಂದು ರೀತಿ ನಮ್ಮ ಗ್ರಾಹಕರಿಗೆ ಶಿಕ್ಷಣವನ್ನೇ ಆರಂಭಿಸಿದರು. ಇವತ್ತು ನಮ್ಮಲ್ಲಿ ಕಾರಿಗೆ ಪರ್ಯಾಯವಾದ ವಾಹನ ಎಂದರೆ ಸ್ಕೂಟರ್ ಅಥವಾ ಬೈಕ್. ಸ್ಕೂಟರ್‌ಗಳು ಹಣಕಾಸಿನ ನಿರ್ವಹಣೆ ಹಾಗೂ ಅನುಕೂಲದ ದೃಷ್ಟಿಯಿಂದ ಯೋಗ್ಯ. ಆದರೆ ವೇಗವಾಗಿ ಧಾವಿಸುವ, ಸ್ಟೈಲ್‌ಗಾಗಿ ವಾಹನ ಖರೀದಿಸುವ, ತಮ್ಮ ವ್ಯಕ್ತಿತ್ವದ ಮುದ್ರೆ ಒತ್ತಲು ಹಾತೊರೆಯುವ ಜನಕ್ಕೆ ಮೋಟಾರ್ ಬೈಕೇ ಸರಿ ಅನ್ನಿಸುತ್ತದೆ.

ಇವಲ್ಲದೇ ಸ್ಕೂಟರೆಟ್‌ಗಳು, ಮೊಪೆಡ್‌ಗಳೂ ಈಗ ಮಾರುಕಟ್ಟೆಯಲ್ಲಿ ಲಭ್ಯವಿವೆ. ಇಲ್ಲಿ ನೂರು ಸಿ.ಸಿ.ಗಿಂತ ಹೆಚ್ಚಿನ ಶಕ್ತಿಯ ಬೈಕ್, ಸ್ಕೂಟರ್‌ಗಳು ಮುಖ್ಯ ಗುಣಗಳನ್ನು ಕೊಡಲಾಗಿದೆ. ಇದರಿಂದ ವಾಹನದ ಆಯ್ಕೆ ಅವರವರ ಅಗತ್ಯಕ್ಕೆ ತಕ್ಕಂತೆ ಮಾಡುವುದು ಸುಲಭ.

### ಎಂಜಿನ್ ಸಾಮರ್ಥ್ಯ

ಇದನ್ನು ಸಾಮಾನ್ಯವಾಗಿ ಸಿ.ಸಿ. ಎನ್ನುತ್ತಾರೆ. ಸಿ.ಸಿ. ಎಂದರೆ ಕ್ಯೂಬಿಕ್ ಸೆಂಟಿಮೀಟರ್. ಸಾಮಾನ್ಯವಾಗಿ ಸ್ಕೂಟರ್‌ಗಳ ಸಾಮರ್ಥ್ಯ 150 ಸಿ.ಸಿ., ಬೈಕುಗಳು ನೂರರಿಂದ ಮುನ್ನೂರೈವತ್ತು ಸಿ.ಸಿ. ಸಾಮರ್ಥ್ಯ ಹೊಂದಿರುತ್ತವೆ. ನೂರು ಸಿ.ಸಿ. ಎಂದರೆ ಎಂಜಿನ್‌ನ ಸಿಲಿಂಡರ್ ಒಂದು ಸಲ ಮೇಲಕ್ಕೋ, ಕೆಳಕ್ಕೋ ಆಡಿದಾಗ ನೂರು ಕ್ಯೂಬಿಕ್ ಸೆಂಟಿಮೀಟರ್‌ಗಳಷ್ಟು ಅನಿಲವನ್ನು ಹೊರತಳ್ಳಬಲ್ಲದು. ಸಾಮಾನ್ಯವಾಗಿ ಎಂಜಿನ್‌ನ ಈ ಸಾಮರ್ಥ್ಯವೇ ಆಯಾ ವಾಹನದ ಸಾಮರ್ಥ್ಯದ ಅಳತೆಗೋಲು. ಈ ವಾದ ಸೈದ್ಧಾಂತಿಕವಾಗಿ ನಿಜ. ನೂರು ಸಿ.ಸಿ.ಯ ಬೈಕು, 150 ಸಿಸಿಯ ಸ್ಕೂಟರ್‌ಗಿಂತ ಹೆಚ್ಚು ಶಕ್ತಿಶಾಲಿಯಾಗಿರುವುದು ನಾವು ಕಣ್ಣಾರೆ ನೋಡುತ್ತಾ ಇದ್ದೇವೆ. ಹೀಗಾಗಿ ವಾಹನದ ಸಾಮರ್ಥ್ಯ ಸರಿಯಾಗಿ ತಿಳಿದೇ ಅದರ ಖರೀದಿಗೆ ಮುಂದಾಗುವುದು ಒಳ್ಳೆಯದು. ಬೈಕ್‌ಗಳು ನೂರರಿಂದ ಮುನ್ನೂರೈವತ್ತು ಸಿಸಿ ಸಾಮರ್ಥ್ಯದವು. ಎನ್‌ಫೀಲ್ಡ್ ತಯಾರಕರು ಸಾವಿರ ಸಿ.ಸಿ.ಸಾಮರ್ಥ್ಯದ ಬೈಕನ್ನೂ ತಯಾರಿಸುತ್ತಾರೆ.

### ಸರಾಸರಿ ಇಂಧನ ಬಳಕೆ

ಸಾಮಾನ್ಯವಾಗಿ ಒಂದು ನಿರ್ದಿಷ್ಟ ಅಂತರ ಕ್ರಮಿಸಲು ವಾಹನ ಬಳಸುವ ಇಂಧನದ ಸರಾಸರಿ ಇಲ್ಲಿ ಪರಿಗಣಿಸಲಾಗುತ್ತದೆ. ಇಂಥ ಸರಾಸರಿ ವಾಹನದ ಎಂಜಿನ್, ಅದರ ರಚನೆ ಅಲ್ಲದೆ ಬಳಸುವ ರಸ್ತೆ, ಇಂಧನ, ಆಯಿಲ್ ಮುಂತಾದವನ್ನು ಅವಲಂಬಿಸಿರುತ್ತದೆ. ಸಾಮಾನ್ಯವಾಗಿ ಸ್ಕೂಟರ್‌ಗಳು ಒಂದು ಲೀಟರ್‌ಗೆ 50ರಿಂದ 60 ಕಿ.ಮೀಟರ್ ಕ್ರಮಿಸಬಲ್ಲವು. ಹಾಗೆಂದು ಎಲ್ಲ ಸ್ಕೂಟರ್‌ಗಳೂ ಈ ಮಾನಕಕ್ಕೆ ಒಗ್ಗುತ್ತವೆ ಎಂದೇನೂ ಇಲ್ಲ. ಅದೇ ರೀತಿ ಸರಿಸುಮಾರಾಗಿ ನೂರು ಸಿ.ಸಿ.ಯ ಬೈಕುಗಳು 60 ರಿಂದ 85 ಕಿ.ಮೀ ದೂರ ಒಂದು ಲೀಟರ್ ಇಂಧನದಿಂದ ಕ್ರಮಿಸಬಲ್ಲವು. ಅದೇ 300 - 350 ಸಿಸಿ ಬೈಕುಗಳ ಇಂಧನ ಪೂರೈಸಲು ನಿಮ್ಮ ಜೇಬು ತೀರಾ ಗಟ್ಟಿ ಇರಬೇಕು. ಅವೆಲ್ಲ ಲೀಟರ್‌ಗೆ 20 ರಿಂದ 35 ಕಿ.ಮೀ ಕ್ರಮಿಸಿದರೆ ಹೆಚ್ಚು.

### ಟೂಸ್ಟ್ರೋಕ್ / ಫೋರ್‌ಸ್ಟ್ರೋಕ್ ಎಂಜಿನ್

ಯುರೋಪಿನ ಮಾನಕ ಎರಡು ಸ್ಟ್ರೋಕ್ ಎಂಜಿನ್‌ಗಿಂತ ನಾಲ್ಕು ಸ್ಟ್ರೋಕ್ ಎಂಜಿನ್‌ನ ವಾಹನಗಳ ಇಂಧನ ಕ್ಷಮತೆ ಹೆಚ್ಚು ಎಂದು ಹೇಳುತ್ತದೆ. ಈ ಮಾನಕ

ಬರುವ ಏಪ್ರಿಲ್‌ನಿಂದ ಜಾರಿಯಾಗಲಿದೆ. ಹಾಗಾಗಿ ಹಂತ ಹಂತವಾಗಿ ಎರಡು ಸ್ಟ್ರೋಕ್ ಎಂಜಿನ್‌ಗಳ ಬದಲು ನಾಲ್ಕು ಸ್ಟ್ರೋಕ್ ಎಂಜಿನ್ ವಾಹನಗಳು ಬಳಕೆಗೆ ಬರುತ್ತವೆ. ನಮ್ಮಲ್ಲಿನ ಬಜಾಜ್ ವಾಹನ ತಯಾರಿಕಾ ಕಂಪೆನಿ ತಾನು 2000ದ ಹೊತ್ತಿಗೆ ಬರೀ ನಾಲ್ಕು ಸ್ಟ್ರೋಕ್ ಎಂಜಿನ್ ವಾಹನಗಳನ್ನು ಉತ್ಪಾದಿಸುವುದಾಗಿ ಸಾರಿದೆ. ಹಾಗೆಂದು ಈಗ ಬಳಕೆಯಲ್ಲಿರುವ ಹಳೆ ಮಾದರಿ ವಾಹನಗಳು ನಿರುಪಯುಕ್ತ ಎಂದೇನೂ ಅಲ್ಲ. ಈ ವಾಹನಗಳು ವಿನ್ಯಾಸಗೊಳಿಸಿ, ತಯಾರಿಸುವುದು ಹಾಗೂ ನಿರ್ವಹಣೆ ತೀರಾ ಸುಲಭ. ಎಂಜಿನ್‌ನಲ್ಲಿ ಚಲಿಸುವ ಬಿಡಿ ಭಾಗಗಳು ಕಡಿಮೆ ಇರುವುದರಿಂದ ಸರ್ವೀಸಿಂಗ್ ಕೂಡ ಸುಲಭ.

ಆದರೆ ತೊಂದರೆ ಎಂದರೆ, ಇಂಥವರ ಶೇಕಡಾ 60ರಷ್ಟು ಮಾತ್ರ ಶಕ್ತಿ ಉತ್ಪಾದನೆಗೆ ಬಳಕೆಯಾಗುತ್ತದೆ. ಅಲ್ಲದೆ ಇದರಿಂದ ಹೊಮ್ಮುವ ಮಾಲಿನ್ಯಕಾರಕ ಹೊಗೆಯಲ್ಲಿ ಕಾರ್ಬನ್ ಮಾನಾಕ್ಸೈಡ್ ಪ್ರಮಾಣ ಹೆಚ್ಚು.

ನಾಲ್ಕು ಸ್ಟ್ರೋಕ್ ಎಂಜಿನ್‌ಗಳಲ್ಲಿ ಇಂಧನದ ಶೇಕಡಾ 80 ರಷ್ಟು ಶಕ್ತಿ ಉತ್ಪಾದನೆಗೆ ಬಳಕೆ ಆಗುತ್ತದೆ. ಹಾಗಾಗಿ ಕಾರ್ಯಕ್ಷಮತೆ ಹೆಚ್ಚು ಇಂಧನ ಹೆಚ್ಚಾಗಿ ಶಕ್ತಿ ಉತ್ಪಾದನೆಗೇ ಬಳಕೆ ಆಗುವುದರಿಂದ ವಾಯು ಮಾಲಿನ್ಯದ ಪ್ರಮಾಣ ಕಡಿಮೆ. ಆದರೆ ಎಂಜಿನ್‌ನಲ್ಲಿ ಚಲಿಸುವ ಭಾಗಗಳು ಹೆಚ್ಚಾಗಿ ಇರುವುದರಿಂದ ನಿರ್ವಹಣೆ, ಸರ್ವೀಸಿಂಗ್ ಹೆಚ್ಚು ದುಬಾರಿ.

**ಪಿಕ್ ಅಪ್**

ಸ್ಟಾರ್ಟ್ ಮಾಡುತ್ತಿದ್ದಂತೆ ಅಪಾರ ವೇಗದಲ್ಲಿ ಧಾವಿಸುವುದು ವಾಹನದ ಸವಾರರಿಗೆ ತೀರಾ ಖುಷಿಯ ಸಂಗತಿ. ಆದರೆ ಇದರಿಂದಾಗಿ ವಾಹನ ಶಕ್ತಿ ವರ್ಧನೆಗೇ ಹೆಚ್ಚು ಇಂಧನ ಬಳಸುವುದರಿಂದ ಸರಾಸರಿ ಕಡಿಮೆ ಆಗುವುದು ಸಹಜ. ಯಮಾಹಾ ಮೋಟಾರ್ ಬೈಕ್‌ನಲ್ಲಿ ಪಿಕ್ ಅಪ್ ಜಾಸ್ತಿ. ಆದರೆ ಇಂಥ ಪಿಕ್ ಅಪ್ ಇಲ್ಲದ ಹೀರೋ ಹೋಂಡಾಗಿಂತ ಯಮಾಹಾ ಬೈಕ್‌ನ ಮೈಲೇಜು ಕಡಿಮೆ ಆಗಲು ಇದೇ ಪ್ರಮುಖ ಕಾರಣ.

**ಆಟೋ ಸ್ಟಾರ್ಟರ್**

ವಾಹನದಲ್ಲಿ ಆಟೋ ಸ್ಟಾರ್ಟರ್ ಇರುವುದು ಮಹಿಳೆಯರಿಗೆ, ವಯಸ್ಸಾದವರಿಗೆ ಹೆಚ್ಚು ಅನುಕೂಲ. ಅದರಲ್ಲೂ ಬೆನ್ನು ನೋವು ಇರುವವರಿಗೆ ಇದೊಂದು ವರದಾನ. ಇಂಥ ಸೌಲಭ್ಯ ಇದ್ದಲ್ಲಿ ಬ್ಯಾಟರಿ ನಿರ್ವಹಣೆಗೆ ಹೆಚ್ಚು ಖರ್ಚು ಮಾಡಬೇಕು. ಒಂದು ಬ್ಯಾಟರಿ ಸುಮಾರಾಗಿ ಎರಡು ವರ್ಷ ಬರುತ್ತದೆ. ಕೈನೆಟಿಕ್ ಹೋಂಡಾದಲ್ಲಿ ಮೊದಲ ಬಾರಿಗೆ ನಮ್ಮಲ್ಲಿ ಆಟೋ ಸ್ಟಾರ್ಟರ್ ಅಳವಡಿಸಿ ಜನಪ್ರಿಯಗೊಳಿಸಲಾಯಿತು(ಮೊದಲು ಆಟೋ ಸ್ಟಾರ್ಟರ್ ಅಳವಡಿಸಿದ್ದು ಸ್ಪೋರ್ಟಿಫ್ ಎಂಬ ಮೊಪೆಡ್‌ಗೆ. ಆದರೆ ಈಗ ಅದರ ತಯಾರಿಕೆ ಆಗುತ್ತಿಲ್ಲ) ಈಗ ಬಜಾಜ್ ಮತ್ತು ಎಲ್.ಎಂ.ಎಲ್ ಕಂಪೆನಿಗಳು ಕೆಲವು ವಾಹನಗಳಲ್ಲಿ ಈ ಸವಲತ್ತು ಕಲ್ಪಿಸಿವೆ.

**ವೀಲ್ ಬೇಸ್**

ಮುಂದಿನ ಚಕ್ರದ ಮಧ್ಯದಿಂದ ಹಿಂದಿನ ಚಕ್ರದ ಮಧ್ಯದವರೆಗಿನ ಅಂತರವನ್ನು ವೀಲ್‌ಬೇಸ್ ಎನ್ನುತ್ತಾರೆ. ಇದು ಹೆಚ್ಚು ಇದ್ದಷ್ಟೂ ವಾಹನ ಚಾಲನೆ ಮತ್ತು ತಿರುವುಗಳಲ್ಲಿ ಸಾಗುವುದು ಹೆಚ್ಚು ಸುರಕ್ಷಿತ. ಹೆಚ್ಚಿನ ವೀಲ್ ಬೇಸ್ ಇರುವ ವಾಹನದ ಗುರುತ್ವಾಕರ್ಷಣೆ ಕಡಿಮೆ ಇದ್ದು ವಾಹನ ಸ್ಕಿಡ್ ಆಗುವುದು ಅಪರೂಪ. ಸ್ಕೂಟರ್‌ಗಳಿಗಿಂತ ಬೈಕ್‌ಗಳ ವೀಲ್ ಬೇಸ್ ಜಾಸ್ತಿ ಇರುತ್ತದೆ.

**ಗ್ರೌಂಡ್ ಕ್ಲಿಯರೆನ್ಸ್ :**

ಎತ್ತರದ ದಿಬ್ಬಗಳನ್ನು ದಾಟಬಹುದಾದ ಸಾಮರ್ಥ್ಯಕ್ಕೆ ಗ್ರೌಂಡ್ ಕ್ಲಿಯರೆನ್ಸ್ ಎನ್ನುತ್ತಾರೆ. ಎತ್ತರದ ರಸ್ತೆಯ ಉಬ್ಬು ವಾಹನದ ಮುಂದಿನ ಗಾಲಿ ಏರುವಾಗ ವಾಹನದ ಮಧ್ಯಭಾಗ ನೆಲ ಮುಟ್ಟುವುದಾದರೆ ಅದು ಹೆಚ್ಚು ಗ್ರೌಂಡ್ ಕ್ಲಿಯರೆನ್ಸ್ ಇಲ್ಲದ ವಾಹನ. ಕೈನೆಟಿಕ್ ಹೋಂಡಾದಲ್ಲಿ ಇಂಥ ದೋಷವಿದೆ.

ಇವು ಸಾಮಾನ್ಯವಾಗಿ ಗಮನದಲ್ಲಿ ಇರಿಸಿಕೊಳ್ಳಬೇಕಾದ ದ್ವಿಚಕ್ರ ವಾಹನದ ತಾಂತ್ರಿಕ ಅಂಶಗಳು. ಇವುಗಳನ್ನು ಆಧರಿಸಿ, ಅವರವರ ಅನುಕೂಲಕ್ಕೆ ತಕ್ಕ ವಾಹನ ಆಯ್ದುಕೊಳ್ಳಬಹುದು.

■ ವಿನ್ಯಾಸ್

---

ಗೃಹಿಣಿ : ನಿನಗಿಂತ ಹಸುವಾಸಿ. ಅದು ಒಳ್ಳೇ ಹಾಲುಕೊಡುತ್ತೆ. ನೀರುಗೀರು ಬೆರೆಸೋ ಪ್ರಶ್ನೇನೇ ಇಲ್ಲ.

ಹಾಲಿನವಳು : ಅದೇನೋ ಸರಿಕಣ್ರವ್ವ. ಆದರೆ ನನ್ನ ಹಂಗೆ ಅದು ಕೇಳಿಕೇಳಿದಾಗೆಲ್ಲ, ಕೇಳಿದಷ್ಟು ಹಾಲು ಕೊಡುತ್ತಾ?

★

ಪತ್ನಿ : ಅವರು ನೋಡಿ. ಎಷ್ಟು ಅನ್ಯೋನ್ಯವಾಗಿದಾರೆ. ಆತ ಪ್ರತಿದಿನ ಆಕೆಗೆ ಹೂ ತಂದು ಮುಡಿಸ್ತಾನೆ. ನೀವು ಹಾಗೆ ಮಾಡೋಕೆ ಏನು?

ಪತಿ : ಮಾಡಬಹುದು. ಆದರೆ ಅವಳ ಗಂಡ ಸುಮ್ನೆ ಇರ್‍ತಾನೇನೇ?

ನಿರ್ದೇಶಕ : ನೀವೀಗ ಮೂರನೇ ಮಹಡಿಯಿಂದ ಕೆಳಗೆ ಹಾರಬೇಕು.

ನಟ : ಏನಾದರೂ ಅಪಾಯ ಆದರೆ.

ನಿರ್ದೇಶಕ : ಭಯಪಟ್ಟುಕೋಬೇಡಿ. ಇದೇ ಸಿನಿಮಾದ ಕೊನೇ ದೃಶ್ಯ.

# ಅಫಘಾನಿಸ್ತಾನ

## ಬದಲಾದ ಚಿತ್ರ



ಅಫಘಾನಿಸ್ತಾನ ಈಗ ಮೊದಲಂತೆ ಇಲ್ಲ. ತಾಲಿಬಾನ್‌ಗಳು ಅಧಿಕಾರ ಹಿಡಿದ ಮೇಲೆ ಎಲ್ಲ ಬದಲಾಗಿದೆ. ಅವರ ಕಟ್ಟಾ ಸಂಪ್ರದಾಯವಾದ ತೀವ್ರ ಪರಿಣಾಮ ಬೀರಿರುವುದು ಮಹಿಳೆಯರ ಮೇಲೆ ಅವರೀಗ ಮನೆ ಬಿಟ್ಟು ಹೊರಟರೆ ಬುರ್ಖಾ ಧರಿಸಲೇ ಬೇಕು. ಹೊರಗೆಲ್ಲೂ ದುಡಿಯುವಂತಿಲ್ಲ. ಸೈನಿಕ ಹೋರಾಟದಲ್ಲಿ ಎಷ್ಟೋ ಜನ ಮಡಿದಿದ್ದಾರೆ. ವಿಧವೆಯರಾದ ಅವರ ಪತ್ನಿಯರು ಕೆಲಸವೂ ಇಲ್ಲದೆ, ತಮ್ಮನ್ನು ಅವಲಂಬಿಸಿದ ಮಕ್ಕಳನ್ನು ಸಾಕಬೇಕಾದ ದುರ್ಭರ ಪರಿಸ್ಥಿತಿ.

ಅಲ್ಲಿನ ಮಹಿಳೆಯರನ್ನು ಮಾತಾಡಿಸಿದರೆ ಸಾಕು. ಅವರ ಕಣ್ಣೀರು ಕೋಡಿ ಹರಿಯುತ್ತದೆ. ತಮ್ಮ ನರಕ ಸದೃಶ ಜೀವನದ ಬಗ್ಗೆ ಬಾಯಿಬಿಟ್ಟು ಹೇಳಲೂ ಸಾಧ್ಯವಾಗದೆ ಮೂಕರಾಗುತ್ತಾರೆ. 'ತಾಲಿಬಾನ್' ಎಂದರೆ ವಿದ್ವಾಂಸರು ಅಥವಾ ವಿದ್ಯಾರ್ಥಿಗಳು ಎಂದರ್ಥ. ಅಫ್ಘನಿಸ್ತಾನದಲ್ಲಿ ಅಧಿಕಾರ ಹಿಡಿದಿರುವ ತಾಲಿಬಾನ್‌ಗಳು ಇದಕ್ಕೆ ತದ್ವಿರುದ್ಧವಾಗಿಯೇ ನಡೆದುಕೊಳ್ಳುತ್ತಿದ್ದಾರೆ. 1959ರಲ್ಲಿ ಜಾರಿಯಲ್ಲಿದ್ದ ಬುರ್ಖಾ ಪದ್ಧತಿಯನ್ನು ಅವರು ಅಧಿಕಾರಕ್ಕೆ ಬಂದ ಕೂಡಲೇ ಜಾರಿಗೆ ತಂದರು.

ಆನಂತರ ಮತ್ತೊಂದು ಫರ್ಮಾನು ಹೊರಟಿತು. ಹೆಂಸಗರು ಮನೆಯಿಂದಾಚೆ ದುಡಿಯುವಂತಿಲ್ಲ. ಗಂಡನನ್ನು ಯುದ್ಧದಲ್ಲಿ ಕಳೆದುಕೊಂಡಿದ್ದ 32 ವರ್ಷ ಮಹಿಳೆಯೊಬ್ಬರು ಶಾಲಾ ಶಿಕ್ಷಕರಾಗಿ ದುಡಿಯುತ್ತಾ ಇದ್ದರು. ಹೊಸ ಫರ್ಮಾನ್‌ನಿಂದಾಗಿ ಅವರು ಕೆಲಸ ಕಳೆದುಕೊಂಡರು. ಶಾಲೆ ಕೊಟ್ಟಿದ್ದ ಮನೆ ಬಿಟ್ಟು, ಹನ್ನೆರಡು ವರ್ಷದ ಮಗನನ್ನೂ ಕಟ್ಟಿಕೊಂಡು ಅವರು ತಂದೆಯ ಮನೆ ಸೇರಬೇಕಾಯಿತು. ಅಲ್ಲಿ ಮೊದಲೇ ಇಕ್ಕಟ್ಟು. ಅದರಲ್ಲಿ ಇವರೂ ಜಾಗ ಮಾಡಿಕೊಂಡು ಇರಬೇಕಾಯಿತು. ಸಂಬಳ ಕೂಡ ನಿಂತು, ಆಹಾರಕ್ಕಾಗಿ ಮನೆಯಲ್ಲಿ ಇದ್ದ ವಸ್ತುಗಳನ್ನು ಮಾರಿ ಜೀವಿಸಬೇಕಾಯಿತು.

ಒಂದು ಸಲ ಏನೋ ಬಾಕಿ ಉಳಿದಿದ್ದ ಕೆಲಸ ಮುಗಿಸಲೆಂದು ತಾವು ಮೊದಲು ದುಡಿಯುತ್ತಾ ಇದ್ದ ಶಾಲೆಗೆ ಹೋದರು. ಅವರನ್ನೇ ಹಿಂಬಾಲಿಸಿ ಬಂದ ತಾಲಿಬಾನ್ ತರುಣನೊಬ್ಬ, ಕೆಲಸ ಮುಗಿಸಿ ಮನೆಗೆ ಮರುಳುತ್ತಿದ್ದವರನ್ನು ಅಡ್ಡಗಟ್ಟಿ ಇನ್ನೊಮ್ಮೆ ಇತ್ತ ತಲೆ ಹಾಕಿದರೆ ಕಾಲು ಕತ್ತರಿಸುವುದಾಗಿ ಬೆದರಿಕೆ ಹಾಕಿದ.

ಅದು ಕೇವಲ ಬಾಯಿಮಾತಿನ ಬೆದರಿಕೆ ಅಲ್ಲ. ಅವರೆಲ್ಲ ಹೃದಯವೇ ಇಲ್ಲದ ಕಟುಕರು. ಹೇಳಿದಂತೆಯೇ ಮಾಡಿಬಿಡುತ್ತಾರೆ ಎನ್ನುತ್ತಾರೆ. ಆ ಮಹಿಳೆ.

ಇಪ್ಪತ್ತು ವರ್ಷದ ಯುದ್ಧ, ರಷಿಯನರ ಆಳ್ವಿಕೆ ಅವರನ್ನು ಹಣ್ಣು ಮಾಡಿದೆ. ರಷ್ಯನರು ಇದ್ದಾಗ ಸ್ವಾತಂತ್ರ್ಯದ ರುಚಿ ಕಂಡ ಮಹಿಳೆಯರು ಇಂಥ ಸಂಘರ್ಷ, ರಕ್ತಪಾತಕ್ಕೆ ಕಾರಣ. ಅವರನ್ನು ಹದ್ದುಬಸ್ತಿನಲ್ಲಿ ಮೊದಲು ಇಡಬೇಕು ಎಂಬುದು ತಾಲಿಬಾನ್‌ಗಳ ವಾದ.

ಏಕೆ 47 ಬಂದೂಕು, ಇನ್ನೊಂದು ಕೈಯಲ್ಲಿ ಉಕ್ಕಿನ ತಂತಿ ಹಿಡಿದು ಬೀದಿಗಳಲ್ಲಿ ಗಸ್ತು ತಿರುಗುವ ತಾಲಿಬಾನ್, ಸ್ವಯಂಘೋಷಿತ ಧರ್ಮದ ರಕ್ಷಕರು. ತಪ್ಪು ಮಾಡಿದವರು ಕಂಡರೆ ಬೀದಿಯಲ್ಲೇ ಉಕ್ಕಿನ ತಂತಿಯಿಂದ ಬಡಿಯುತ್ತಾರೆ.

ಗಂಡಸರೂ ಪಾಶ್ಚಿಮಾತ್ಯ ಬಟ್ಟೆ, ಬರೆ ಧರಿಸುವಂತಿಲ್ಲ. ಗಡ್ಡ ಕತ್ತರಿಸುವಂತಿಲ್ಲ. ಅನುಮಾನ ಬಂದರೆ ರಸ್ತೆಯಲ್ಲಿಯೇ ಹಿಡಿದು ತಪಾಸಣೆ ಮಾಡುತ್ತಾರೆ. ತಪ್ಪು ಮಾಡಿದ್ದು ಕಂಡು ಬಂದರೆ ಬೀದಿಯಲ್ಲೇ ಹಿಡಿದು ಬಡಿಯುತ್ತಾರೆ.

ಮಹಿಳೆಯರು ಮೇಲಿನ ನಿರ್ಬಂಧ ಇನ್ನೂ ಕಠೋರ. ಅವರು ಹೊರಗೆಲ್ಲೂ ದುಡಿಯುವಂತಿಲ್ಲ. ಮನೆಯವರಲ್ಲದ ಬೇರೆ ಗಂಡಸಿನ ಜೊತೆ ಮಾತಾಡುವಂತಿಲ್ಲ. ಮದುವೆ, ಸಾವಿನಂತಹ ಸಂದರ್ಭಗಳಲ್ಲದೇ ಬೇರೆ ಯಾವುದೇ ಪಾರ್ಟಿಗಳಿಗೆ ಹೋಗುವಂತಿಲ್ಲ. ಹಾಗೆ ಹೋದಾಗಲೂ ಗಂಡಸರು, ಹೆಂಗಸರು ಪ್ರತ್ಯೇಕವಾಗಿಯೇ ಇರಬೇಕು.

ಪಾಶ್ಚಿಮಾತ್ಯ ಉಡುಪು ಹಾಗಿರಲಿ ಅಲಂಕಾರ ಸಾಮಗ್ರಿ ಕೂಡ ಬಳಸುವಂತಿಲ್ಲ. ಲಿಪ್‌ಸ್ಟಿಕ್ ಬಳಸಿದರೆಂಬ ಕಾರಣಕ್ಕೇ ಅಂಥ ಮಹಿಳೆಯರ ತುಟಿಗಳನ್ನೇ ಕತ್ತರಿಸಿ ಹಾಕಲಾಗಿದೆ ಎಂದೂ ವರದಿಗಳು ತಿಳಿಸುತ್ತವೆ. ಇನ್ನು ಎತ್ತರ ಹಿಮ್ಮಡಿಯ ಚಪ್ಪಲಿ ಧರಿಸುವಂತಿಲ್ಲ.

ಮಹಿಳೆಯರಿಗೆ ಗುರುತಿನ ಚೀಟಿಯಾಗಲಿ, ಪಾಸ್‌ಪೋರ್ಟ್ ಆಗಲೀ ಸರ್ಕಾರ ವಿತರಿಸುವುದಿಲ್ಲ. ಇನ್ನೂ ವಿಚಿತ್ರ ಎಂದರೆ ಮಹಿಳೆಯರಿಗಾಗಿ ಸಾರ್ವಜನಿಕ ಶೌಚಾಲಯಗಳೂ ಇಲ್ಲ.

ಮುಂದೆ ಎಂದಾದರೊಂದು ದಿನ ಒಳ್ಳೆಯ ದಿನ ಬರಬಹುದೆಂದು ಕಾಯುವುದು ಬಿಟ್ಟು ಅಲ್ಲಿನ ಮಹಿಳೆಯರಿಗೆ ಬೇರೆ ದಾರಿ ಇಲ್ಲ. ಈ ನಡುವೆ ಅಲ್ಲಿನ ಎಷ್ಟೋ ಶಿಕ್ಷಕರು. ನಾನಾ ರೀತಿಯ ಕೆಲಸಗಳಲ್ಲಿ ಇದ್ದವರು ಇವತ್ತು ಹೊಟ್ಟೆ ಪಾಡಿಗಾಗಿ ಬೀದಿಯಲ್ಲಿ ಭಿಕ್ಷೆ ಬೇಡುತ್ತಾ ಕುಳಿತಿರುತ್ತಾರೆ.

ತಾಲಿಬಾನ್‌ಗಳ ವಿರುದ್ಧ ದಂಗೆ ಏಳುವ ಪ್ರಯತ್ನ ಮೊದಲು ನಡೆಯಿತು. ಹಾಗೆ ಪ್ರತಿಭಟಿಸಲು ಸೇರಿದ್ದ ಮಹಿಳೆಯರನ್ನು ಸಾರ್ವಜನಿಕವಾಗಿಯೇ ಮನಬಂದಂತೆ ಬಡಿಯಲಾಯಿತು. ಕೆಲವರನ್ನು ಬಂಧಿಸಲಾಯಿತು. ಹಲವರಂತೂ ಕಣ್ಮರೆಯಾದರು.

ಅದಾರ ಮೇಲೆ ಅಲ್ಲಿನ ಮಹಿಳೆಯರು ಹೊಸ ನಿರ್ಬಧಿಗಳಿಗೆ ಬಗ್ಗಿ ನಡೆಯಲು ಯತ್ನಿಸುತ್ತಿದ್ದಾರೆ. ಇವತ್ತು ಬುರ್ಖಾ ಧರಿಸಿದ್ದರೂ ಒಬ್ಬರನ್ನೊಬ್ಬರು ಗುರುತಿಸಬಲ್ಲರು.

ತಮ್ಮ ದಂಗೆಯ ಮನೋಭಾವ ಪ್ರಕಟಿಸಲು ಎಷ್ಟೋ ಜನ ಮೇಕಪ್ ಮಾಡಿಕೊಂಡು ಫೋಟೋ ತೆಗೆಸಿಕೊಂಡು ಆನಂದಿಸುತ್ತಾರೆ. ಹೀಗೆ ಅವರೊಳಗಿನ ದಂಗೆಯ ಮನೋಭಾವ ಒಳಸುಳಿಯಾಗೇ ಹರಿಯುತ್ತಿದೆ.

■ ವಿವಿಧ ಮೂಲಗಳಿಂದ

ಹೃದಯ ಶ್ರೀಮಂತ

# ನಾರಾಯಣ ಮೂರ್ತಿ

## ವರ್ಷದ ವ್ಯಕ್ತಿ

'ನಮ್ಮಲ್ಲಿ ಜನ ಕೆಲಸ ಮುಗಿಸಿ ಸಂಜೆ ಮನೆಗೆ ಧಾಸಿಸುವಷ್ಟೇ ಖುಷಿಯಿಂದ ಮರುದಿನ ಕೆಲಸಕ್ಕೆ ಬರುವಂತಾಗಬೇಕು.' ಉದ್ದಿಮೆದಾರರ ಇಂಥ ಮಾತು ಬಡಾಯಿ ಆಗಿ ಕೇಳಿಸುತ್ತದೆ. ಹೆಚ್ಚೆಂದರೆ ವೇದಿಕೆ ಮೇಲೆ ಚಪ್ಪಾಳೆ ಗಿಟ್ಟಿಸಲು ಆಡಿದ ಮಾತಂತೆ ತೋರುತ್ತದೆ. ಅವರು ತಮ್ಮ ಖಾಸಗಿ ಒಡೆತನದ ಕಂಪೆನಿಯನ್ನು ಸಾರ್ವಜನಿಕ ಉದ್ದಿಮೆ ಆಗಿಸಲು, ಅದಕ್ಕೊಂದು ಅಂತಾರಾಷ್ಟ್ರೀಯತೆ, ಗಟ್ಟಿತನಗಳನ್ನು ತಂದುಕೊಡಲು ನಿರ್ಧರಿಸಿದಾಗ, ತಮ್ಮ ಕಂಪೆನಿ ಶೇರುಗಳನ್ನು ಕೊಳ್ಳಲು ಅಲ್ಲಿ ದುಡಿಯುವ ಜನಕ್ಕೆ ಮೊದಲ ಅವಕಾಶ ನೀಡಲು ಮುಂದಾದರು. ಆಗ ಸಹಜವಾಗಿ ಬಂದ ಪ್ರಶ್ನೆ ''ಯಾಕೆ ಹೀಗೆ?'' ಇದಕ್ಕೆ ಉದ್ದಿಮೆಯ ಮುಖ್ಯಸ್ಥ ನಾರಾಯಣ ಮೂರ್ತಿ ನೀಡಿದ ಉತ್ತರ ಮೇಲಿನಂತಿತ್ತು.

ಹಾಗೆ ಅವತ್ತು ಪಾಲುದಾರಿಕೆ ಪಡೆದು ಶೇರು ಖರೀದಿ ಸಿದ್ಧ ಕಂಪೆನಿಯ ಅರ್ಹ ಉದ್ಯೋಗಿಗಳು ಇವತ್ತು ಕೋಟ್ಯಾಧೀಶರು. ಇವರಲ್ಲಿ ಮೂರ್ತಿ ಅವರ ಕಾರಿನ ಡ್ರೈವರ್ ಕಣ್ಣನ್ ಕೂಡ ಒಬ್ಬರು.

ಇಂಥದೊಂದು ಸಾಧ್ಯವಾಗಿಸಲು ಹೃದಯ ಶ್ರೀಮಂತಿಕೆ ಬೇಕು.



**ವಿನಯಶೀಲರಾದ ಕನ್ನಡಿಗ ಎನ್.ಆರ್.ನಾರಾಯಣ ಮೂರ್ತಿ ಪತ್ರಿಕೆ ಆರಿಸಿದ 'ವರ್ಷದ ವ್ಯಕ್ತಿ'. ಎಲ್ಲರ ಬದುಕು ಹಸನಾಗಬೇಕೆಂಬುದೇ ಪತ್ರಿಕೆಯ ಕಾಳಜಿ. ಎಲ್ಲ ರಂಗ, ವ್ಯಕ್ತಿಗಳಿಂದ ಬದುಕು ಹಸನಾಗಿಸುವ ವಿಚಾರ, ವಿಷಯ ಹೆಕ್ಕಿ ತೆಗೆದು ನಮ್ಮ ಓದುಗರ ಮುಂದಿಡುತ್ತಾ ಬಂದಿದ್ದೇವೆ. ಈ ಬಾರಿಯ 'ವರ್ಷದ ವ್ಯಕ್ತಿ' ನಾರಾಯಣ ಮೂರ್ತಿ ಅವರ ಬದುಕಿನ ಹಾದಿ ಕೂಡ ನಮ್ಮ ಓದುಗರಿಗೆ ಅತ್ಯುತ್ತಮ ಪ್ರೇರಣೆ ನೀಡಬಲ್ಲ ಕಸುವು ಹೊಂದಿದೆ.**

■



ಯುವಕ ನಾರಾಯಣ ಮೂರ್ತಿ

**ನಾ**ರಾಯಣ ಮೂರ್ತಿಯ ಹಿರಿಯರು ಕೋಲಾರ ಜಿಲ್ಲೆಯವರು. ಅವರ ತಂದೆ ಎ.ಎನ್.ರಾಮರಾವ್ ಶಾಲೆಯಲ್ಲಿ ಶಿಕ್ಷಕರು. ಮೇಷ್ಟ್ರುಗಳಿಗೆ ಇರುವ ಬಡತನದ ಜೊತೆಗೇ ಎಂಟು ಮಕ್ಕಳನ್ನು ಸಾಕುವ ಜವಾಬ್ದಾರಿ. ಅವರಲ್ಲಿ ಐದನೆಯವರು ನಾರಾಯಣ ಮೂರ್ತಿ.

ಬಡತನ ಅವಮಾನದ ಸಂಗತಿಯಲ್ಲ. ಅದನ್ನೊಂದು ವಾಸ್ತವವಾಗಿ ಒಪ್ಪಿಕೊಳ್ಳುವ ವಿನಯ ಬೇಕು. ಹಾಗಾದಾಗಲೇ ಈ ವಾಸ್ತವ ಮೀರಿ ನಿಲ್ಲಬಹುದಾದ ದೃಷ್ಟಿ ಲಭಿಸುತ್ತದೆ ಎಂದು ಮೂರ್ತಿ ಬಹಳ ಬೇಗ ಅರಿತುಕೊಂಡರು. ಕಷ್ಟದ ಜೀವನದಲ್ಲಿ ಉತ್ಸಾಹ ಕುಗ್ಗಿಸಿಕೊಳ್ಳದೇ ಅತ್ಯುತ್ತಮ ಅಂಕ ಪಡೆಯುತ್ತಾ ಓದಿನಲ್ಲಿ ತೊಡಗಿಸಿಕೊಂಡರು. ಎಷ್ಟೇ ಅತ್ಯುತ್ತಮ ಅಂಕ ಪಡೆದರೂ ಅತ್ಯುತ್ತಮ ಓದು, ಡಿಗ್ರಿ ಪಡೆಯಲು ಹಣದಂಥ ಸಂಗತಿ ಅಡ್ಡಿಯಾಗಿ ನಿಲ್ಲಬಹುದೆಂಬುದು ಅರಿವಾಗುವಾಗ ಅವರಿಗಿನ್ನೂ ಹದಿನೆಂಟು ವರ್ಷ.

ಮೂರ್ತಿ ಪ್ರಿಯೂನಿವರ್ಸಿಟಿಯಲ್ಲಿ ಅತಿ ಹೆಚ್ಚು ಅಂಕ ಪಡೆದಿದ್ದರು. ಸ್ಥಳೀಯ ಇಂಜಿನಿಯರಿಂಗ್ ಕಾಲೇಜಲ್ಲಿ ಪ್ರವೇಶ ದೊರಕಿತ್ತು. ಆದರೆ ಅವರಿಗೆ ದೇಶದ ಅತ್ಯಂತ ಪ್ರತಿಷ್ಠಿತ ವಿದ್ಯಾಸಂಸ್ಥೆಯಾದ ಕಾನ್ಪುರದ ಐಐಟಿಯಲ್ಲಿ ಓದಬೇಕೆಂಬ ಆಕಾಂಕ್ಷೆ. ಪ್ರವೇಶ ಪರೀಕ್ಷೆಯಲ್ಲಿ ಪಾಸಾಗಿ, ವಿದ್ಯಾರ್ಥಿ ವೇತನಕ್ಕೂ ಅವರು ಅರ್ಹತೆ ಪಡೆದಿದ್ದರು. ಕಾನ್ಪುರಕ್ಕೆ ಹೊರಡಲು ಸಣ್ಣ ಅಡ್ಡಿ. ಕಾಲೇಜು ವಿದ್ಯಾರ್ಥಿವೇತನವನ್ನು ಆಯಾವರ್ಷದ ಕೊನೆಯಲ್ಲಿ ವಿತರಿಸುತ್ತಾ ಇತ್ತು. ಅಂದಿನ ಕಾಲಕ್ಕೆ ಇವರ ಓದು, ಊಟದ ಖರ್ಚಿಗೆ ತಿಂಗಳಿಗೆ ಕನಿಷ್ಠ ನೂರು ರೂಪಾಯಿ ಆದರೂ ಬೇಕು. ಅದನ್ನು ಕೊಡುವ ಸ್ಥಿತಿಯಲ್ಲೂ ತಂದೆ ಇರಲಿಲ್ಲ. ಅವರಿಗಾಗ ಬರುತ್ತಿದ್ದ ಸಂಬಳ ತಿಂಗಳಿಗೆ 250 ರೂಪಾಯಿ ಮಾತ್ರ. ತಂದೆ ಸಮಸ್ಯೆ ವಿವರಿಸಿದಾಗ, ಅದನ್ನು ಅರ್ಥಮಾಡಿಕೊಂಡ ನಾರಾಯಣ ಮೂರ್ತಿ ಮೈಸೂರಿನ ಮನೇಲಿ ಇದ್ದುಕೊಂಡೇ, ಸ್ಥಳೀಯ ಇಂಜಿನಿಯರಿಂಗ್ ಕಾಲೇಜಲ್ಲಿ ಓದು ಮುಂದುವರಿಸಿದರು. ಆದರೆ ಕಾನ್ಪುರದ ಪ್ರತಿಷ್ಠಿತ ಸಂಸ್ಥೆಯಲ್ಲಿ ಓದಬೇಕೆಂಬ ಆಸೆ ಕಮರಿಹೋಗಲಿಲ್ಲ. ಅದಕ್ಕಾಗಿ ಸೂಕ್ತ ಸಮಯದವರೆಗೂ ಕಾಯಬೇಕೆಂಬ ವಿವೇಕ ಅವರ ಹದಿಹರೆಯದ ಮನಸ್ಸು ಹದಗೊಳಿಸಿತ್ತು.

ಮೈಸೂರಿನ ಓದಿನ ದಿನಗಳು ಮೂರ್ತಿಯವರ ಮಹತ್ವದ ದಿನಗಳು. ಅವರು ಕನಸು ಕಂಡ ಹಾಗೇ ಅದಕ್ಕೊಂದು ವ್ಯಾಪಕ ತಳಹದಿ ರೂಪಗೊಂಡಿದ್ದು ಅಲ್ಲಿಯೇ.

ಭಾನುವಾರ ಬಂದರೆ ಸಾಕು. ಮನೆಯವರೆಲ್ಲ ಕುಳಿತು ಆಲ್ ಇಂಡಿಯಾ ರೇಡಿಯೊ ಬಿತ್ತರಿಸುತಿದ್ದ ಒಂದು ತಾಸು ಅವಧಿಯ ಪಾಶ್ಚಿಮಾತ್ಯ ಸಂಗೀತ ಕಿವಿಗೊಟ್ಟು ಕೇಳುತ್ತಿತ್ತು. ಸಂಗೀತದ ಚೆಲುವು ಆಸ್ವದಿಸಲಾರದ ಪುಟ್ಟ ಹುಡುಗ ತಂದೆಯನ್ನು ಕೇಳಿದ್ದರು. ''ಇದರಲ್ಲಿ ಏನಂಥ ವಿಶೇಷ?'' 'ವಾಗ್ಗೇಯಕಾರನೊಬ್ಬ ಬರೆದಿಟ್ಟ ನುಡಿಗಳನ್ನು ಮುಂದಿಟ್ಟುಕೊಂಡು ನಿರ್ವಾಹಕನೊಬ್ಬನ ಸನ್ನೆಯಂತೆ ನೂರಾರು ಜನ ವಾದ್ಯಕಾರರು ಈ ಸಂಗೀತ ನುಡಿಸುತ್ತಾರೆ. ಎಲ್ಲ ಸ್ವರಗಳು ಅಪರೂಪ ರೀತಿಯಲ್ಲಿ ಸಂಮಿಳನಗೊಂಡು ಹೊಮ್ಮಿದಾಗ ದಿವ್ಯಗಾನ ಮೂಡುತ್ತದೆ'.

ಇದೊಂದು ಮಾತು ಮೂರ್ತಿಯವರ ಬದುಕಿನ ಎಲ್ಲ ಕನಸು, ನನಸುಗಳ ಅಸ್ತಿವಾರವಾಯಿತು. ಪಾಶ್ಚಿಮಾತ್ಯ ಸಂಗೀತ ಆಸ್ವಾದಿಸುವ ಅಭಿರುಚಿಯ ಹಾಗೆಯೇ. ತಮ್ಮದೊಂದು ಕನಸಿನ ಸಾಕಾರಕ್ಕೆ ನೂರಾರು ಜನರನ್ನು ಕಟ್ಟಿಕೊಂಡು ಅದೊಂದು ಅದ್ಭುತ ಮೇಳವಾಗಿ ರೂಪಿಸುವ ಶಕ್ತಿಯನ್ನು ಅವರಲ್ಲಿ ಅದು ತುಂಬಿತ್ತು.

ಇವತ್ತು ಅವರ ಇನ್‌ಫೋಸಿಸ್ ಟೆಕ್ನಾಲಜಿಯಲ್ಲಿ ಎರಡೂವರೆ ಸಾವಿರ ಜನ ದುಡಿಯುತ್ತಾರೆ. ಆಧುನಿಕ ಜಗತ್ತಿನ ಹೊಸ ಕೂಸಾದ ಮಾಹಿತಿ ತಂತ್ರಜ್ಞಾನದ ಯಶಸ್ಸಿನ ಅಲೆಯ ಮೇಲೆ ಸಾಗಿ ಶಿಖರ ಮುಟ್ಟಲು ಇವತ್ತು ಮೂರ್ತಿ ಮತ್ತು ಅವರ ತಂಡ ಏಕತ್ರಗೊಂಡು ದುಡಿಯುತ್ತದೆ. ಅವರೆಲ್ಲರನ್ನು ಕೈಹಿಡಿದು ನಡೆಸುವ ಹರಿಕಾರರೆಂದರೆ ನಾರಾಯಣಮೂರ್ತಿ. ಸಂಗೀತ ಮೇಳ ನಿರ್ವಹಿಸುವ ವ್ಯಕ್ತಿಯ ಹಾಗೆ ಮಾತಿಲ್ಲದೇ ತಮ್ಮ ಕೃತಿಗಳ ಮೂಲಕವೇ ಪ್ರೇರಣೆ ನೀಡುವ ಅವರು ಇವತ್ತಿಗೂ ದಿನಕ್ಕೆ ಹನ್ನೆರಡು ಗಂಟೆ ದುಡಿಯುತ್ತಾರೆ. ರಜೆಯ ದಿನಗಳಂದು ಕೂಡ ಅದಕ್ಕೆ ವಿನಾಯಿತಿ ಇಲ್ಲ.

ಹಾಗೆಂದು ಅವರು ಕೆಲಸದ ದೆವ್ವ ಹಿಡಿದವರಂತೆ ಅದರಲ್ಲಿ ಮುಳುಗಿ, ಬೇರೆಲ್ಲರಿಂದ ದೂರವಾಗುವುದಿಲ್ಲ. ಇನ್‌ಫೋಸಿಸ್‌ನ ಸಿಬ್ಬಂದಿಯೂ ಸೇರಿದಂತೆ ಯಾರು ಬೇಕೆಂದರೂ, ಯಾವಾಗ ಬೇಕಾದರೂ ಅವರನ್ನು ಕಂಡು ಚರ್ಚಿಸಲು ಸದಾ ಅವಕಾಶ. ಅವರ ಮನೆ, ಆಫೀಸು ಎಲ್ಲರಿಗೂ ಸದಾ ತೆರೆದ ಬಾಗಿಲು. ಅವರಿಗೆ ದಿನನಿತ್ಯ ಬರುವ ಇ-ಮೇಲ್‌ಗಳಿಗೆ ಖುದ್ದು ತಕ್ಷಣವೇ ಉತ್ತರ ನೀಡುತ್ತಾರೆ.

ಸುಮಾರು ಐದುಕೋಟಿ ರೂಪಾಯಿ ಮೂಲ ಧನದೊಡನೆ 1989ರ ವೇಳೆಗೆ ಸ್ಥಾಪನೆಯಾದ ಇನ್‌ಫೋಸಿಸ್ ಟೆಕ್ನಾಲಜಿಯ ಬಂಡವಾಳ ಇವತ್ತು ಐನೂರು ಕೋಟಿ ರೂಪಾಯಿಗೆ ವಿಸ್ತರಿಸಿದೆ. ಇದು ಮಾಂತ್ರಿಕ ದಂಡದಿಂದ ಆದುದಲ್ಲ. ಅದರ ಹಿಂದೆ ಅಪಾರ ಶ್ರಮವಿದೆ. ಮುಂದಿನ ಆಗುಹೋಗುಗಳನ್ನು ನಿಖರವಾಗಿ ಗುರುತಿಸಿ ಹೆಜ್ಜೆ ಇರಿಸಬಲ್ಲ

---

**ಹುಬ್ಬಳ್ಳಿಯ ದೇಶಪಾಂಡೆ ನಗರದ ನ್ಯೂ ಎಜುಕೇಷನ್ ಸೊಸೈಟಿ ಶಾಲೆಯಲ್ಲಿ ಓದಿದವರು ಸುಧಾ ಕುಲಕರ್ಣಿ. ಆದರೀಗ ನಾರಾಯಣ ಮೂರ್ತಿ ಅವರ ಪತ್ನಿ. ತಾವು ಓದಿದ ಶಾಲೆಯ ಬಗ್ಗೆ ಸುಧಾ ಅವರಿಗೆ ಅಪಾರ ಅಭಿಮಾನ. ಅಲ್ಲಿಯೇ ಅವರ ತಂದೆ, ತಾಯಿ ಶಿಕ್ಷಕರಾಗಿದ್ದರು. ಅದೇ ಶಾಲೆಯಲ್ಲಿ ಅವರ ಅಜ್ಜ ಕದೀಂ ದೀವಾನ್ ಕೂಡ ಮಾಸ್ತರಿಕೆ ಮಾಡಿದ್ದರು.**

**ಆ ಸಂಸ್ಥೆಯ ದೇಶಪಾಂಡೆ ನಗರ ಹಾಗೂ ಬಮ್ಮಾಪುರ ಕ್ರಾಸ್ ಶಾಲೆಗಳಿಗೆ ಹೊಸ ಸ್ವರೂಪ ನೀಡುವ ಕಾರ್ಯವನ್ನು ಇನ್‌ಫೋಸಿಸ್ ಕೈಗೆತ್ತಿಕೊಂಡಿದೆ. ಹೊಸ ಕಟ್ಟಡ ಹಾಗೂ ಕಂಪ್ಯೂಟರ್ ಕಲಿಕೆಗೆ ನೆರವಾಗಲು ಮುಂದಾಗಿದೆ.**

---

ಮುಂದಾಲೋಚನೆ ಎಲ್ಲ ಇವೆ.

**ಕನಸಿಗೆ ಕೈ ಚಾಚುವ ಮುನ್ನ**

'ಇನ್‌ಫೋಸಿಸ್' ಇವತ್ತು ಯಶಸ್ಸಿನ ರಮ್ಯಕಥೆ. ಯಶಸ್ಸಿನ ಶಿಖರವೇರಿ ತಂಗಾಳಿಗೆ ಮುಖ ಒಡ್ಡಿ ಕುಳಿತ ಮನುಷ್ಯನ ತೃಪ್ತಿಯೇ ಬೇರೆ. ಆ ಸುಖದಲ್ಲಿ ಬೆಟ್ಟವೇರಿ ಬಂದ ಆಯಾಸ, ನೋವಿನ ಮಧುರ ಯಾತನೆ ಇರುತ್ತದೆ. ಮುಂದಿನ ಹಾದಿಯ ಮತ್ತೊಂದು ಕನಸೂ ಕೈ ಚಾಚಿ ಕರೆಯುತ್ತದೆ.

ಮೈಸೂರಂಥ ನಗರದ ಮಧ್ಯಮ ವರ್ಗದ ಬ್ರಾಹ್ಮಣ ಕುಟುಂಬದ ನೋವು, ನಲಿವುಗಳ ನಡುವಿಂದ ಎದ್ದು ಬಂದವರು ಮೂರ್ತಿ. ತಂದೆಯ ಮಾತು ಕೇಳಿದ್ದರೆ ಅವರು ಐ.ಎ.ಎಸ್. ಅಧಿಕಾರಿ ಆಗಬೇಕಿತ್ತು. ಆದರೆ ಒಳಗೊಂದು ಕನಸಿತ್ತಲ್ಲ. ಅದು ಅವರನ್ನು ಕಟ್ಟಿ ಹಾಕಿತ್ತು. ಅವಕಾಶಕ್ಕಾಗಿ ಅದು ಹೊಂಚುತ್ತಿತ್ತು.

ಮನೆಯ ಕಷ್ಟ ನೀಗಿಸುವುದು ಅಷ್ಟೇ ಮುಖ್ಯ. ಬಿ.ಇ. ಮುಗಿದದ್ದೇ ಅವರು ಜೂನಿಯರ್ ಇಂಜಿನಿಯರ್ ಆದರು. ಜಲವಿದ್ಯುದಾಗಾರದಲ್ಲಿ ಕೆಲಸ. ದುಡಿಯುತ್ತ ಇರುವಾಗಲೇ ಮತ್ತೆ ಕೈಬೀಸಿ ಕರೆಯಿತು ಕಾನ್ಪುರ. ಒಮ್ಮೆ ಬಿ.ಇ. ಓದುವ ಅವಕಾಶ ತಪ್ಪಿದ್ದ ಸಂಸ್ಥೆಯಲ್ಲಿ ಎಂ.ಟೆಕ್ ಮಾಡುವ ಅವಕಾಶ. ವಿದ್ಯಾರ್ಥಿ ವೇತನ ನಿಯಮ ಬದಲಾಗಿ, ಅನುಕೂಲಕರವಾಗಿತ್ತು. ಒಮ್ಮೆ ಕೈತಪ್ಪಿದ್ದ ಕನಸು. ಮರಳಿ ದೊರೆತ ಸಂಭ್ರಮದಲ್ಲಿ ಬಂದು ನಿಂತ ಯುವಕನಿಗೆ ಅಲ್ಲಿ ಹೊಸದೊಂದು ಜಗತ್ತು ತೆರೆದುಕೊಂಡಿತು. ಮಾಹಿತಿ ತಂತ್ರಜ್ಞಾನದ, ಆಗಷ್ಟೇ ಕಣ್ತೆರೆಯುತ್ತಿದ್ದ ಪ್ರಪಂಚ ಅದು. ಅಲ್ಲಿ ಅವರಾಗ ಕಂಪ್ಯೂಟರ್ ಸೈನ್ಸ್‌ನ ಹೊಸ ವಿದ್ಯಾರ್ಥಿ. ಜಗತ್ತಿನ ಅತ್ಯುತ್ತಮ ಶಿಕ್ಷಕರು, ಉಪಕರಣ ಎಲ್ಲ ಅವರ ಕೈಚಾಚಿನಲ್ಲಿ.

ಎಂ.ಟೆಕ್ ಮುಗಿಸಿದ್ದೇ ನೂರೆಂಟು ಅತ್ಯುನ್ನತ ಹುದ್ದೆಗಳು ಕೈ ಬೀಸಿ ಕರೆದವು. ಭಾರೀ ಸಂಸ್ಥೆಗಳಲ್ಲಿ ಅಷ್ಟೇ ಭಾರೀ ಸಂಬಳ. ಆದರೂ ಅವರು ಆರಿಸಿಕೊಂಡಿದ್ದು ಅಹ್ಮದಾಬಾದ್‌ನ ಇಂಡಿಯನ್ ಇನ್‌ಸ್ಟಿಟ್ಯೂಟ್‌ನ ಛೀಫ್ ಪ್ರೋಗ್ರಾಮರ್ ಹುದ್ದೆ. ಅಲ್ಲಿಯ ಮುಖ್ಯಸ್ಥರು ಜಿ.ಜಿ. ಕೃಷ್ಣಯ್ಯ. ಒಮ್ಮೆ ಕಾನ್ಪುರಕ್ಕೆ ಬಂದಿದ್ದ ಅವರು ಯುವಕ ನಾರಾಯಣಮೂರ್ತಿಯ ಮನಸಲ್ಲಿ ಅಚ್ಚಳಿಯದ ಸ್ಫೂರ್ತಿಯಾಗಿ ನಿಂತು ಬಿಟ್ಟಿದ್ದರು. ಅವರೇ ತಮ್ಮ ಮಾನಸಿಕ ಗುರು ಎಂದು ಇಂದಿಗೂ ಮೂರ್ತಿ ಸ್ಮರಿಸುತ್ತಾರೆ.

ಕೇವಲ ಎಂಟು ನೂರು ರೂಪಾಯಿ ಸಂಬಳದ ಆ ಕೆಲಸ ಆರಿಸಿದ್ದು ಮೂರ್ಖತನ ಎಂದು ಬೇರೆಯವರಿಗೆ ಅನ್ನಿಸಿರಬಹುದು. ಅದು ತಾವು ಬದುಕಲ್ಲಿ ಕೈಗೊಂಡ ಅತ್ಯುತ್ತಮ ನಿರ್ಧಾರ ಎಂದೇ ಮೂರ್ತಿ ಇವತ್ತಿಗೂ ಅನ್ನುತ್ತಾರೆ.

ಅಲ್ಲಿ ಸಂಬಳ ಕಮ್ಮಿ. ಕೆಲಸ ಜಾಸ್ತಿ. ದಿನಕ್ಕೆ ಇಪ್ಪತ್ತು ಗಂಟೆ ದುಡಿತ. ಎಷ್ಟೋ ವೇಳೆ ಬೆಳಗಿನ ಜಾವದ ಮೂರು ಗಂಟೆ ಹೊತ್ತಲ್ಲಿ ಅವರು ದಿನದ ಕೆಲಸ ಮುಗಿಸಿ ಮನೆಗೆ ಹೋಗುತ್ತಾ ಇದ್ದುದುಂಟು.

ಇದು ಕೇವಲ ಕತ್ತೆ ದುಡಿತವಲ್ಲ. ಸವಾಲುಗಳು ಎದುರಾದಾಗ 'ಯಾವುದಪ್ಪ ದಾರಿ?' ಎಂದು ತಲೆಮೇಲೆ ಕೈಹೊತ್ತು ಕೂರುವುದು ಅವರ ಜಾಯಮಾನವೇ ಅಲ್ಲ. ಸವಾಲನ್ನು ಎದುರಿಸುತ್ತಲೇ ಪರಿಹಾರದ ದಾರಿ ಕಂಡುಕೊಳ್ಳುವುದೇ ಅವರ ರೀತಿ. ಇಂಥ ಗುಣ ಗುರುತಿಸಿಯೇ ಕೃಷ್ಣಯ್ಯ ಶಿಷ್ಯನ ಹೆಸರನ್ನು ಫ್ರೆಂಚ್ ಕಂಪೆನಿಯೊಂದಕ್ಕೆ ಶಿಫಾರಸು ಮಾಡಿದರು. 'ಸೆಸಾ' ಎಂಬ ಆ ಕಂಪೆನಿ ಆಗ ಪ್ಯಾರಿಸ್‌ನ ಡಿಗಾಲೆ ಏರ್‌ಪೋರ್ಟ್‌ನ ಸರಕು ನಿರ್ವಹಣೆಗೆ ಪ್ರೋಗ್ರಾಂ ಒಂದನ್ನು ರೂಪಿಸುತ್ತಿತ್ತು. ಒಂದಕ್ಷರವೂ ಫ್ರೆಂಚ್ ಬಾರದ ಮೂರ್ತಿಗೆ ಸಂದಿಗ್ಧ. ಆಗ ಅಮೇರಿಕಾ ಮತ್ತು ಇಸ್ರೇಲ್‌ಗಳಿಂದ ಪಿ.ಎಚ್.ಡಿ. ಮಾಡುವ ಅವಕಾಶ ಒದಗಿ ಬಂದಿತ್ತು. ಕೊನೆಗೆ ಫ್ರಾನ್ಸ್‌ಗೆ ಹೋಗಲು ನಿರ್ಧರಿಸಿದರು. ಪಿ.ಎಚ್.ಡಿ. ಎಂದಾದರೂ ಮುಂದೆ ಮಾಡಬಹುದು. ಫ್ರಾನ್ಸ್‌ಗೆ ಹೋಗುವ

---

**ಕೋಲಾರ ಈಗ ಬರಿದಾದ ಚಿನ್ನದ ಬೀಡು. ಅಂಥ ನಾಡು ನಮಗೆ ಚಿನ್ನದಂಥ ಹಲವು ವ್ಯಕ್ತಿಗಳನ್ನು ಕೊಟ್ಟಿದೆ. ಆಧುನಿಕ ತಂತ್ರಜ್ಞಾನದ ಮೊದಲ ಕನಸುಗಾರ ವಿಶ್ವೇಶ್ವರಯ್ಯ. ಸಾಹಿತ್ಯದ ದಿಗ್ಗಜಗಳೆನಿಸಿದ ಡಿವಿಜಿ, ಮಾಸ್ತಿ, ರಾಜಕೀಯದಲ್ಲಿ ಉತ್ತುಂಗಕ್ಕೇರಿ, ರಾಜ್ಯದ ಮೊದಲ ಮುಖ್ಯಮಂತ್ರಿಯಾದ ಕೆ.ಸಿ. ರೆಡ್ಡಿ ಇದೇ ಜಿಲ್ಲೆಯವರು.**

**ಇದೇ ಕೋಲಾರ ಎನ್.ಆರ್. ನಾರಾಯಣಮೂರ್ತಿ ಅವರನ್ನೂ ದೇಶಕ್ಕೆ ಕೊಟ್ಟಿದೆ.**

---



ಇನ್ಫೋಸಿಸ್ ಕಟ್ಟಿದವರು :
ರಾಘವನ್, ದಿನೇಶ್, ನಾರಾಯಣ ಮೂರ್ತಿ, ನಂದನ್ ಮತ್ತು ಗೋಪಾಲಕೃಷ್ಣ



ಬೆಂಗಳೂರಿನ ಇನ್‌ಫೋಸಿಸ್ ತಂಡದೊಡನೆ ಮೂರ್ತಿ

ಅವಕಾಶ ದೊರೆಯದೇ ಇರಬಹುದು. ಅದಕ್ಕಿಂತ ಮುಖ್ಯ; ಬಡವರ ಪರ ಕಾಳಜಿಯ ಸಮಾಜವಾದದ ಆ ದೇಶ ಕಣ್ಣಾರೆ ಕಾಣಬೇಕೆಂಬ ಹಂಬಲವೇ ಅವರನ್ನು ಕೈಹಿಡಿದು ನಡೆಸಿ ತಂದಿತು.

ಅಲ್ಲಿ ಅವರ ದೃಷ್ಟಿಗೆ ಹೊಸ ಹೊಳಪು ಮೂಡಿತು. ಬಡವರ ಪರ ಕಾಳಜಿಯೇನೋ ಸರಿ. ದೇಶದ ಸಂಪತ್ತು ಇಲ್ಲದವರಿಗೆ ಹಂಚಿಕೆ ಆಗಬೇಕು ನಿಜ. ಆದರೆ ಹಾಗಾಗಲು ಮೊದಲು ಸಂಪತ್ತು ಸೃಷ್ಟಿಸಬೇಕು. ಅದಕ್ಕೆ ಸರಕಾರ ನೆರವಾಗಿ ನಿಲ್ಲಬೇಕು ಎಂಬ ವಿಚಾರ ಗಟ್ಟಿಯಾದದ್ದು ಅಲ್ಲಿಯೇ.

ಅಲ್ಲಿನ ಕಂಟ್ರಾಕ್ಟು ಮುಗಿದು, ಗಳಿಸಿದ್ದ ಎಲ್ಲ ದಾನ ಮಾಡಿ, ಜೇಬಲ್ಲಿ 450 ಡಾಲರ್‌ಗಳಷ್ಟು ಹಣ ಇಟ್ಟುಕೊಂಡು ಭೂ ಸಾರಿಗೆಯನ್ನು ನೆಚ್ಚಿಯೇ, ತಾಯ್ನಾಡು ಸೇರಲು ಸಜ್ಜಾದರು. ಬಲ್ಗೇರಿಯಾದ ಗಡಿ ಸೇರುತ್ತಲೇ ಅನಾಹುತ ಆಯಿತು. ಇವರನ್ನು ಇನ್ಯಾರೋ ಎಂದು ಭಾವಿಸಿದ ಪೊಲೀಸರು ಬಂಧಿಸಿ, ನೀಸ್ ಪಟ್ಟಣದಲ್ಲಿ ಮೂರು ದಿನ ಸೆರೆಯಲ್ಲಿಟ್ಟರು.

ಅಲ್ಲಿಂದ ಹನ್ನೊಂದು ತಿಂಗಳು ಪಟ್ಟ ಪಾಡು ದೇವರಿಗೇ ಪ್ರೀತಿ. ಬಿಡಿಗಾಸಿಲ್ಲದೇ, ಅಲೆಯುತ್ತಾ ಕೊನೆಗೂ ಕಾಬುಲಿನಲ್ಲಿ ವಿಮಾನವೇರಿ ಅಮೃತಸರಕ್ಕೆ ಬಂದು ಇಳಿದರು. ನಂತರ ಬಂದದ್ದು ಪುಣೆಗೆ.

ಅಲ್ಲಿ ಅವರ ಗುರು ಕೃಷ್ಣಯ್ಯ ಶ್ರೀ ಸಿಸ್ಟಂಸ್ ಆರಂಭಿಸುವ ಸನ್ನಾಹದಲ್ಲಿ ಇದ್ದರು. ಅವರ ವಿಚಾರವೇನೋ ಸರಿ. ಆದರೆ ಕೃಷ್ಣಯ್ಯನವರ ಎಲ್ಲ ಯೋಜನೆಗಳಿಗೆ ಸರ್ಕಾರದ ನೆರವು ಬೇಕಾಗಿತ್ತು. ಅರ್ಜಿ ಕಳಿಸಿದರೆ ಅವು ವರ್ಷಗಟ್ಟಲೇ ಸರ್ಕಾರ ಕಚೇರಿಗಳಲ್ಲಿ ಧೂಳು ತಿನ್ನುತ್ತಾ ಬಿದ್ದಿರುತ್ತಿದ್ದವು. ಇಲ್ಲಿ ಏಗುವುದರಿಂದ ಉಪಯೋಗವಿಲ್ಲ ಎಂದರಿತ ಮೂರ್ತಿ ಮುಂಬಯಿನ ಪಟ್ನಿ ಕಂಪ್ಯೂಟರ್ ಸರ್ವೀಸ್‌ನ ಸಲಹೆಗಾರರಾಗಿ ಸೇರಿಕೊಂಡರು.

**ಹೊಸ ಜೊತೆಗಾರರು**

ಪುಣೆಯ ವಾಸ್ತವ್ಯದಲ್ಲಿ ಬದುಕಿನ ಸಂಗಾತಿ ದೊರೆತರು. ಸುಧಾ ಕುಲಕರ್ಣಿ ಪರಿಚಯವಾದರು. ಆಕೆ ಆಗ ಟೆಲ್ಕೋದಲ್ಲಿ ದುಡಿಯುತ್ತಿದ್ದ ಎಲೆಕ್ಟ್ರಿಕಲ್ ಇಂಜಿನಿಯರ್. ಮೂರು ವರ್ಷದ ಪರಿಚಯ. 1978ರಲ್ಲಿ ಇಬ್ಬರನ್ನು ಮದುವೆಯ ಮಂಗಳದ ಹೊಸ್ತಿಲಿಗೆ ತಂದು ನಿಲ್ಲಿಸಿತು.

ಸುಧಾ ಹುಬ್ಬಳ್ಳಿಯವರು. ಅವರದೂ ಮಧ್ಯಮವರ್ಗದ ಕುಟುಂಬ. ತಂದೆ ತಾಯಿ ಶಾಲೆಯ ಶಿಕ್ಷಕರು. ಉತ್ತರ ಕರ್ನಾಟಕದವರಾದ ಅವರ ಮನೆಯವರಿಗೆ, ತುಂಗಭದ್ರೆಯಾಚೆಯ ಹಳೆ ಮೈಸೂರಿನ ಹುಡುಗನನ್ನು ಮಗಳು ಮೆಚ್ಚಿ ಮದುವೆಯಾಗುವ ಬಗ್ಗೆ ಅತೃಪ್ತಿ.

ಇಂಥ ಸಣ್ಣ ಪುಟ್ಟ ಸಂಗತಿಗಳು ಇಬ್ಬರನ್ನೂ ಬಾಧಿಸಲ್ಲೇ ಇಲ್ಲ. ಸಾಹಸದ ಯಾತ್ರೆಯಲ್ಲಿ ಜೊತೆಯಾಗಿ ಹೆಜ್ಜೆ ಇಟ್ಟವರು ಅವರ ಪತ್ನಿ. ಅದಕ್ಕಾಗಿ ಟೆಲ್ಕೋದಂಥ ಅತ್ಯುತ್ತಮ ಕಂಪೆನಿಯ ಕೆಲಸ ಬಿಡಲೂ ಹಿಂಜರಿಯಲಿಲ್ಲ. ಮುಂದೆ 'ಇನ್‌ಫೋಸಿಸ್' ಎಂಬ ಕನಸು ಹುಟ್ಟುವಾಗ ಕಂಡ ಹೆರಿಗೆಬೇನೆಯ ನೋವಿನ ಬಹುಪಾಲು ಹೊತ್ತುಕೊಂಡವರು ಸುಧಾ.

---

**ಬಿಸಿನೆಸ್ ಇಂಡಿಯಾ ನಮ್ಮಲ್ಲಿನ ಪ್ರಮುಖ ಬಿಸಿನೆಸ್ ಪತ್ರಿಕೆ. ಕಳೆದ ವರ್ಷ ನವೆಂಬರ್‌ನಲ್ಲಿ ಇನ್‌ಫೋಸಿಸ್ ಜಾಗತಿಕ ಶೇರು ಮಾರುಕಟ್ಟೆ ನ್ಯಾಸ್‌ಡಾಕ್ ಸೇರಲು ಪ್ರಯತ್ನಿಸುತ್ತಿತ್ತು. ನಾರಾಯಣ ಮೂರ್ತಿ ಮತ್ತವರ ತಂಡ ಅಂತಾರಾಷ್ಟ್ರೀಯ ಶೇರು ಮಾರುಕಟ್ಟೆ ಪ್ರವೇಶಿಸಲು ಸಾಧ್ಯವೇ! ಎಂಬ ಅನುಮಾನವನ್ನು ಪತ್ರಿಕೆ ವ್ಯಕ್ತಪಡಿಸಿತ್ತು.**

**ಈಗ ಅವರ ಅನುಮಾನ ಹುಸಿಯಾಗಿದೆ. ಈ ವರ್ಷದ ಕೊನೆಯ ಸಂಚಿಕೆಯಲ್ಲಿ 'ಬಿಸಿನೆಸ್ ಇಂಡಿಯಾ' ನಾರಾಯಣ ಮೂರ್ತಿ ಅವರನ್ನು ವರ್ಷದ ಉದ್ಯಮಿ ಎಂದು ಗೌರವಿಸಿದೆ.**

**'ಟೈಂಸ್ ಆಫ್ ಇಂಡಿಯಾ' ಪತ್ರಿಕೆ ನಡೆಸಿದ ಶತಮಾನದ ವ್ಯಕ್ತಿ ಯಾರೆಂಬ ಜನಾಭಿಪ್ರಾಯ ಸಂಗ್ರಹದಲ್ಲಿ ನಾರಾಯಣ ಮೂರ್ತಿ ಹತ್ತನೇ ಸ್ಥಾನ ಪಡೆದಿದ್ದಾರೆ. ಸರ್. ಎಂ. ವಿಶ್ವೇಶ್ವರಯ್ಯ ಶತಮಾನದ ವ್ಯಕ್ತಿಯಾಗಿ ಆಯ್ಕೆಯಾಗಿದ್ದಾರೆ.**

---

ಕಂಪೆನಿಯ ಕೆಲಸಕ್ಕೆಂದು ನಾರಾಯಣಮೂರ್ತಿ ವರ್ಷಾನುಗಟ್ಟಲೇ ಅಮೇರಿಕಾದಲ್ಲಿ ಅಲೆಯಬೇಕಾಗಿ ಬಂದಾಗ, ಮಗ ರೋಹನ್ ಮತ್ತು ಮಗಳು ಅಕ್ಷತಾನ ಜೊತೆ ತವರು ಸೇರಬೇಕಾಗಿ ಬಂದಾಗಲೂ ಅವರು ಬೇಸರ ತೋರಲಿಲ್ಲ. ಎಲ್ಲ ನೋವು ನುಂಗಿ ನಕ್ಕರು.

ಇನ್‌ಫೋಸಿಸ್ ಆರಂಭದ ದಿನಗಳಲ್ಲಿ ಬಿಲ್ಲುಗಳು ಸಕಾಲಕ್ಕೆ ಬರದೇ ದುಡಿಯುತ್ತಾ ಇದ್ದವರಿಗೆ ಸಂಬಳ ನೀಡಲು ದುಡ್ಡಿಲ್ಲದ ಸ್ಥಿತಿ. ಆಗ ಅವರ ಸಂಬಳ ಕೊಡಲೆಂದು ಮೈಮೇಲಿದ್ದ ಒಡವೆ ತೆಗೆದು ಮಾರಲು ಅಳುಕದವರು ಅವರು.

ಬದುಕಿಗೊಬ್ಬ ಸಂಗಾತಿ ದೊರೆತ ಹಾಗೇ, ಕನಸುಗಳನ್ನು ಹಂಚಿಕೊಂಡು, ಅದಕ್ಕಾಗಿ ಶ್ರಮಿಸಿ ನನಸಾಗಲು ಜೊತೆಗಾರರು ಮೂರ್ತಿ ಅವರಿಗೆ ದೊರಕಿದ್ದು ಅವರ ಹೋರಾಟದ ದಿನಗಳಲ್ಲಿ. ಶ್ರೀ ಸಿಸ್ಟಂಸ್‌ನ ಸರ್ಕಾರ ಅವಲಂಬನೆಯ ಒದ್ದಾಟ ಕಣ್ಣಾರೆ ಕಂಡಿದ್ದ ಅವರಿಗೆ, ಪಟ್ನಿ ಕಂಪ್ಯೂಟರ್ಸ್‌ನಲ್ಲಿ ಹೊಸದೊಂದು ಅನುಭವ. ಅಲ್ಲಿನ ಮಾಲೀಕರಾದ ಪಟ್ನಿ ಸಹೋದರರು ಜಾದು ಎಂಬಂತೆ ಉದ್ಯಮದಿಂದ ಸೃಷ್ಟಿಸುತ್ತಿದ್ದ ಸಂಪತ್ತು ಅವರ ಕಣ್ಣು ತೆರೆಸಿತು.

ಪಟ್ನಿ ಕಂಪ್ಯೂಟರ್ಸ್‌ನಲ್ಲಿ ಮೂರ್ತಿ ಸಾಫ್ಟ್‌ವೇರ್ ಡಿವಿಷನ್‌ನ ಮುಖ್ಯಸ್ಥರು. ಡೇಟಾ ಜನರಲ್ ಮಷೀನ್ಸ್‌ಗಾಗಿ ಪ್ರೋಗ್ರಾಮು ರೂಪಿಸುವಾಗ ಅವರು ಆಯ್ದು ಕಟ್ಟಿಕೊಂಡ ಆರು ಜನರ ತಂಡವೇ, ಮುಂದೆ ಅವರ ಜೊತೆ ಬಂದು ಇನ್‌ಫೋಸಿಸ್ ಹುಟ್ಟಿಗೂ ಕಾರಣವಾಯಿತು.

ಹಾಗೆ ಅವತ್ತು ಜೊತೆಯಾದವರೆಂದರೆ ನಂದನ ನೀಲೇಕನಿ, ಎಸ್. ಗೋಪಾಲಕೃಷ್ಣನ್, ಅಶೋಕ್ ಅರೋರಾ, ಎನ್.ಎಸ್. ರಾಘವನ್, ಕೆ. ದಿನೇಶ್ ಹಾಗೂ ಎಸ್. ಶಿಬುಲಾಲ್. ಎಲ್ಲ ಮಧ್ಯಮ ವರ್ಗದ ಕುಟುಂಬಗಳಿಂದ ಬಂದವರು. ಪ್ರಾಮಾಣಿಕ ದುಡಿಮೆಯಿಂದಲೇ ಮುಂದೆ ಬರಲು ಸಾಧ್ಯ ಎಂದು ನಂಬಿದವರು.

ಇವರೆಲ್ಲರನ್ನು ಕೂರಿಸಿಕೊಂಡು ಒಂದು ದಿನ ಮೂರ್ತಿ ತಮ್ಮ ಕನಸಿನ ಗಂಟು ಬಿಚ್ಚಿದರು. ಭಾರತೀಯ ಪ್ರತಿಭೆಗಳನ್ನು ಬಳಸಿಕೊಂಡು ಸಾಫ್ಟ್‌ವೇರ್ ರಫ್ತು ಮಾಡುವುದು. ಅದಕ್ಕಾಗಿ ಅವತ್ತು ಅಗತ್ಯ ಇದ್ದುದು ಹತ್ತು ಸಾವಿರ ರೂಪಾಯಿ. ಅದನ್ನು ಒಟ್ಟು ಮಾಡಲೂ ಏಳೂ ಜನ ಸಾಲ ಮಾಡಬೇಕಾಯಿತು. ಎಲ್ಲ ಹೆಚ್ಚು ಕಡಿಮೆ ತೊಡಗಿಸಿದ್ದ ಬಂಡವಾಳ ಅವರವರ ಪತ್ನಿಯರು ಕೊಟ್ಟ ಕೈಸಾಲವಾಗಿತ್ತು.

ಹೀಗೆ ಹುಟ್ಟಿಕೊಂಡಿತು 'ಇನ್‌ಫೋಸಿಸ್ ಟೆಕ್ನಾಲಜಿಸ್' ಎಂಬ ಬೃಹತ್ ಕನಸು.

**ಕನಸಾಯಿತು ನನಸು**

ಕನಸು ನನಸಾಗುವುದು ಕಷ್ಟ. ಅದಕ್ಕೆ ಪರಿಶ್ರಮ, ತ್ಯಾಗ ಏನೆಲ್ಲ ಬೇಕು. ಇನ್‌ಫೋಸಿಸ್ ಕಣ್ಣು ತೆರೆಯಲು ಯತ್ನಿಸುವಾಗ ಕಂಪೆನಿಗೊಂದು ಫೋನ್ ಇರಲಿಲ್ಲ. ತನ್ನದೇ ಆದೊಂದು ಆನ್‌ಲೈನ್ ಕಂಪ್ಯೂಟರ್ ಇರಲಿಲ್ಲ. ಅದೇ ಕಾರಣಕ್ಕೆ , ಯೋಜನೆಯೊಂದರಲ್ಲಿ ಜೊತೆಗಾರನಾಗಲು ಒಪ್ಪಿದ್ದ ಅಮೇರಿಕಾದ ಡೇಟಾ ಬೇಸಿಕ್ಸ್ ಹಿಂದೆ ಸರಿಯಿತು. ಆಗಿನ ಕಾಲಕ್ಕೆ ಒಂದು ಒಳ್ಳೆಯ ಕಂಪ್ಯೂಟರ್ ಆಮದು ಮಾಡಿಕೊಳ್ಳಲು ಹನ್ನೆರಡರಿಂದ ಇಪ್ಪತ್ನಾಲ್ಕು ತಿಂಗಳು ಸರ್ಕಾರಕ್ಕೆ ಅರ್ಜಿ ಸಲ್ಲಿಸಿ ಕಾಯುತ್ತಾ ಕೂರಬೇಕಿತ್ತು.

ರಾಜ್ಯದಲ್ಲಿ ಶಾಲೆಗೊಂದು ಲೈಬ್ರರಿ ಕೊಡುವುದು ಇನ್‌ಫೋಸಿಸ್ ಉದ್ದೇಶ. ಸುಮಾರು ಐವತ್ತು ಸಾವಿರ ಮೌಲ್ಯದ ಗ್ರಂಥಗಳನ್ನು ಸಂಸ್ಥೆ ಕೊಡ ಮಾಡುತ್ತದೆ. ಎಷ್ಟೋ ವೇಳೆ ಹೀಗೆ ಕೊಟ್ಟ ಗ್ರಂಥಾಲಯ ನೋಡಿಕೊಳ್ಳುವುದೂ ಆ ಶಾಲೆಗಳಿಗೆ ಸಾಧ್ಯವಾಗುವುದಿಲ್ಲ. ಅಂಥ ವೇಳೆ ಆ ಪುಸ್ತಕಗಳನ್ನು ಅರ್ಹ ಶಾಲೆಗೆ ವರ್ಗಾಯಿಸುವ ಕೆಲಸವನ್ನೂ ಇನ್‌ಫೋಸಿಸ್ ನಡೆಸುತ್ತದೆ.

ಈವರೆಗೆ 222 ಶಾಲೆಗಳಿಗೆ ಈ ರೀತಿಯ ಸಹಾಯ ಒದಗಿಸಿದೆ. 222ನೇ ಶಾಲೆ ಪಿರಿಯಾಪಟ್ಟಣ ತಾಲ್ಲೂಕಿನ ಹುಣಸವಾಡಿಯದು. ಅಲ್ಲಿಗೆ ನೀಡಿದ ಗ್ರಂಥಾಲಯವನ್ನು ಒಪ್ಪಿಸಿಕೊಂಡವರು ಆ ಭಾಗದವರೇ ಆದ ಸಂಸ್ಕೃತಿ ಸಚಿವೆ ರಾಣಿ ಸತೀಶ್.



ಪಯಣ ನಿರಂತರ

1981ರಲ್ಲಿ ಹುಟ್ಟಿದ 'ಇನ್‌ಫೋಸಿಸ್' ಎಂಬ ಬೃಹತ್ ಕನಸಿಗೆ ಕಣ್ಣು ತೆರೆಯಲು ಎಷ್ಟೊಂದು ಅಡ್ಡಿಗಳು. ಸಾಫ್ಟ್‌ವೇರ್ ರಫ್ತು ಯೋಜನೆಯ ವರದಿ ಹಿಡಿದು ಬ್ಯಾಂಕಿನಲ್ಲಿ ಸಾಲಕ್ಕೆ ಯತ್ನಿಸಿದರೆ ಅಲ್ಲಿಯೂ ಅದೇ ಗೋಳು. ಸಾಲ ಕೊಡಲು ಒಪ್ಪಿದ್ದ ಎ.ಎನ್.ಜಡ್ . ಗ್ರಿಂಡ್ಲೇಸ್ ಬ್ಯಾಂಕ್ ಕೊನೆಗಳಿಗೆಯಲ್ಲಿ ಹಿಂದೆ ಸರಿಯಿತು. ಬೇರೆ ವಿದೇಶೀ ಬ್ಯಾಂಕುಗಳದ್ದೂ ಇದೇ ಕತೆ.

ವಿಮಾನ ಪ್ರಯಾಣ ಒಂದರಲ್ಲಿ ಅಕಸ್ಮಾತ್ ಪರಿಚಯ ಆದವರು ಕೆ.ಎಸ್.ಎನ್. ಮೂರ್ತಿ. ಅವರು ಕರ್ನಾಟಕ ಇಂಡಸ್ಟ್ರಿಯಲ್ ಇನ್‌ವೆಸ್ಟ್‌ಮೆಂಟ್ ಡೆವಲಪ್‌ಮೆಂಟ್ ಕಾರ್ಪೋರೇಷನ್ ಪ್ರಮುಖರು. ಅವರು ನಾರಾಯಣಮೂರ್ತಿ ಅವರನ್ನು ಕೈಹಿಡಿದು ಬೆಂಗಳೂರಿಗೆ ಕರೆದು ತಂದರು. ಎರಡು ವಾರಗಳಲ್ಲಿ 52 ಲಕ್ಷ ರೂಪಾಯಿ ಸಾಲ ಒದಗಿಸಿದರು. ಆಗ ಇನ್‌ಫೋಸಿಸ್‌ಗೆ ಬಂತು ಮೊತ್ತ ಮೊದಲ ಕಂಪ್ಯೂಟರ್.

1994ರಲ್ಲಿ ಕಂಪೆನಿ ಶೇರು ಬಂಡವಾಳಕ್ಕೆ ಮುಂದಾದಾಗ, ಶೇರು ಮಾರುಕಟ್ಟೆಯಲ್ಲಿ ಬಾಜಿಯಲ್ಲಿ ತೊಡಗುವ ಜನ ನಕ್ಕು ಬಿಟ್ಟರು. ಸಾಫ್ಟ್‌ವೇರ್ ಕಂಪೆನಿಯೊಂದು ಹತ್ತು ರೂಪಾಯಿ ಶೇರನ್ನು 85 ರೂಪಾಯಿ ಪ್ರೀಮಿಯಂನಂತೆ ಮಾರುಕಟ್ಟೆಗೆ ತರುವಾಗ ಇವರೆಲ್ಲ ಬಿದ್ದುಬಿದ್ದು ನಕ್ಕರು. ಇವತ್ತು ಇನ್‌ಫೋಸಿಸ್ ಶೇರು ದರ ಭಾರತದಲ್ಲಿ ಹನ್ನೆರಡು ಸಾವಿರ ರೂಪಾಯಿಗೂ ಹೆಚ್ಚು. ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸರಿ ಸುಮಾರು ಒಂಬತ್ತು ಸಾವಿರ ರೂಪಾಯಿ ದರ.

**ಬದಲಾಗದ ಜನ, ಬಯಲಾದ ಕಾಳಜಿ**

ಮೊದಲೇ ಹೇಳಿದಂತೆ ಇನ್‌ಫೋಸಿಸ್ ಈಗ ಶ್ರೀಮಂತ ಸಂಸ್ಥೆ. ಅಲ್ಲಿ ದುಡಿಯುವ 2500 ಜನರಲ್ಲಿ 453 ಜನ ಕೋಟ್ಯಾಧೀಶರು. ಉಳಿದವರು ಲಕ್ಷಾಧೀಶರರು. ಅಲ್ಲಿನ ಸಾಮಾನ್ಯ ಉದ್ಯೋಗಿಯೊಬ್ಬ ಮನೆಗೆ ಪ್ರತಿ ವರ್ಷ ಕೊಂಡೊಯ್ಯುವ ಸಂಬಳದ ಮೊತ್ತ ಕನಿಷ್ಠ ಮೂರು ಲಕ್ಷ ರೂಪಾಯಿ.

ಇಲ್ಲಿ ಪ್ರತಿಭೆ ಇದೆ. ಅದು ಪಲಾಯನವಾಗಲು ಬಿಡಬಾರದು. ಅವರಿಗೆಲ್ಲ ಅಂತಾರಾಷ್ಟ್ರೀಯ ಮಟ್ಟದ ಸಂಬಳ, ಸವಲತ್ತು ಕಲ್ಪಿಸಿದರೆ ಖಂಡಿತ ಇಲ್ಲೇ ಉಳಿದು ದೇಶ ಕಟ್ಟುತ್ತಾರೆ ಎಂದು ನಂಬಿದವರು ಮೂರ್ತಿ. ಅದನ್ನೀಗ ಅವರು ಮಾಡಿ ತೋರಿಸಿದ್ದಾರೆ.

ಅವತ್ತು ಹತ್ತು ಸಾವಿರ ರೂಪಾಯಿ ಕಲೆ ಹಾಕಲು ಕೈ ಸಾಲ ಪಡೆದವರೀಗ ದೇಶದ ಅತ್ಯಂತ ಶ್ರೀಮಂತರ ಸಾಲಿನಲ್ಲಿ. ಆದರೂ ಅವರ ಜೀವನ ಶೈಲಿ ಬದಲಾಗಿಲ್ಲ. ಇವತ್ತಿಗೂ ಅವರೆಲ್ಲ ತಮ್ಮ ಪುಟಾಣಿ ಮಾರುತಿ ಕಾರಲ್ಲಿಯೇ ಕೆಲಸಕ್ಕೆ ಬರುತ್ತಾರೆ. ಮುಖ್ಯಸ್ಥರೆನಿಸಿಕೊಂಡಿರುವ ಮೂರ್ತಿ ಅವರಿಗೆ ಮಾತ್ರ ಒಪೆಲ್ ಆಸ್ಟ್ರಾ ಕಾರು, ಜೊತೆಗೊಬ್ಬ ಕೋಟ್ಯಾಧೀಶ ಡ್ರೈವರ್ ಕಣ್ಣನ್.



**ಮನೆಯಲ್ಲಿ ಪತ್ನಿ ಸುಧಾ ಹಾಗೂ ಮಗ ರೋಹನ್ ಜೊತೆ ನಾರಾಯಣ ಮೂರ್ತಿ**

ಮೂರ್ತಿಯವರ ಮನೆ ಬೆಂಗಳೂರಿನ ಜಯನಗರದಲ್ಲಿ. ಮಧ್ಯಮ ವರ್ಗದ ಬಡಾವಣೆಯ ಈ ಮನೆಯಲ್ಲಿ ಥಳಕು ಬಳುಕುಗಳಿಲ್ಲ. ಅವರವರ ಕೆಲಸ ಅವರೇ ಮಾಡಿಕೊಳ್ಳಬೇಕು. ಮನೆಗೆಲಸದವರೂ ಅಲ್ಲಿಲ್ಲ. ಮನೆ ತೀರಾ ಸರಳ. ಅಲ್ಲಿ ನೀವು ಕಾಣಬಹುದಾದ ದುಬಾರಿ ವಸ್ತುವೆಂದರೆ ಕೆಲವು ಎಲೆಕ್ಟ್ರಾನಿಕ್ ಗ್ಯಾಜೆಟ್‌ಗಳು ಹಾಗೂ ಪಾಶ್ಚಿಮಾತ್ಯ ಸಂಗೀತದ ಕಾಂಪ್ಯಾಕ್ಟ್ ಡಿಸ್ಕ್‌ಗಳು ಮಾತ್ರ.

**ಕೆರೆಯ ನೀರು ಕೆರೆಗೆ**

ನಡೆದ ಹಾದಿ, ಕಷ್ಟದ ದಿನ ಮರೆಯಬಾರದು. ಇದು ಮೂರ್ತಿ ಅವರಿಗೆ ಚೆನ್ನಾಗಿ ನೆನಪಿದೆ. ತಮ್ಮ ಸಂಸ್ಥೆ ಗಳಿಸಿದ್ದರಲ್ಲಿ ಒಂದು ಪಾಲು ಜನಹಿತರ ಕೆಲಸಕ್ಕೆ ಈಗ ಹಾಗೆ ಅವರು ವೈಯಕ್ತಿಕವಾಗಿ ತೆಗೆದಿಟ್ಟ ಹಣವೇ ಇಪ್ಪತ್ತು ಕೋಟಿ ರೂಪಾಯಿ. ಅದು ಅವರ ಸಂಪಾದನೆಯ ಶೇಕಡಾ ಒಂದು ಭಾಗ. ಇದೇ ಹಾದಿ ಉಳಿದ ಆರು ಜನರೂ ಅನುಸರಿಸುತ್ತಾರೆ. ಈ ರೀತಿ ಒದಗಿ ಬಂದ ಹಣ 'ಇನ್‌ಫೋಸಿಸ್' ಎಂಡೋಮೆಂಟ್ ಫಂಡ್'ಗೆ. ಅದನ್ನು ನಿರ್ವಹಿಸುವ ಹೊಣೆ ಸುಧಾಮೂರ್ತಿ ಅವರದ್ದು. ಕಷ್ಟದಲ್ಲಿರುವ ಜನಕ್ಕೆ ನೆರವಾಗಲು ಈ ನಿಧಿ. ಶಿಕ್ಷಣಕ್ಕೆ ಆದ್ಯತೆ. ಹಾಗೆಂದೇ ಹಲವೆಡೆ ಶಾಲೆ, ಕಾಲೇಜುಗಳಲ್ಲಿ ಕಲಿಯಲು ಈ ಹಣದ ನೆರವು. ಕ್ಯಾನ್ಸರ್‌ನಂಥ ಕಾಯಿಲೆಯಿಂದ ನರಳುತ್ತಾ, ದುಬಾರಿ ಚಿಕಿತ್ಸೆ ಪಡೆಯಲಾರದವರಿಗೆ ನೆರವು. ತೀರಾ ಬಡತನದಲ್ಲಿ ಇರುವ ಮಹಿಳೆಯರಿಗೆ ತರಬೇತಿ, ವೃತ್ತಿ ದೊರಕಿಸಿಕೊಡಲು ಸುಧಾಮೂರ್ತಿ ಕಾರ್ಯಕ್ರಮ ಹಮ್ಮಿಕೊಂಡಿದ್ದಾರೆ.

ಅರ್ಹರನ್ನು ಗುರುತಿಸುವ ಕಾರ್ಯಕ್ಕೇ ಹೆಚ್ಚು ಸಮಯ ಬೇಕಾಗುತ್ತದೆ. ಆನಂತರ ಉಳಿದದ್ದೆಲ್ಲ ಸಲೀಸು.

ಇಂಥ ಎಲ್ಲ ಕೆಲಸಗಳ ಹಿಂದಿನ ಪ್ರೇರಕ ಶಕ್ತಿ ನಾರಾಯಣ ಮೂರ್ತಿ. ■

## ರಾಸಾಯನಿಕದ ಮಳೆ

ಯುರೋಪಿನ ಬಹುಪಾಲು ಕಡೆ ಮಳೆ ನೀರಲ್ಲಿ ಕೀಟನಾಶಕಗಳು ಕಂಡು ಬಂದಿದ್ದು, ಇದು ಕುಡಿಯಲು ಯೋಗ್ಯವಲ್ಲ ಎಂದು ಸ್ವಿಸ್ ಸಂಶೋಧಕರು ತಿಳಿಸಿದ್ದಾರೆ.

ವ್ಯಾಪಕವಾಗಿ ಅಲ್ಲೆಲ್ಲ ಬೆಳೆ ಸಂರಕ್ಷಣೆಗಾಗಿ ಕೀಟನಾಶಕ ಬಳಸಲಾಗುತ್ತಿದೆ. ಬೆಳೆಗಳಿಗೆ ಸಿಂಪಡಿಸಿದ ಕೀಟನಾಶಕ ಆವಿಯಾಗಿ ವಾಯು ಮಂಡಲದಲ್ಲಿ ಸೇರುತ್ತಿದೆ. ಮಳೆ ಬಿದ್ದಾಗ ಅದು ನೀರಲ್ಲಿ ಬೆರೆತು ಮತ್ತೆ ಭೂಮಿಗೆ ಇಳಿಯುತ್ತದೆ. ಸಂಶೋಧಕ ಮುಲ್ಲರ್ ಅವರು 400 ಮಳೆ ನೀರಿನ ಮಾದರಿ ಸಂಗ್ರಹಿಸಿ ಪರಿಶೀಲಿಸಿದಾಗ, ಅವುಗಳಲ್ಲಿ ಜನಪ್ರಿಯ ಕೀಟನಾಶಕ ಡಿನಿಟ್ರೊಫೀನಾಲ್ ಅಂಶ ಲೀಟರ್‌ಗೆ 400 ನ್ಯಾನೋಗ್ರಾಂಗಳಷ್ಟಿತ್ತು ಎಂದು ಹೇಳಿದ್ದಾರೆ.

## ಪೌಡರ್ ಹಾಕುತ್ತೀರಾ?

ಸಾಮಾನ್ಯವಾಗಿ ಸ್ನಾನವಾದ ಮೇಲೆ ಮೈಗೆ ಪೌಡರ್ ಹಾಕಿಕೊಳ್ಳುವುದು ಅಭ್ಯಾಸ. ಹೀಗೆ ಪೌಡರ್ ಚಿಮುಕಿಸಿಕೊಳ್ಳುವಾಗ, ಅದು ಗಾಳಿಯಲ್ಲಿ ಬೆರೆತು ಉಸಿರಾಡುವಾಗ ಶ್ವಾಸಕೋಶ ಸೇರುತ್ತದೆ. ಕೆಲವು ಕಾಲ ಹೀಗೆ ಉಸಿರಲ್ಲಿ ಪೌಡರ್ ಸೇವಿಸಿದರೆ ಶ್ವಾಸಕೋಶಗಳು ಹಾನಿಗೀಡಾಗುತ್ತವೆ. ಅದರಲ್ಲೂ ಬ್ರಾಂಕೈಟಿಸ್, ಅಸ್ತಮಾ ರೋಗಿಗಳು ಹಾಗೂ ಸಿಗರೇಟು, ಬೀಡಿ ಸೇದುವವರು ಈ ಬಗ್ಗೆ ಹುಷಾರಾಗಿರಬೇಕು ಎನ್ನುತ್ತದೆ ವೈದ್ಯಕೀಯ ಪತ್ರಿಕೆ 'ಯುವರ್ ಓನ್ ಡಾಕ್ಟರ್'.

ಎಳೆಯ ಮಕ್ಕಳಿಗೆ ಪೌಡರ್ ಹಾಕುವಾಗಲೂ ಅಷ್ಟೇ. ಎಚ್ಚರವಹಿಸಬೇಕು. ಡಬ್ಬಿಯಿಂದ ನೇರವಾಗಿ ಮಗುವಿನ ಮೈಗೆ ಪೌಡರ್ ಸಿಂಪಡಿಸುವ ಬದಲು, ಅಂಗೈಗೆ ಪೌಡರ್ ಹಾಕಿಕೊಂಡು, ಅದನ್ನು ಮೃದುವಾಗಿ ಮಕ್ಕಳ ಮೈಗೆ ತೊಡೆಯಬೇಕು. ಇದರಿಂದ ಗಾಳಿಯಲ್ಲಿ ಪೌಡರ್ ಕಣಗಳು ಬೆರೆಯುವುದು ಕಡಿಮೆ ಆಗುತ್ತದೆ.

# ಮನೆ! ಮನೆ!! ಮನೆ!!!




## ಯಾರಿಗೆ ಬೇಕಿಲ್ಲ ಮನೆ?

ಹೌದು 'ಮನೆ' ಎಲ್ಲರ ತುರ್ತು ಅವಶ್ಯಕತೆಗಳಲ್ಲೊಂದು.

## ಆದರೆ....

ಮನೆಯ ನಿರ್ಮಾಣದ ಬಗೆಗಿನ ಮಾಹಿತಿಯ ಕೊರತೆ ಮನೆ ಕಟ್ಟಿಸುವ ಮಾಲೀಕರಿಗಿದೆ.

## ಏನಿದು ಮಾಹಿತಿ?

ಅದಕ್ಕಾಗಿ ಮನೆ ನಿರ್ಮಾಣದ ಹಿಂದೆ ಇರುವ ನೈಜ ವಸ್ತು-ಸ್ಥಿತಿಯನ್ನು ತೆರೆದಿಡುವ ಒಂದು ವಿನೂತನ ಪ್ರಯತ್ನಕ್ಕಾಗಿ ನಿಮ್ಮ 'ಬಿಸಿಲ ಬದುಕು' ಇದೀಗ ಮುಂದಾಗಿದೆ.







## ಅದಕ್ಕಾಗಿ ಮನೆ ನಿರ್ಮಾಣಕ್ಕೆ....

- ನಿವೇಶನ ಆಯ್ಕೆ
- ಬ್ಯಾಂಕ್ ಸಾಲ ಸೌಲಭ್ಯ
- ಮನೆ ಅಂದ ಹೆಚ್ಚಿಸುವ ಸರಳ ಉಪಾಯಗಳು
- ನೋಂದಾವಣಿ
- ಕಂಟ್ರಾಕ್ಟರ್ ಮೂಲಕ ಮನೆ ನಿರ್ಮಾಣ ಹೇಗೆ?
- ಸಾಮಗ್ರಿಗಳ ಹಾಗೂ ಕಟ್ಟಡದ ಸರಳ ಗುಣಪರೀಕ್ಷೆ ಹೇಗೆ?
- ಕಡಿಮೆ ವೆಚ್ಚದ ಮನೆ ನಿರ್ಮಾಣ.

**.... ಹೀಗೆ ಇನ್ನು ಹತ್ತಾರು ವಿಷಯಗಳ ಸಮಗ್ರ ಮಾಹಿತಿ– ಆಕರ್ಷಕ ಚಿತ್ರಗಳ ಸಮೇತ! ಇದಲ್ಲದೆ ಸಾಮಾನ್ಯರು ತಿಳಿದುಕೊಂಡಿರಬೇಕಾದ ತಾಂತ್ರಿಕ ವಿಷಯಗಳ ಸುಲಭ ವಿಶ್ಲೇಷಣೆಯ ಲೇಖನಮಾಲೆ.**

## ಜೊತೆಗೆ....

ಮನೆ– ಮನವರಿಕೆ ಬಿಸಿಲ ಬದುಕು ಓದುಗರಿಗಾಗಿ ವಿಶಿಷ್ಟ ಲೇಖನ ಮಾಲೆಯ ಜೊತೆ- ಜೊತೆಗೆ ಮನೆ ನಿರ್ಮಾಣದ ಬಗೆಗಿನ ಸಂದೇಹ-ಸಮಸ್ಯೆಗಳಿಗೆ ಆಯಾ ವಿಭಾಗದ ಪರಿಣತರಿಂದ ಪರಿಹಾರ. ಯಾಕಿನ್ನು ತಡ? 'ಸ್ವಂತ ಮನೆ' ಮಾಡುವ ಬಗೆಗಿನ ನಿಮ್ಮ ಅನುಮಾನ ನಿಮ್ಮ ಪ್ರಶ್ನೆಗಳನ್ನು ಈ ಕೆಳಗಿನ ವಿಳಾಸಕ್ಕೆ ಕೂಡಲೇ ಬರೆಯಿರಿ:

'ಬದುಕು' ಮಾಸಪತ್ರಿಕೆ, ಅಂಕುರ ಪ್ರಕಾಶನ, ಅಂಚೆ ಪೆಟ್ಟಿಗೆ 7951, ಬಸವೇಶ್ವರನ ನಗರ, ಬೆಂಗಳೂರು-79.

## ಪ್ರಕಟಣೆ ದಿನಾಂಕ ನಿರೀಕ್ಷಿಸಿ!